# ವೀರಶೈವ
# ಸಾಹಿತ್ಯ ಮತ್ತು ಇತಿಹಾಸ

(ಭಾಗ-೧)



ಕರಣ ಸಾಹಿತ್ಯ ಗ್ರಂಥಮಾಲೆ.

ವೀರಶೈವ

# ಸಾಹಿತ್ಯ ಮತ್ತು ಇತಿಹಾಸ

[ಭಾಗ–೧]



ಲೇಖಕರು:

ಆಸ್ಥಾನ ವಿದ್ವಾನ್, ಪಂಡಿತ ರತ್ನಂ, ಕೀರ್ತನಾಚಾರ್ಯ, ಕರ್ಣಾಟಕ ವಿಭೂಷಣ
ಬ. ಶಿವಮೂರ್ತಿಶಾಸ್ತ್ರಿಗಳು



ಪ್ರಕಾಶಕರು :
ಶರಣ ಸಾಹಿತ್ಯ ಕಾರ್ಯಾಲಯ
೧೮೦, ರಂಗಸ್ವಾಮಿಗುಡಿ ಬೀದಿ, (ಬಳೇಪೇಟೆ)
ಬೆಂಗಳೂರು–2.

ಪ್ರಥಮ ಮುದ್ರಣ (೧೦೦೦ ಪ್ರತಿಗಳು)
೧೯೫೩

ದ್ವಿತೀಯ ಮುದ್ರಣ (೧೦೦೦ ಪ್ರತಿಗಳು)
೧೯೬೨



★



ಬೆಲೆ : ರೂ. ೩-೦-೦



★

ಮುದ್ರಕರು :
ಸ್ವತಂತ್ರ ಕರ್ಣಾಟಕ ಮುದ್ರಣಾಲಯ
೧೮೦, ರಂಗಸ್ವಾಮಿಗುಡಿ ಬೀದಿ (ಬಳೇಪೇಟೆ)
ಬೆಂಗಳೂರು-2.

# ಬಿನ್ನಹ

ಸುಮಾರು ನಲವತ್ತು ವರ್ಷಗಳ ಕಾಲದಿಂದ ನಾವು ಬೇರೆಬೇರೆ ಸಂದರ್ಭ ಸನ್ನಿವೇಶಗಳಲ್ಲಿ ಹೇಳಿದ ಭಾಷಣಗಳು, ಬರೆದ ಲೇಖನಗಳು, ನಡೆಸಿದ ಸಂಶೋಧನೆಗಳು ಇತ್ಯಾದಿಗಳನ್ನೆಲ್ಲ ಆಯಾ ಸಂದರ್ಭಗಳಲ್ಲಿ, ಶಿವಾನುಭವ, ಜಯ ಕರ್ಣಾಟಕ, ಸ್ವತಂತ್ರ ಕರ್ಣಾಟಕ, ಶರಣ ಸಂದೇಶ, ಶರಣ ಸಾಹಿತ್ಯ ಮೊದಲಾದ ಪತ್ರಿಕೆಗಳಲ್ಲಿ ಪ್ರಕಟಿಸಿರುತ್ತೇವೆ. ಈ ಲೇಖನ ಭಾಷಣಗಳನ್ನು ಓದಿದ ಸಹೃದಯರಾದ ಮಹನೀಯರು ಇವನ್ನೆಲ್ಲಾ ಒಂದೆಡೆಗೆ ಕೂಡಿಸಿ ಗ್ರಂಥರೂಪವಾಗಿ ಸಂಗ್ರಹಿಸಿ ಪ್ರಕಟಿಸುವುದರಿಂದ ಸಾಹಿತ್ಯಕ್ಕೂ ಸಮಾಜಕ್ಕೂ ತುಂಬಾ ಲಾಭವುಂಟೆಂದು ಅಭಿಪ್ರಾಯಪಟ್ಟ ಪ್ರಕಾರ ಈ ಗ್ರಂಥವನ್ನು ನಾವು ಪ್ರಕಟಿಸಿರುತ್ತೇವೆ.

ವೀರಶೈವ ಸಾಹಿತ್ಯ ಮತ್ತು ಇತಿಹಾಸ ಎಂಬ ಈ ಗ್ರಂಥದಲ್ಲಿ ಮುಖ್ಯವಾಗಿ ಮೂರುಭಾಗಗಳಿವೆ.

೧. ವೀರಶೈವ ದರ್ಶನ
೨. ವೀರಶೈವ ಸಾಹಿತ್ಯ
೩. ವೀರಶೈವ ಇತಿಹಾಸ

ಈ ಮೂರು ವಿಷಯಗಳಿಗೆ ಸಂಬಂಧಪಟ್ಟ ಲೇಖನ ಭಾಷಣಗಳನ್ನು ಆಯಾ ವಿಭಾಗಗಳಲ್ಲಿ ಸೇರಿಸಿ ಪ್ರಕಟಿಸಿರುತ್ತೇವೆ. ಪ್ರಕೃತ ಗ್ರಂಥದಲ್ಲಿ ಸಾಹಿತ್ಯ ವಿಚಾರಗಳು ಕೆಲಮಟ್ಟಿಗೆ ಬಂದಿದ್ದರೂ ಮುಖ್ಯವಾಗಿ ಧರ್ಮ ಮತ್ತು ದರ್ಶನ ವಿಚಾರಗಳು ಹೆಚ್ಚಾಗಿ ಇದರಲ್ಲಿ ಪ್ರಸ್ತಾಪಿಸಲ್ಪಟ್ಟಿರುವುದರಿಂದ ಇದನ್ನು ದರ್ಶನ ವಿಭಾಗ ಎಂದು ಕರೆಯಲಾಗಿದೆ.

ಈ ಗ್ರಂಥ ಪ್ರಕಟಣೆಯಲ್ಲಿ ನಮ್ಮ ಮುಖ್ಯವಾದ ಉದ್ದೇಶವು, ವೀರಶೈವ ಸಾಹಿತ್ಯ ಸಂಸ್ಕೃತಿಗಳನ್ನು ತಕ್ಕಮಟ್ಟಿಗೆ ತಿಳಿಯಬೇಕೆನ್ನುವ ಜನಸಾಮಾನ್ಯರು

# ಸಮರ್ಪಣ

ಮಹಾಮಹಿಮರೂ ಶಿವಯೋಗ ಸಾರ್ವಭೌಮರೂ

ಚಿತ್ರದುರ್ಗ ಚಿನ್ಮೂಲಾದ್ರಿ ಶೂನ್ಯಸಿಂಹಾಸನಾಧೀಶ್ವರರೂ ಆದ

## ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು
## ಜಯವಿಭವ ಮುರುಘ ರಾಜೇಂದ್ರ
## ಮಹಾಸ್ವಾಮಿಗಳವರ

ದಿವ್ಯಸನ್ನಿಧಾನಂಗಳಿಗೆ ಇದು ಭಕ್ತಿಕಾಣಿಕೆ.

ದಿನಾಂಕ ೫-೧-೧೯೬೨ ಇಂತು
ಬೆಂಗಳೂರು-೨. ಬಿ. ಶಿವಮೂರ್ತಿ ಶಾಸ್ತ್ರೀ
(ಗ್ರಂಥಕರ್ತೃ)

ಶರಣ ಸಾಹಿತ್ಯ ಗ್ರಂಥಮಾಲೆಯ ಮಹಾಪೋಷಕರು



ಶ್ರೀ ಚಿನ್ಮೂಲಾದ್ರಿ ಶೂನ್ಯಸಿಂಹಾಸನಾಧೀಶ್ವರರಾದ
ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು
ಜಯವಿಭವ ಮುರುಘರಾಜೇಂದ್ರ ಮಹಾಸ್ವಾಮಿಗಳವರು
ಬೃಹನ್ಮಠ ಮಹಾಸಂಸ್ಥಾನ, ಚಿತ್ರದುರ್ಗ

# ವಿಷಯ ಸೂಚಿಕೆ



## ಚಿತ್ರಗಳು

ಶರಣ ಸಾಹಿತ್ಯ ಗ್ರಂಥಮಾಲೆಯ ಮಹಾ ಪೋಷಕರು



ಕರ್ಣಾಟಕ ರತ್ನಸಿಂಹಾಸನಾಧೀಶ್ವರರೂ, ವಿಶಾಲ ಮೈಸೂರು ರಾಜ್ಯಪಾಲರೂ
ಮೈಸೂರು ಶ್ರೀಮನ್ಮಹಾರಾಜರವರೂ ಆದ

**ಶ್ರೀ ಶ್ರೀ ಜಯಚಾಮರಾಜ ಒಡೆಯರ್**



**ಮಹಾಸ್ವಾಮಿಯವರು**

# ವೀರಶೈವ ವಾಙ್ಮಯ ವಿಸ್ತಾರ

ವೀರಶೈವ ಸಮಾಜವು ಹಲವು ಶತಮಾನಗಳಿಂದ ಅಂದರೆ ಸಾವಿರಕ್ಕೆ ಕಡಿಮೆಯಲ್ಲದಷ್ಟು ಸಂವತ್ಸರಗಳಿಂದ ವಿಶಾಲ ಭಾರತದಲ್ಲಿ-ಅವರಲ್ಲಿಯೂ ದಕ್ಷಿಣ ಭರತಖಂಡದಲ್ಲಿ ತಲೆಯೆತ್ತಿ ನಿಂತಿದೆ. ಈ ಸಮಾಜವು ತನ್ನದೇ ಆದ ಸಾಹಿತ್ಯ, ಸಂಸ್ಕೃತಿ, ಪರಂಪರೆ ಇವೆಲ್ಲಕ್ಕೂ ಮಿಗಿಲಾದ ತತ್ವಜ್ಞಾನ ಇವುಗಳಿಂದ ಕೂಡಿ ತೇಜೋಮಯವೆನಿಸಿದೆ. ಸಾವಿರಾರು ವರ್ಷಗಳಿಂದ ವೀರಶೈವ ವಿದ್ವಾಂಸರು, ಕನ್ನಡ, ತೆಲುಗು, ತಮಿಳು ಮೊದಲಾದ ದೇಶಭಾಷೆಗಳಲ್ಲಿಯೂ, ಪ್ರಾಚೀನ ಭಾರತದ ರಾಷ್ಟ್ರೀಯ ಭಾಷೆಯಾದ ಸಂಸ್ಕೃತದಲ್ಲಿಯೂ ಮಹತ್ವದ ಕಾವ್ಯಗಳನ್ನೂ, ಶಾಸ್ತ್ರಗ್ರಂಥಗಳನ್ನೂ ಬರೆದು ಲೋಕವಿಖ್ಯಾತರೆನಿಸಿದ್ದಾರೆ. ವೀರಶೈವ ತತ್ವಜ್ಞಾನವೂ ಪರಂಪರೆಯೂ ಹೇಗೆ ಕ್ರಾಂತಿಕಾರಕ ವೆನಿಸಿವೆಯೋ, ಹಾಗೆಯೇ ವೀರಶೈವ ವಾಙ್ಮಯವೂ ಕ್ರಾಂತಿಕಾರಕವೆನಿಸಿದೆ. ಇಂತಹ ವಾಙ್ಮಯದ ವೈಶಾಲ್ಯ, ವೈಶಿಷ್ಟ್ಯ, ಸ್ವಾರಸ್ಯ, ಪ್ರಯೋಜನ ಮೊದಲಾದುವುಗಳನ್ನು ತಿಳಿಸಲು ಪ್ರಯತ್ನಿಸುವುದು ಹಾಗೂ ತಿಳಿಯಲು ಪ್ರಚೋದನೆಯನ್ನುಂಟುಮಾಡುವುದು ಈ ಲೇಖನದ ಮುಖ್ಯೋದ್ದೇಶವಾಗಿದೆ. A.

ಸಂಸ್ಕೃತದಲ್ಲಿ "ಸಹಿತನಾಂ ಭಾವಃ ಸಾಹಿತ್ಯಮ್" ಎಂದು ಸಾಹಿತ್ಯದ ಅರ್ಥವಿದೆ. 'ಸವಿಯಾದ ಮಾತುಗಳು' ಎಂದು ಕನ್ನಡದಲ್ಲಿ ಅರ್ಥ. ಹೃದಯವನ್ನು ಅರಳಿಸುವ, ಮನಸ್ಸನ್ನು ಕರಗಿಸುವ, ಕಿವಿಗೆ ಇಂಪೆನಿಸುವ, ಜೀವಸಿಗೆ ಕಂಪೆನಿಸುವ ಮಾತುಗಳು ಸವಿಯಾದ ಮಾತುಗಳು ಎನಿಸಿಕೊಳ್ಳುತ್ತವೆ. 'ಛಂದೋಬದ್ಧವಾದ ಶಬ್ದಗಳು ಸಾಹಿತ್ಯ' ಎಂದು ಒಬ್ಬ ಗ್ರಂಥಕಾರನು ಹೇಳುತ್ತಾನೆ. 'ವಾಕ್ಯಂರಸಾತ್ಮಕಂಕಾವ್ಯಂ'ಎಂದು ಇನ್ನೊಬ್ಬ ಲಾಕ್ಷಣಿಕನು ಹೇಳುತ್ತಾನೆ. ಆ ಮಾತುಗಳು ಕಲಾತ್ಮಕವಾಗಿ ಹೃದಯಂಗಮವಾಗಿ ಆನಂದ

---

A. ಧಾರವಾಡಜಿಲ್ಲಾ ಹಿರೇಕೆರೂರಲ್ಲಿ ತಾ॥ ೨೬-೧-೪೫ ರಲ್ಲಿ ನಡೆದ ಅಖಿಲ ಭಾರತ ವೀರಶೈವ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಮಾಡಿದ ಭಾಷಣ.

ದಾಯಕವಾಗಿ ಕೇಳುವವರ ಓದುವವರ ಮನಸ್ಸಿನ ಮೇಲೆ ಉತ್ತಮ ಪರಿಣಾಮವನ್ನುಂಟುಮಾಡತಕ್ಕವುಗಳಾಗಿ ಇರಬೇಕೆಂಬುದು ಸುಸ್ಪಷ್ಟವಾಗಿಯೇ ಇದೆ.

'ವಾಙ್ಮಯ' ಎಂಬ ಶಬ್ದವು 'ಸಾಹಿತ್ಯ' ಎಂಬ ಶಬ್ದಕ್ಕಿಂದ ಕೊಂಚ ವಿಸ್ತಾರವಾದ ಅರ್ಥವ್ಯಾಪ್ತಿಯನ್ನು ಉಳ್ಳುದಾಗಿದೆ. ವಾಙ್ಮಯ ಪ್ರಪಂಚದಲ್ಲಿ ಸಾಹಿತ್ಯವು ಅಡಗಿದೆ. ಬುದ್ಧಿಯನ್ನು ವಿಕಾಸಮಾಡುವುದು ಶಾಸ್ತ್ರದ ಗುಣ. ಆನಂದವನ್ನು ಉಂಟುಮಾಡುವುದು ಕಾವ್ಯದ ಗುಣ. ಹೀಗೆ ಆನಂದದಾಯಕ ಮತ್ತು ವಿಚಾರ ಪ್ರಚೋದಕ ಶಬ್ದರಾಶಿಗಳಿಂದ ಕೂಡಿದುದನ್ನು 'ವಾಙ್ಮಯ' ಎಂದು ವಿದ್ವಾಂಸರು ಕರೆಯುತ್ತಾರೆ. ಪ್ರಕೃತ ಲೇಖನದಲ್ಲಿ ವೀರಶೈವ ಕವಿಗಳ ಅಂದರೆ ಕಾವ್ಯಕರ್ತೃಗಳ ವಿಷಯವನ್ನೇ ಅಲ್ಲದೆ, ವೀರಶೈವ ದಾರ್ಶನಿಕರ, ಧರ್ಮಗ್ರಂಥಕಾರರ ಬಗೆಗೂ ಕೆಲವು ಮಾತುಗಳನ್ನು ಹೇಳಬೇಕೆಂದಿರುವುದರಿಂದ ಈ ಲೇಖನಕ್ಕೆ 'ವೀರಶೈವ ವಾಙ್ಮಯ ವಿಸ್ತಾರ' ಎಂಬ ಹೆಸರು ಸಮಂಜಸವೆಂದು ಭಾವಿಸಲಾಗಿದೆ.

ಮನುಷ್ಯಪ್ರಾಣಿಯು ಸೃಷ್ಟಿಯ ಇತರ ಪ್ರಾಣಿಗಳಿಗಿಂತ ಶ್ರೇಷ್ಠನೆನಿಸಿಕೊಳ್ಳಲು ಅವನಿಗಿರುವ ಮುಖ್ಯವಾದ ಹಿರಿಮೆಯ ಗುಣಗಳು ಮೂರು. ೧. ಚಿಂತಿಸುವಿಕೆ ೨. ಮಾತನಾಡುವಿಕೆ, ೩. ನಗುವಿಕೆ (ಆನಂದ ಪಡುವಿಕೆ) ಈ ಮೂರು ಉತ್ಕೃಷ್ಟ ಗುಣಗಳಿಲ್ಲದಿದ್ದರೆ ಮನುಷ್ಯ ಯುಗಯುಗಾಂತರಗಳಿಂದಲೂ ಪಶುಪಕ್ಷಿಗಳು ಏಕಪ್ರಕಾರವಾಗಿ ಯಥಾಜಾತವೆನಿಸಿರುವಂತೆ ಇವನೂ ಇರಬೇಕಾಗಿದ್ದಿತು. ಮನುಷ್ಯನನ್ನು ದಿನೇದಿನೇ ನಾಗರಿಕನನ್ನಾಗಿ ಮಾಡುತ್ತಿರುವುದು ಅವನ ಮಾತನಾಡುವಿಕೆಯ ಪ್ರಭಾವ. ಹಿಂದಿನವರು, ಸಮಕಾಲೀನರಿಗೆ ಮಾತುಗಳಿಂದಲೂ, ಮುಂದಿನವರಿಗೆ ಗ್ರಂಥಗಳಿಂದಲೂ ತಮ್ಮ ಅನುಭವವನ್ನು ಹೇಳಲು ಅವಕಾಶವಿರುವುದೇ ಮಾನವನ ವಿಚಾರ ಪ್ರಗತಿಗೆ ಮುಖ್ಯಕಾರಣವಾಗಿದೆ. ಆದುದರಿಂದ ಭಗವದನುಗ್ರಹದಿಂದ ತನಗೆ ಮಾತ್ರ ಪ್ರಾಪ್ತವಾದ ಈ ವಿಶಿಷ್ಟವಾದ ಗುಣದ ಪ್ರಯೋಜನವನ್ನು ಅರಿತು ಅದನ್ನು ಸಾರ್ಥಕ ಮಾಡಿಕೊಳ್ಳುವುದು ಪ್ರತಿಯೊಬ್ಬ ಮಾನವನ ಕರ್ತವ್ಯ. ಶಬ್ದಗಳ ಮೂಲ ಶಿವನ ಡಮರುಗದಿಂದ ಹುಟ್ಟಿತೆಂಬುದು

ಪಾಣಿನಿಯ ಮತವು. ಆದು ನಿಮಿತ್ತವೇ ವಾಙ್ಮಯವು ಶಿವಾಂಶವೆನಿಸು ತ್ತದೆ ಪ್ರಭುದೇವರು 'ಮಾತೆಂಬುದು ಜ್ಯೋತಿರ್ಲಿಂಗ' ಎಂದು ಹೇಳಿದ್ದಾರೆ.

ಸಾಹಿತ್ಯವು ಜನಜೀವನದ ಪ್ರತಿಬಿಂಬ. ವಾಙ್ಮಯವು ಜನಾಂಗಗಳ ಜ್ಞಾನಾನುಭವದ ಭಂಡಾರ. ಕಾವ್ಯಗಳು ಆದಂದರಸದ ಬುಗ್ಗೆಗಳು. ಶಾಸ್ತ್ರ ಗಳು ಜನರ ಕೈದೀವಿಗೆಗಳು. ವಾಙ್ಮಯ ಸಂಪತ್ತು ನಾಗರಿಕ ಜನರ ಜೀವನ ಸರ್ವಸ್ವ ಎಂಬ ಪ್ರಾಜ್ಞರ ಮಾತುಗಳನ್ನು ಒಪ್ಪಿಕೊಳ್ಳುವವರೆಲ್ಲರೂ ತಮ್ಮ ತಮ್ಮ ಸಾಹಿತ್ಯ, ಸಂಸ್ಕೃತಿ, ಲಲಿತಕಲೆ ಮತ್ತು ಭಾಷೆ ಮೊದಲಾದುವು ಗಳನ್ನು ಉಳಿಸಿಕೊಳ್ಳಲು ಎಲ್ಲ ವಿಧದಿಂದಲೂ ಪ್ರಯತ್ನಿಸುವುದು ಅವಶ್ಯ ಮತ್ತು ಅನಿವಾರ್ಯ. ಒಂದು ಜನಾಂಗದ ನಾಗರಿಕತೆಯನ್ನೂ, ಗುಟ್ಟುಗುರಿ ಗಳನ್ನೂ, ಅರಿಯಲು ಅವರ ವಾಙ್ಮಯವು ಹೆಚ್ಚು ಸಹಾಯವಾದುದು ಎಂದು ಜಾಣರು ಹೇಳುತ್ತಾರೆ. 'Literarure is the golden mirror of the contemporory society' ಅಂದರೆ 'ಸಾಹಿ ತ್ಯವು ಸಮಕಾಲೀನ ಜನರ ರನ್ನಗನ್ನಡಿ' ಎಂದು ಸ್ವಾಮಿ ವಿವೇಕಾನಂದರು ಹೇಳಿರುವ ಮಾತನ್ನು ನಾವಿಲ್ಲಿ ಸಹೃದಯರ ಗಮನಕ್ಕೆ ತರಲು ಇಚ್ಛಿಸ ಬಯಸುತ್ತೇವೆ.

ಭಾರತೀಯರು ಪ್ರಾಚೀನ ಕಾಲದಲ್ಲಿ ಅತ್ಯಂತ ಪ್ರಖ್ಯಾತಿಯನ್ನು ಪಡೆ ದಿದ್ದರೆಂಬುದಕ್ಕೆ ಅವರ ಸಂಸ್ಕೃತ ವಾಙ್ಮಯ ಭಂಡಾರವು ಅಂದಿಗೂ ಇಂದಿಗೂ ಎಂದೆಂದಿಗೂ ಲೋಕಮಾನ್ಯವೆನಿಸಿರುವುದು ನಿದರ್ಶನವಾಗಿದೆ. ಇಂದು ಆಂಗ್ಲೇಯರು ವಿಶ್ವದಲ್ಲಿ ಅಗ್ರಗಣ್ಯ ಜನಾಂಗವೆನಿಸಿರುವರೆಂಬುದಕ್ಕೆ ಅವರ ತಾಯಿನುಡಿಯು (English Language) ಈಗ ಪ್ರಪಂಚದ ಪ್ರಮುಖ ಭಾಷೆಯೆನಿಸಿರುವುದು ನಿದರ್ಶನವಾಗಿದೆ. ಆಧುನಿಕ ಯುಗದಲ್ಲಿ ಭಾರತೀಯರಲ್ಲಿ, ಬಂಗಾಳಿಗಳು, ಆಂಧ್ರರು, ಮರಾಠರು, ತಮಿಳರು ಮುಂದಾಳುಗಳಾಗಿರುವರೆಂಬುದಕ್ಕೆ ಅವರ ಭಾಷೆ ಮತ್ತು ಸಾಹಿತ್ಯವು ಭಾರ ತೀಯ ವಾಙ್ಮಯದಲ್ಲಿ ಪ್ರಮುಖವೆನಿಸಿರುವುದು ಸಾಕ್ಷಿಯಾಗಿದೆ. ಆದುದ ರಿಂದ ಒಂದು ಜನಾಂಗದ ಜೀವನಾಡಿಯು ಹೆಗ್ಗುರುತನ್ನು ಅವರ ವಾಙ್ಮಯ

ದಲ್ಲಿ ನಾವುಗಳು ಸುಲಭವಾಗಿ ಕಾಣಬಹುದು ಎಂಬ ಜಾಣರ ಮಾತನ್ನು ಒಪ್ಪಿಕೊಳ್ಳಬೇಕಾಗುತ್ತದೆ.

ಮನುಷ್ಯನು ಸುಖವನ್ನು ಬಯಸುತ್ತಾನೆ. ಸುಖವು ಆನಂದದಾಯಕವಾದುದು. ಆನಂದವು ಎಲ್ಲರಿಗೂ ಬೇಕಾದುದು. ಅದಕ್ಕಾಗಿಯೇ ಜೀವನದ ಜಂಜಡದಲ್ಲಿ ಹಗಲಿರಳು ಕೋಟಿಗಟ್ಟಲೆ ನರನಾರಿಯರು ತೊಳಲಿ ಬಳಲಿ ಬಸವಳಿದು ಬೆಂಡಾಗಿ ಹೋಗುತ್ತಿದ್ದಾರೆ. ಅಂತಹ ಆನಂದದ ಸ್ವರೂಪವನ್ನು ತಿಳಿಯಲು ಹಾಗೂ ಅದನ್ನು ಅನುಭವಿಸಲು ಸಾಹಿತ್ಯವು ಹೆಚ್ಚು ಸಹಾಯವಾದುದು. ಪ್ರಾಚೀನಕಾಲದ ವಿದ್ವಾಂಸರು ಆನಂದಗಳಲ್ಲಿ ಮೂರು ಬಹು ಮುಖ್ಯವೆನ್ನುತ್ತಾರೆ. ೧. ಬ್ರಹ್ಮಾನಂದ ೨. ಕಾವ್ಯಾನಂದ ೩. ಕಾಂತಾನಂದ ಎಂಬುವೇ ಆ ಆನಂದತ್ರಯಗಳು. ಬ್ರಹ್ಮಾನಂದವು ಎಲ್ಲರಿಗೂ ಸಾಧ್ಯವಾದುದಲ್ಲ. 'ಕೋಟಿಗೊಬ್ಬಯೋಗಿ' ಎನಿಸಿದವನಿಗೆ ಮಾತ್ರ ಅದು ಸಾಧ್ಯ. ಕಾಂತಾನಂದವು ಮಾನವನ ಅದೃಷ್ಟಾಧೀನ. ಅದು ಸಾವಿರಕ್ಕೊಬ್ಬ ಭೋಗಿಗೆ ಮಾತ್ರ ಸಾಧ್ಯ. ಮತ್ತುಳಿದ ಅಸಂಖ್ಯಾತ ಮಾನವಕೋಟಿಗೆ ಸುಲಭವಾಗಿ ಆನಂದವನ್ನು ದೊರೆಕಿಸುವ ಸಾಧನ ಕಾವ್ಯಾನಂದ ಮಾತ್ರ. ಈ ಕಾವ್ಯಾನಂದವು ಬ್ರಹ್ಮಾನಂದವನ್ನು ಪಡೆದವರಿಗೂ, ಕಾಂತಾನಂದದಲ್ಲಿ ತೇಲಿ ಮುಳುಗುವವರಿಗೂ ಕೂಡ ಬೇಡೆನಿಸುವಂಥದಲ್ಲ. ಇವೆರಡೂ ಇಲ್ಲದವನಿಗೂ ಇದು ಬೇಕೆನಿಸುವಂಥದು. ಆದುದರಿಂದ ಜೀವನದ ತೊಡಕುಗಳಲ್ಲಿ ಮುಂಗಾಣದ ಮಾನವರಿಗೆ ಮಾರ್ಗವನ್ನು ತೋರಿಸಲು, ಅಶಾಂತವಾದ ಮನಸ್ಸಿಗೆ ಪ್ರಶಾಂತತೆಯನ್ನು ನೀಡಲು ಕಾವ್ಯಾನಂದವು ಅತ್ಯವಶ್ಯ. ಕಾಳಿದಾಸ, ಬಾಣಭಟ್ಟ, ಷೇಕ್ಸ್‌ಪಿಯರ್, ಆದಿಪಂಪ, ಷಡಕ್ಷರದೇವ, ಶ್ರೀನಾಥ, ಹರೀಶ್ವರ ಮೊದಲಾದವರ ಗ್ರಂಥಗಳನ್ನು ಓದುವಾಗ ಅಥವಾ ಹೇಳುವಾಗ ಆಗುವ ಸುಖಾನುಭವವೇ ಕಾವ್ಯಾನಂದ. ಅದು ನಿಮಿತ್ತವೇ ಈ ಕಾವ್ಯಾನಂದಕ್ಕೆ ಮೂಲವಾದ ಸಾಹಿತ್ಯ, ಅದನ್ನು ತನ್ನ ಬೃಹದ್ಗರ್ಭದಲ್ಲಿ ಒಳಗೊಂಡ ವಾಙ್ಮಯ ಇವುಗಳ ವಿಷಯವನ್ನು ತಿಳಿಯುವುದು, ಅವುಗಳ ಪ್ರಸನ್ನತೆಗೆ ಪ್ರಯತ್ನಪಡುವುದು ಆನಂದ ಕಾಂಕ್ಷಿಯಾದ ಪ್ರತಿಯೊಬ್ಬ ವಿವೇಕಿಯಾದ ಮನುಷ್ಯನ ಕರ್ತವ್ಯ.

ವೀರಶೈವ ವಾಙ್ಮಯವು ವಿಶಿಷ್ಟವಾದುದೇ ಅಲ್ಲದೆ ವಿಸ್ತಾರವಾದುದೂ ಆಗಿದೆ. ಅದು ಸಾವಿರಕ್ಕೆ ಕಡಿಮೆಯಲ್ಲದಷ್ಟು ವರುಷಗಳಿಂದ, ಕನ್ನಡ, ಸಂಸ್ಕೃತ, ತಮಿಳು, ತೆಲುಗು, ಮರಾಠಿ ಮೊದಲಾದ ಭಾಷೆಗಳಲ್ಲಿ ಅಸಂಖ್ಯಾತ ಕವಿಗಳಿಂದ ವಿಪುಲವಾಗಿ ಬಳೆದು ಬಂದಿದೆ. ಆ ವಿಶಾಲವಾದ ವಾಙ್ಮಯದ ಪರಿಚಯವನ್ನು ಪಡೆಯುವುದು, ಅದರ ಉಳಿವೆಗಾಗಿ ದುಡಿಯುವುದು ಪ್ರತಿಯೊಬ್ಬ ಸಾಹಿತ್ಯ ಭಕ್ತನ ಆದ್ಯ ಕರ್ತವ್ಯವೆನಿಸಿದೆ. ವೀರಶೈವ ಸಾಹಿತ್ಯದ ಬೇರುಗಳನ್ನು ನಾವು ಶಿವಾಗಮದಲ್ಲಿ ಹುಡುಕಬಹುದು.

ಕನ್ನಡ ನಾಡಿನ 'ವೀರಶೈವಲ್ಲಿ ಸಾಹಿತ್ಯ' ಅಂದ ಕೂಡಲೇ ಕನ್ನಡ ಸಾಹಿತ್ಯವು ಮೊದಲು ಕಣ್ಣಿಗೆ ಕಾಣಿಸಿಕೊಳ್ಳುತ್ತದೆ. ಈ ಧರ್ಮವು ಮೊದಲು ಕರ್ನಾಟಕದಲ್ಲಿ ಹುಟ್ಟಿದುದು, ಲಿಂಗವಂತರಿಂದ ಕನ್ನಡ ಭಾಷೆಯಲ್ಲಿ ಅಸಂಖ್ಯಾತವಾದಷ್ಟು ಗ್ರಂಥಗಳು ಹುಟ್ಟಬಳೆದುದು, ಕನ್ನಡ ಸಾಹಿತ್ಯದಲ್ಲಿ ವೀರಶೈವ ಕವಿಗಳು ಪ್ರಚಂಡವಾದ ಕ್ರಾಂತಿಯನ್ನು ಮಾಡಿದುದು, ಈ ಕನ್ನಡ ನಾಡು ಮತ್ತು ಲಿಂಗವಂತಿಕೆಯ ಬಾಂಧವ್ಯಕ್ಕೆ ಕಾರಣವೆನಿಸಿರಬಹುದು. ವೀರಶೈವ ಜನಾಂಗವು ಕರ್ನಾಟಕದಲ್ಲಿ ಬಹುಮಟ್ಟಿಗೆ ನೆಲಸಿರುವುದೂ ಇದಕ್ಕೆ ಕಾರಣವಾಗಿರಬಹುದು. ವೀರಶೈವ ಸಾಹಿತ್ಯಕ್ಕೆ ಕಾಲಚುರ್ಯರು, ಹೊಯ್ಸಳರು, ಕಾಕತೀಯರು, ವಿಜಯನಗರದವರು, ಮೈಸೂರು ಒಡೆಯರು, ಕೆಳದಿಯ ರಾಜರು, ಚಿತ್ರದುರ್ಗದ ಪಾಳೆಯಗಾರರು, ಬಿಜ್ಜಾವರದರಸರು, ಹದಿನಾಡು, ಸ್ವಾದಿ, ಬಿಳಗಿ, ಕೊಡಗು ಮೊದಲಾದ ಅರಸರು ಉದಾರಾಶ್ರಯ ಕೊಟ್ಟಿದ್ದಾರೆ. ಆದ್ದರಿಂದಲೇ ಕಲ್ಯಾಣ, ಹಂಪೆ, ಹಳೆಯಬೀಡು, ಓರುಂಗಲ್ಲು, ವಿಜಯನಗರ, ಕೆಳದಿ ವೀರಶೈವ ಸಾಹಿತ್ಯದ ಕೇಂದ್ರಗಳೆನ್ನಬಹುದು. ಕೆಳದಿಯ ಬಸವರಾಜ, ಸ್ವಾದಿಯ ಸದಾಶಿವರಾಜ, ಕೊಡಗಿನ ಲಿಂಗರಾಜ ಇವರು ವೀರಶೈವರ ಸ್ವಯಂ ರಾಜಮಹಾಕವಿಗಳಾಗಿದ್ದರು.

'ವೀರಶೈವ ವಾಙ್ಮಯ' ಅಂದರೆ ವೀರಶೈವ ಕವಿಗಳಿಂದ ಬರೆಯಲ್ಪಟ್ಟ ಗ್ರಂಥರಾಶಿ ಎಂದು ಅರ್ಥವಾಗುತ್ತದೆ. ಅವುಗಳಲ್ಲಿ ಕೆಲವು ವೀರಶೈವ ಮತಚರಿತ್ರೆಗೆ ಸಂಬಂಧಪಟ್ಟವುಗಳಲ್ಲದಿದ್ದರೂ ಇರಬಹುದು. ಉದಾಹರಣೆಗೆ :—

ಪ್ರಸಿದ್ಧ ನಿಜಗುಣ ಶಿವಯೋಗಿಗೆ ಭಿನ್ನನಾದ ನಿಜಗುಣಯೋಗಿ (ಕ್ರಿ. ಶ. ೧೬೫೦) ಬರೆದ ಅಧ್ಯಾತ್ಮ ರಾಮಾಯಣವನ್ನು ನಾವು ಸ್ಮರಿಸಿ ಕೊಳ್ಳ ಬಹುದು. ಈ ನಿಜಗುಣ ಶಿವಯೋಗಿಯು ವೀರಶೈವ ಕವಿಯೆಂದು ಕನ್ನಡ ಕವಿಚರಿತ್ರೆಯಲ್ಲಿ ಹೇಳಿದೆ. A. ಆದರೆ ಅವನ ಗ್ರಂಥ ಲಿಂಗವಂತಧರ್ಮ ದ್ದಲ್ಲ. ವೀರಶೈವನಾದ ಅಭಿನವ ಕಾಳಿದಾಸ ಬಸವಪ್ಪ ಶಾಸ್ತ್ರಿಯು ಬರೆದ ಅಭಿಜ್ಞಾನ ಶಾಕುಂತಲ, ದಮಯಂತೀ ಸ್ವಯಂವರ, ಸಾವಿತ್ರೀ ಚರಿತ್ರೆ, ಶೂರಸೇನ ಚರಿತೆ, ಕನ್ನಡ ಭರ್ತೃಹರಿ ಶತಕ ಮೊದಲಾದ ಯಾವ ಗ್ರಂಥ ಗಳೂ ವೀರಶೈವ ಧರ್ಮಕ್ಕೆ ಸಂಬಂಧಪಟ್ಟವುಗಳಲ್ಲ, ಆದರೂ ಕವಿಯು ಲಿಂಗ ವಂತನಾದುದರಿಂದ ಅವನ ಗ್ರಂಥಗಳು ವೀರಶೈವ ವಾಙ್ಮಯ ರಾಶಿಯಲ್ಲಿಯೇ ಪರಿಗಣಿತವಾಗುತ್ತವೆ. ಹಾಗೆಯೇ ಕವಿಯು ವೀರಶೈವನಲ್ಲವಾದರೂ ಕಾವ್ಯ ಗಳು ಅಥವಾ ಗ್ರಂಥಗಳು ವೀರಶೈವ ಮತಬೋಧಕಗಳಾದಲ್ಲಿ ಆ ಗ್ರಂಥ ಗಳನ್ನು ಕೂಡ ವೀರಶೈವ ವಾಙ್ಮಯದಲ್ಲಿ ಪರಿಗಣಿಸಬೇಕಾಗುತ್ತದೆ. ಉದಾ ಹರಣೆಗೆ–ಆಂಧ್ರ ಸಾಹಿತ್ಯದಲ್ಲಿ ಸುಪ್ರಸಿದ್ಧನಾದ ಆಂಧ್ರ ಕಾಳಿದಾಸ ಶ್ರೀನಾಥ ಮಹಾಕವಿಯ ಪಂಡಿತಾರಾಧ್ಯ ಚರಿತ್ರವು ಎಂಬ ಗ್ರಂಥವನ್ನು ನಾವು ಪರಿಶೀಲಿಸಬಹುದು. ಈ ಕವಿಯು ವೀರಶೈವನಲ್ಲವಾದರೂ ವೀರಶೈವರ ಆಚಾರ್ಯನಾದ ಶ್ರೀ ಪಂಡಿತಾರಾಧ್ಯನನ್ನು ಕುರಿತು ಕಾವ್ಯವನ್ನು ಬರೆದಿದ್ದಾನೆ. ಆ ಗ್ರಂಥದಲ್ಲಿ ವೀರಶೈವತ್ವದ ಹಿರಿಮೆ, ಪಂಡಿತಾರಾಧ್ಯನ ಮಹಿಮೆ ವಿಸ್ತಾರ ವಾಗಿ ಅಭಿವರ್ಣಿತವಾಗಿದೆ. ಕೆಳದಿಯ ತಿರುಮಲಭಟ್ಟನ 'ಕನ್ನಡ ಶಿವಗೀತೆ' 'ಗೀತ ಗೌರೀವರ'ಹಾಗೂ ಲಿಂಗಣ್ಣನ 'ಕೆಳದಿ ನೃಪವಿಜಯ' ಮೊದಲಾದುವು ಹೀಗೆಯೇ. ಅಂತೆಯೇ ಆಧುನಿಕ ಕನ್ನಡ ಸಾಹಿತ್ಯದಲ್ಲಿ ಪ್ರಾಮುಖ್ಯ ಗ್ರಂಥ ಗಳೆಂದು ಹೆಸರು ಪಡೆದಿರುವ 'ವಚನಶಾಸ್ತ್ರರಹಸ್ಯ ಮತ್ತು 'ಭಕ್ತಿ ಭಂಡಾರಿ ಬಸವಣ್ಣನವರು' 'ವಚನ ಧರ್ಮಸಾರ' ಪ್ರಭುವಿನ ಪ್ರಭೆ, ಗ್ರಂಥಗಳನ್ನೂ ವೀರಶೈವ ವಾಙ್ಮಯಾತ್ಮಕವೆಂಬು ತಿಳಿಯಬಹುದಾಗಿದೆ. ಏತಕ್ಕೆಂದರೆ, ಈ ಗ್ರಂಥಕರ್ತೃಗಳು ಪಡೆದ ಸ್ಫೂರ್ತಿಯು ವೀರಶೈವ ವಾಙ್ಮಯದಿಂದ ಆದುದು. ಅದು ಕಾರಣವೇ ಈತರದ ಗ್ರಂಥಗಳೆಲ್ಲವೂ ವೀರಶೈವ ಸಾಹಿತ್ಯದಲ್ಲಿ ಸೇರುತ್ತವೆ.

A. ಕ. ಕವಿಚರಿತೆ, (ಭಾಗ-೩,) ಪುಟ ೨೪೫.

ಕನ್ನಡ ಸಾಹಿತ್ಯದಲ್ಲಿ ಪ್ರೌಢಿಮೆಗೆ ಜೈನವಾಙ್ಮಯವು ಹೆಸರಾಗಿರುವಂತೆ ನವೀನತೆಗೆ ವೀರಶೈವ ಸಾಹಿತ್ಯವು ಕೀರ್ತಿವೆತ್ತಿದೆ. ಕನ್ನಡ ಲಿಂಗವಂತ ಕವಿಗಳಲ್ಲಿ ಕೊಡಗುಳಿ ಕೇಶಿರಾಜ, ದೇವರ ದಾಸಿಮಯ್ಯ, ಶಂಕರ ದಾಸಿಮಯ್ಯಗಳೇ ಮೊದಲಿಗರೆಂದು ತೋರುತ್ತದೆ. ಅಲ್ಲಿಂದ ಮುಂದೆ ಸಕಲೇಶ ಮಾದರಸ, ನಿಜಗುಣದೇವ, ಏಕಾಂತದ ರಾಮಯ್ಯಗಳು ಕಂಗೊಳಿಸುತ್ತಾರೆ. ಛಂದೋಬದ್ಧವಾದ ಕವಿತೆಗಳನ್ನು ಬರೆದವರಲ್ಲಿ ಕೇಶಿರಾಜ ದಂಡನಾಯಕನು ಮೊದಲಿನ ಲಿಂಗವಂತ ಕವಿಯೆಂದು ಹೇಳಬಹುದು. ಆದಿಮ ವೀರಶೈವ ಕವಿಯಾದ ಹರೀಶ್ವರನು ಪ್ರಾಚೀನ ಕವಿಗಳ ಪಂಕ್ತಿಯಲ್ಲಿ 'ಕೇಶಿರಾಜನ ಬಗೆ ನೆಲಸಿರ್ಕೆ ಮದೀಯಕಾವ್ಯದೊಳ್' ಎಂದು ತನ್ನ ಗಿರಿಜಾ ಕಲ್ಯಾಣದಲ್ಲಿ ಕೇಶಿರಾಜನನ್ನು ಸ್ಮರಿಸಿದ್ದಾನೆ. ಹರಿಹರನ ಶಿಷ್ಯನಾದ ರಾಘವಾಂಕನು ತನ್ನ ಹರಿಶ್ಚಂದ್ರ ಕಾವ್ಯದಲ್ಲಿ 'ಕೇಶಿರಾಜನನಂ ಬಲಗೊಂಡು' ಕಾವ್ಯವನ್ನು ಹೇಳಿದ್ದಾನೆ. ಆದುದರಿಂದ ಹರಿಹರ–ರಾಘವಾಂಕರಿಗಿಂತ ಕೊಂಡುಗುಳಿಯ ಕೇಶಿರಾಜನು ಪ್ರಾಚೀನನೆಂದೂ ಆತನ 'ಷಡಕ್ಷರ ಕಂದ' ಎಂಬ ಗ್ರಂಥವು ಛಂದೋಬದ್ಧವಾದ ಮೊದಲನೆಯ ವೀರಶೈವ ಕನ್ನಡ ಗ್ರಂಥವೆಂದೂ ನಾವು ತಿಳಿಯ ಬಹುದಾಗಿದೆ.

ಕನ್ನಡ ಸಾಹಿತ್ಯದಲ್ಲಿ ೧೧ ನೇ ಶತಮಾನದಿಂದಲೇ ವೀರಶೈವ ಕವಿಗಳು ಕಾಣಿಸಿಕೊಳ್ಳುತ್ತಾರೆ. ಆದರೆ, ಭಕ್ತಿಬಂಡಾರಿ ಬಸವಣ್ಣನವರು ಕಲ್ಯಾಣದ ಮಂತ್ರಿಗಳಾದ ಕಾಲ ಅಂದರೆ ೧೨ ನೇ ಶತಮಾನದ ಉತ್ತರಾರ್ಧವು ವೀರಶೈವ ಸಾಹಿತ್ಯದ ದೃಷ್ಟಿಯಿಂದ ಬಹಳ ಪ್ರಾಮುಖ್ಯವಾದ ಕಾಲವೆಂದು ಹೇಳಬಹುದು. ೧೯ ನೇ ಶತಮಾನದ ಅಂತ್ಯದವರೆಗೆ ಕನ್ನಡ ಕವಿಚರಿತೆಕಾರರ ಲೆಕ್ಕಕ್ಕೆ ಸಿಕ್ಕಿದ ಒಟ್ಟು ೧೧೪೮ ಮಂದಿ ಕವಿಗಳಲ್ಲಿ, ೧೭೫ ಮಂದಿ ಜೈನರು, ೩೮೮ ಮಂದಿ ವೀರಶೈವರು, ೧೩೨ ಮಂದಿ ಬ್ರಾಹ್ಮಣರು, ಇತರರರು ೪೫೩ ಮಂದಿ ಎಂದು ತಿಳಿದುಬಂದಿದೆ. ಸಂಖ್ಯೆಯಿಂದ ವೀರಶೈವಕವಿಗಳು ಹೆಚ್ಚಿನವರೆನಿಸಿದ್ದಾರೆ. ಇವರಲ್ಲಿ ಕವಯಿತ್ರಿಯರು ಬಹಳ ಮಂದಿ ಇರುವರೆಂಬುದು ಕನ್ನಡಿಗರೆಲ್ಲರ ಹೆಮ್ಮೆಗೆ ವಿಷಯವಾಗಿದೆ. ಕವಿಚರಿತ್ರೆಗೆ ಸಿಕ್ಕದ ನೂರಾರು ಮಂದಿ ವೀರಶೈವ ಕವಿಗಳ ಗ್ರಂಥಗಳು ಈಚೆಗೆ ಸಂಶೋಧಕರಿಗೆ ಲಭಿಸಿವೆ. ಅಂತಹ ಹಲವು ಗ್ರಂಥಗಳು ಮತ್ತು ಶಾಸನಗಳು ನಮ್ಮ ಕಾರ್ಯಾಲಯದಲ್ಲಿಯೂ ಇವೆ. ತಿದ್ದಿದ ಕವಿಚರಿತೆಗೆ ಈ ವಿಷಯ ಸೇರುತ್ತದೆ.

ಕನ್ನಡ ಸಾಹಿತ್ಯದಲ್ಲಿ ರಗಳೆಯ ಕವಿಯಾದ ಹರಿಹರ, ಷಟ್ಪದಿಯ ಕರ್ತೃವಾದ ರಾಘವಾಂಕ, ದೀಕ್ಷಾಬೋಧೆಯ ಕೆರೆಯ ಪದ್ಮರಸ, ಸಾನಂದ ಚರಿತೆಯ ಕುಮಾರ ಪದ್ಮರಸ, ಬಸವಪುರಾಣದ ಭೀಮಕವಿ, ಪದ್ಮರಾಜ ಪುರಾಣದ ಪದ್ಮಣಾಂಕ, ಮಹಾಪುರಾಣದ ಗುಬ್ಬಿ ಮಲ್ಲಣಾರ್ಯ, ಪ್ರಭು ಲಿಂಗಲೀಲೆಯ ಚಾಮರಸ, ಶಿವತತ್ವ ಚಿಂತಾಮಣಿಯ ಲಕ್ಕಣಾಮಾತ್ಯ, ಸಿದ್ಧೇಶ್ವರಪುರಾಣ ಮತ್ತು ಪಾಲ್ಕುರಿಕೆಯ ಸೋಮೇಶ್ವರ ಪುರಾಣಗಳ ವಿರಕ್ತ ತೋಂಟದಾರ್ಯ, ಗುರುರಾಜಚರಿತೆ, ಮತ್ತು ರಾಘವಾಂಕ ಚಾರಿತ್ರ್ಯಗಳ ಚಿಕ್ಕ ನಂಜಾರ್ಯ, ಪ್ರೌಢರಾಯನ ಕಾವ್ಯದ ಅದ್ರೀಶಕವಿ, ರೇವಣ ಸಿದ್ಧ ಪುರಾಣದ ಬೊಮ್ಮರಸ, ಭಿಕ್ಷಾಟನ ಚರಿತದ ಗುರುಲಿಂಗವಿಭು, ಚಂಪೂ ಕಾವ್ಯ ಕರ್ತೃಗಳಾದ ಉದ್ಭಟಕಾವ್ಯದ ಸೋಮರಾಜ, ಪುರಾತನ ವಿಲಾಸದ ಕವಿ ಸುರಂಗ, ರಾಜಶೇಖರ ವಿಳಾಸಾದಿ ಪ್ರಸಿದ್ಧ ಗ್ರಂಥಗಳ ಕರ್ತೃವಾದ ಷಡಕ್ಷರದೇವ, ಆಧುನಿಕ ಮಹಾಕವಿಯಾದ ಬಸವಪ್ಪಶಾಸ್ತ್ರಿ ಇವರುಗಳನ್ನು ಅತ್ಯಂತ ಗಣ್ಯರೆಂದು ಭಾವಿಸಬಹುದು.

ವಿವೇಕ ಚಿಂತಾಮಣಿ, ಕೈವಲ್ಯ ಪದ್ಧತಿ ಮೊದಲಾದ ಏಳು ಗ್ರಂಥಗಳನ್ನು ಬರೆದ ನಿಜಗುಣ ಶಿವಯೋಗಿ, ಮನೋವಿಜಯ, ಅವಧೂತಗೀತೆ ಮೊದಲಾದ ಗ್ರಂಥಗಳ ಕರ್ತೃ ಸಪ್ತಕಾವ್ಯದ ಗುರುಬಸವ, ಕೈವಲ್ಯ ಕಲ್ಪವಲ್ಲರಿ, ಜ್ಞಾನ ಶತಕಗಳನ್ನು ಬರೆದ ಸರ್ಪಭೂಷಣ ಶಿವಯೋಗಿ, ಇದೇ ಸಂಪ್ರದಾಯದಲ್ಲಿ ಉತ್ತಮವಾದ ಹಾಡುಗಬ್ಬಗಳನ್ನು ರಚಿಸಿದ ಘನಮಠಾರ್ಯರು, ಮುಪ್ಪಿನ ಷಡಕ್ಷರಿಗಳು, ಅನುಭವ ರಸಾಯನದ ಶಾಲ್ಯದ ಕೃಷ್ಣಪ್ರಭು, ಬಾಲಲೀಲಾ ಮಹಾಂತಸ್ವಾಮಿಗಳು,ಮುತುಕೂರು ನಂಜುಂಡ ಸ್ವಾಮಿಗಳು, ನೊಣವಿನಕೆರೆ ಕರಿಬಸವ ಸ್ವಾಮಿಗಳು ಗಣ್ಯತೆಯನ್ನು ಪಡೆದ ವೀರಶೈವ ಸಂತ ಕವಿಗಳೆನಿಸಿದ್ದಾರೆ. ಕನ್ನಡಿಗರೆಲ್ಲರ ಮನ್ನಣೆಗೆ ಪಾತ್ರವಾದ ಸರ್ವಜ್ಞ ವಚನಗಳನ್ನು ಹಾಡಿದ ಸರ್ವಜ್ಞಮೂರ್ತಿ, ನೀತಿಸಾರದ ಗಂಗಾತರಂಗಿಣಿಯನ್ನು ಹರಿಸಿದ ಸೋಮೇಶ್ವರ ಶತಕ ಕರ್ತೃ ಪುಲಿಗೆರೆಯ ಸೋಮಕವಿ ಮೊದಲಾದವರನ್ನು ನಾವು ಗಣ್ಯರಾದ ಲಿಂಗವಂತ ಕವಿಗಳೆಂದು ಕರೆಯ ಬಹುದಾಗಿದೆ.

ವೀರಶೈವ ವಾಙ್ಮಯವು 'ಪ್ರಗತಿ ಮತ್ತು ಕ್ರಾಂತಿಕಾರಕ' ಎಂದು ಹಲವರು ಹೇಳಿದ್ದಾರೆ. ಹರಿಹರನು ಹಿಂದಿನ ಪ್ರೌಢವಾದ ಚಂಪೂ ಶೈಲಿಯನ್ನು ಹಿಮ್ಮೆಟ್ಟಿಸಿ, ವಿನೂತನ ರಗಳೆಯ ಶೈಲಿಯಲ್ಲಿ ತುಂಗಭದ್ರಾ ಪ್ರವಾಹದಂತೆ ಧಾರಾಳವಾಗಿ ೧೦೮ ಶರಣರ ಚರಿತ್ರೆಗಳನ್ನು ಹಾಡಿದನು. ಅವನ ಅಳಿಯನಾದ ರಾಘವಾಂಕನು ಮಾವನಿಗಿಂತ ಮೂರು ಹೆಜ್ಜೆ ಮುಂದೆ ಹೋಗಿ ವಾರ್ಧಕ, ಉದ್ದಂಡ, ಶರ ಮೊದಲಾದ ಷಟ್ಪದಿಗಳಲ್ಲಿ ನವರಸದ ಮಡುವಿನಂತಿರುವ ಹರಿಶ್ಚಂದ್ರ ಕಾವ್ಯ, ಸಿದ್ಧರಾಮ ಪುರಾಣ, ಸೋಮನಾಥ ಚರಿತೆ, ವೀರೇಶ ಚರಿತೆ ಮೊದಲಾದ ತನ್ನ ಉದ್ಗ್ರಂಥಗಳನ್ನು ಬರೆದನು. ಇವನ ಸಮಕಾಲೀನರಾದ ಕೆರೆಯ ಪದ್ಮರಸನು ದೀಕ್ಷಾಬೋಧೆಯನ್ನು ರಗಳೆಯಲ್ಲಿಯೂ, ಅವನ ಮಗನಾದ ಕುಮಾರ ಪದ್ಮರಸನು ಸಾನಂದಚರಿತೆಯನ್ನು ವಿವಿಧ ಷಟ್ಪದಿಯಲ್ಲಿಯೂ ಬರೆದು ಕನ್ನಡ ಸಾಹಿತ್ಯದ ಶೈಲಿಯಲ್ಲಿ ಉಜ್ವಲವಾದ ಕ್ರಾಂತಿಯುಂಟಾಗಲು ನೆರವಾದರು. ಆಂಧ್ರದೇಶದಲ್ಲಿ ಪಾಲ್ಕುರಿಕೆ ಸೋಮನಾಥನು ದ್ವಿಪದಿಯಲ್ಲಿ ಪುರಾಣಗಳನ್ನು ಬರೆದನು.

ಶ್ರೀ ಬಸವೇಶ್ವರನು ವೀರಶೈವಧರ್ಮ ಪ್ರಚಾರದ ನಿಮಿತ್ತವಾಗಿ-ತನಗೆ ಹಿಂದೆಯೇ ದಾಸಿಮಯ್ಯಾದಿ ಶರಣರಿಂದ ಪ್ರಚಾರಕ್ಕೆ ಬಂದಿದ್ದ-ವಚನ ರಚನೆಯ ಸಂಪ್ರದಾಯವನ್ನು ನೂರ್ಮಡಿ ಸಾಸಿರ್ಮಡಿಯಾಗಿ ಮುಂದುವರಿಸಿದನು. ಅನುಭವ ಮಂಟಪದ ಹಿರಿಯರಾದ ಅಲ್ಲಮಪ್ರಭು, ಸಿದ್ಧರಾಮೇಶ್ವರ, ಚೆನ್ನಬಸವಣ್ಣ, ಮಾಚಿದೇವ, ಅಕ್ಕಮಹಾದೇವಿ ಮೊದಲಾದ ಬಸವಯುಗದ ಮಹಾಪುರುಷರು ವಚನ ಶಾಸ್ತ್ರವನ್ನು ಬರೆದು ವೀರಶೈವ ಧರ್ಮಕ್ಕೂ, ಕನ್ನಡ ಸಾಹಿತ್ಯಕ್ಕೂ ಮಹೋಪಕಾರಮಾಡಿದರು. ಪದ್ಯದ ಮಾಧುರ್ಯ, ಗದ್ಯದ ಸಾರಳ್ಯ ಇವೆರಡೂ ಈ ಶರಣರ ವಚನದಲ್ಲಿ ಹದವರಿತು ಬೆರೆತು ಕನ್ನಡ ಸಾಹಿತ್ಯದಲ್ಲಿ ಒಂದು ಪ್ರಚಂಡವಾದ ಕ್ರಾಂತಿಯನ್ನುಂಟುಮಾಡಿತು. ನೃಪತುಂಗನು ಹೇಳುವಂತೆ 'ಕಿರಿದರೊಳೆ ಪಿರಿದು ಮರ್ಥಮನರಿಪ' ಕೌಶಲ್ಯವೂ ಇದರಲ್ಲಿ ಸೇರಿತು. 'ಪಾಪಮಿದು ಪುಣ್ಯಮಿದು ಹಿತರೂಪಮಿದು ಅಹಿತಪ್ರಕಾರಮಿದು' ಎಂದು ತಿಳಿಸುವ ಕವಿಪ್ರಧಾನರ ಕಾವ್ಯಂಗಳ ಬೋಧೆಯೂ ಈ ವಾಙ್ಮಯದಲ್ಲಿ ಕಂಗೊಳಿಸಿತು. ವೀರಶೈವ ವಚನ ವಾಙ್ಮಯವು ಕನ್ನಡ ಉಪನಿಷತ್ತು ಎಂದು ಹೇಳಿಸಿಕೊಂಡಿತು.

ವೀರಶೈವ ಧರ್ಮದ ಉದಾರತೆ, ಕನ್ನಡ ಭಾಷೆಯ ಸೌಕುಮಾರ್ಯ ಇವೆರಡೂ ಈ ವಚನ ಶೈಲಿಯಲ್ಲಿ ಬೆರೆತು ಅದರಲ್ಲಿ ಒಂದು ವಿದ್ಯುದ್ವೇಗವನ್ನು ಉಂಟು ಮಾಡಿದುವು. ವಚನವು ರಸಿಕರಿಗೆ ವ್ಯಾಮೋಹಕವೆನಿಸಿತು. ತತ್ವ ನಿಷ್ಠರಿಗೆ ಪ್ರಿಯತಮವೆನಿಸಿತು. ಅದು ಸಾಹಿತ್ಯದಂತೆ ಆನಂದದಾಯಕವೂ, ಶಾಸ್ತ್ರ ದಂತೆ ವಿಚಾರ ಪ್ರಚೋದಕವೂ ಎನಿಸಿ ಕನ್ನಡ ವಾಙ್ಮಯಕ್ಕೆ ಶಿರೋಮಣಿ ಪ್ರಾಯವೆನಿಸಿತು. ಸುಮಾರು ೩೦೦ ಕ್ಕೂ ಮಿಗಿಲಾದ ಕವಿಗಳು ಈ ಶೈಲಿ ಯಲ್ಲಿ ಗ್ರಂಥಗಳನ್ನು ಬರೆದರು. ಅಲ್ಲಿಂದ ಮುಂದೆ ಶೂನ್ಯ ಸಂಪಾದನೆ, ಲಿಂಗಲೀಲಾ ವಿಲಾಸ, ಗಣಭಾಷ್ಯ ರತ್ನಮಾಲೆ ಮೊದಲಾದ ಶ್ರೇಷ್ಠ ಗ್ರಂಥ ಗಳ ನಿರ್ಮಾಣವಾಗಿ ವಚನವಾಙ್ಮಯವು ನಿಗಮಾಗಮಗಳ ಸಾರವೂ, ಸಾಹಿತ್ಯಸರಸ್ವತಿಯ ನಿಲವುಗನ್ನಡಿಯೂ ಎನಿಸಿತು. ಚಂಪುವಿನ ಬಂಧನ ದಿಂದ ಕಂದಿ ಕುಂದಿದ ಕನ್ನಡ ಸರಸ್ವತಿಯು ಈ ವಚನ ರಚನೆಯ ಸರಳ ಮಾರ್ಗದ ನಂದನವನದಲ್ಲಿ ಮಂದಹಾಸದಿಂದ ನಲಿದಾಡಲು ಕಾರಣ ವಾಯಿತು. ಅದು ಕಾರಣವೇ ವೀರಶೈವ ವಚನ ವಾಙ್ಮಯವು ಭಾರತೀಯರ ಭಾಗ್ಯವೆನಿಸಿತು. ಅನುಭಾವಿಗಳ ಕೈದೀವಿಗೆ ಎನಿಸಿತು. ರಸಿಕರ ರಸಾಯನ ವೆನಿಸಿತು. ಕನ್ನಡಿಗರ ಉಪನಿಷತ್ತೆನಿಸಿತು. ಕನ್ನಡ ಶಿವಾಗಮವೆನಿಸಿತು.

ವೀರಶೈವ ಸಾಹಿತ್ಯವು ಮೊದ ಮೊದಲು ಧರ್ಮ ಪ್ರಚಾರಕ್ಕಾಗಿಯೇ ಪ್ರಾರಂಭವಾಯಿತು. ಆ ಧರ್ಮ ತತ್ವಗಳು ಉದಾರವಾದುದರಿಂದ ಅದರ ನಿರೂಪಣೆಯಿಂದ ಆ ಸಾಹಿತ್ಯವು ಉದಾರವೂ ಉಜ್ವಲವೂ ಎನಿಸಿತು. ಈ ಉದಾರವಾದ ಧರ್ಮವನ್ನು ಬೋಧಿಸಲು ಕವಿಗಳಿಗೆ ಹೊಸ ಹೊಸ ಛಂದಸ್ಸು ಅವಶ್ಯವೆನಿಸಿತು. ಆದುದರಿಂದಲೇ ಹರಿಹರನು ರಳ ಕುಳ ಕ್ಷಳ ಗಳ ಗಡಿಬಿಡಿಯನ್ನು ತೊಲಗಿಸಿದನು. ರಗಳೆಯನ್ನು ಒಕ್ಕಣಿಸಿದನು. ರಾಘ ವಾಂಕನು ಷಟ್ಪದಿಯಲ್ಲಿ ಝೇಂಕರಿಸಿದನು. ನಿಜಗುಣ ಶಿವಯೋಗಿಯು ವಿವಿಧ ಛಂದಸ್ಸಿನಲ್ಲಿ ತನ್ನ ಯೋಗವಾಣಿಯಿಂದ ಸಚ್ಚಿದಾನಂದ ತತ್ವಗಳನ್ನು ಬೋಧಿಸಿದನು. ಸರ್ವಜ್ಞ ಮೂರ್ತಿಯು ಸಿಡಿಲಿನ ನುಡಿಗಳಂತಿರುವ ತ್ರಿಪದಿಗಳನ್ನು ಹಾಡಿ ನಲಿದನು. ಕವಿ ನಾಗಸಂಗಯ್ಯನು ಸಾಂಗತ್ಯವನ್ನು ಸಂಗೀತದಲ್ಲಿ ಸಮಾವೇಶಗೊಳಿಸಿದನು. ಶರಣರು ಮಿಂಚಿನ ಗೊಂಚಲಿ

ನಂತಹ ವಚನಗಳನ್ನು ಕನ್ನಡದ ಕೆಚ್ಚೆದೆಯಿಂದ ಉಸುರಿದರು. ಈ ಬಗೆಯಿಂದ ವೀರಶೈವ ಕವಿಗಳ ವಿಶಾಲ ಭಾವನೆಯು ಹಾಗೂ ವಿನೂತನ ಭಾವನೆಯು ನಿಮಿತ್ತವಾಗಿ ಕನ್ನಡ ಛಂದಸ್ಸು ವಿರಾಡ್ರೂಪವನ್ನು ತಾಳಿತು, ಶೈಲಿ ಸರಳವಾಯಿತು, ಭಾವನೆ ಬಲಯುತವಾಯಿತು, ಅರಮನೆಯ ರಾಜರಾಣಿಯರಿಗೆ ಮೀಸಲಾಗಿದ್ದ ಕಾವ್ಯಾನಂದವು ಮುರುಕು ಗುಡಿಸಲಿನ ಕಾಯಕದಯ್ಯಗಳಿಗೂ ಲಭಿಸುವಂತಾಯಿತು. ವೀರಶೈವ ವಾಙ್ಮಯ ವಿಸ್ತಾರದ ನಿದರ್ಶನಕ್ಕೆ ಕನ್ನಡದಲ್ಲಿ ಲಿಂಗವಂತ ಕವಿಗಳಿಂದಾದ ಈ ಕ್ರಾಂತಿಯುು ಬಹು ಮುಖ್ಯವೆನಿಸಿತು.

ವೀರಶೈವ ಸಾಹಿತ್ಯವು ಕೇವಲ ಛಂದಸ್ಸಿನಲ್ಲಿಯೇ ಅಲ್ಲದೆ ಕಥಾವಸ್ತುವನ್ನು ಸ್ವೀಕರಿಸೋಣ, ವರ್ಣನೆಯಲ್ಲಿ ವಿನೂತನತೆಯನ್ನು ಅಂಗೀಕರಿಸೋಣ, ನೂತನ ಪಾರಿಭಾಷಿಕ ಶಬ್ದಗಳನ್ನು ಕಾವ್ಯಗಳಲ್ಲಿ ಹದವರಿತು ಬೆರಸೋಣ, ಸಮಾಜದಲ್ಲಿ ನೂತನ ಕ್ರಾಂತಿಯಾಗುವ ವೀರಶೈವ ತತ್ವಜ್ಞಾನದಿಂದ ಸ್ಫೂರ್ತಿಗೊಂಡು ಹೊಸಹೊಸ ಭಾವನೆಗಳನ್ನು ಗ್ರಂಥ ಮಧ್ಯೆ ಸಮಯೋಚಿತವಾಗಿ ಉಪದೇಶಿಸೋಣ ಇತ್ಯಾದಿ ವಿಚಾರಗಳಲ್ಲಿಯೂ ಕ್ರಾಂತಿಯನ್ನು ಉಂಟುಮಾಡಿತು. ಹಿಂದಣ ಜೈನಕವಿಗಳು ೨೪ ಮಂದಿ ತೀರ್ಥಂಕರರ ಪುರಾಣಗಳನ್ನು ಉದ್ದಾಮವಾದ ಚಂಪೂ ಶೈಲಿಯಲ್ಲಿ ರಚಿಸಿದ್ದರು. ಆದರೆ ಆ ಕಥಾನಾಯಕರೆಲ್ಲರೂ ಉತ್ತರ ಹಿಂದೂಸ್ಥಾನದ ಮಹಾಪುರುಷರು. ಅಂತೆಯೇ ವೈಷ್ಣವ ಕವಿಗಳು ವಿರಚಿಸಿದ ಭಾರತ ರಾಮಾಯಣ ಭಾಗವತಾದಿ ಗ್ರಂಥಗಳ ಕಥಾನಾಯಕರಾದ ಶ್ರೀರಾಮ ಶ್ರೀಕೃಷ್ಣಾದಿಗಳು ಉತ್ತರ ಹಿಂದೂಸ್ಥಾನದವರು. ಭಾರತ ರಾಮಾಯಣ ಭಾಗವತಾದಿ ಗ್ರಂಥಗಳು ಕೇವಲ ಸಂಸ್ಕೃತದ ಭಾಷಾಂತರಗಳು. ಪ್ರಸಿದ್ಧವಾಗಿ ಜನರಿಗೆ ತಿಳಿದ ಸಂಗತಿಗಳು ಮಾತ್ರ. ಆದರೆ ವೀರಶೈವ ಕವಿಗಳು ಈ ವಿಧದಲ್ಲಿ ತಮ್ಮ ನೂತನ ಪ್ರತಿಭೆಯನ್ನು ವ್ಯಕ್ತಪಡಿಸಿರುತ್ತಾರೆ. ಈ ಮಾತು ಕೇವಲ ಕನ್ನಡಕ್ಕೇ ಅಲ್ಲ ತೆಲುಗು, ತಮಿಳು ವೀರಶೈವ ಕಾವ್ಯಗಳಿಗೂ ಅನುಗುಣವಾಗಿದೆ. ತೆಲುಗಿನಲ್ಲಿ ಸೋಮನಾಥ, ತಮಿಳಿನಲ್ಲಿ ಶಿವಪ್ರಕಾಶರು ಇಲ್ಲಿ ಸ್ಮರಣಾರ್ಹರು.

ಹರಿಹರನು ಬರೆದ ಗಿರಿಜಾಕಲ್ಯಾಣದ ಕಥಾವಸ್ತು ಮಾತ್ರ ಹಳೆಯದು. ಆದರೆ, ಆ ಚಂಪೂಗ್ರಂಥದಲ್ಲಿ, ಸರಳತೆ, ಸಹಜತೆ, ಹೊಸದೃಷ್ಟಿ, ಭಕ್ತಿರಸ

ಪ್ರಧಾನತೆ ಇತ್ಯಾದಿ ವಿನೂತನತೆ ನಮಗೆ ಕಂಡು ಬರುತ್ತದೆ. ಸ್ಕಾಂದ ಪುರಾಣಾಂತರ್ಗತ ಗಿರಿಜಾ ಕಲ್ಯಾಣದ ಕಥೆಯನ್ನು ಓದಿದವರಿಗೂ, ಕಾಳಿದಾಸನ ಕುಮಾರಸಂಭವ, ಬಾಣಭಟ್ಟನ ಪಾರ್ವತೀ ಪರಿಣಯ ಎಂಬ ಸಂಸ್ಕೃತ ಮಹಾ ಕಾವ್ಯಗಳ ರಸಾಸ್ವಾದನ ಮಾಡಿದವರಿಗೂ ಹರಿಹರನ ಗಿರಿಜಾಕಲ್ಯಾಣವು ಎಲ್ಲ ಬಗೆಯಿಂದಲೂ ವಿನೂತನ ಕೃತಿಯೆಂದು ಭಾಸವಾಗುವಂತಿದೆ. ಕನ್ನಡ ಜಾಣ ಹರೀಶ್ವರನ ಕಲಾನೈಪುಣ್ಯವನ್ನು ನಾವಿಲ್ಲಿ ಮನಗಾಣಬಹುದು. ಹರಿಹರನ ೧೧೮ ಶಿವಶರಣರ ರಗಳೆಗಳಲ್ಲಿರುವ ಕಥಾನಾಯಕರು ಹಲವರು ಅಂದರೆ ಅಣ್ಣ ಬಸವಣ್ಣ, ಪ್ರಭುದೇವ, ಅಕ್ಕಮಹಾದೇವಿ, ಹಾವಿನಹಾಳ ಕಲ್ಲಯ್ಯ, ರೇವಣಸಿದ್ಧೇಶ್ವರ ಮೊದಲಾದವರು ನಮ್ಮ ಕನ್ನಡ ನಾಡಿನವರು. ಹಾಗೆಯೇ ೬೩ ಪುರಾತನರು ತಮಿಳುನಾಡಿನ ಶರಣರು. ಅಂತೆಯೇ ತೆಲುಗು ಬೊಮ್ಮಯ್ಯ, ಉರುಲಿಂಗಪೆದ್ದಿ ಆಂಧ್ರ ನಾಡಿನವರು. ಹೀಗೆ ಆದಿಕವಿ ಹರಿಹರನು ನಮ್ಮ ನಾಡಿನ ಮಹಾಪುರುಷರನ್ನು ಕುರಿತು ಕಾವ್ಯಗಳನ್ನು ಕಟ್ಟುವ ಪರಿಪಾಠವನ್ನು ಮೊಟ್ಟಮೊದಲು ಹಾಕಿದನು. ಅವನ ಶಿಷ್ಯ ರಾಘವಾಂಕನು ಸಿದ್ಧರಾಮ, ಆದಿಶೆಟ್ಟಿ ಮತ್ತು ಹಂಪೆಯ ಹರಿಹರ ಇವರುಗಳನ್ನು ಕುರಿತು ಕಾವ್ಯಗಳನ್ನು ಬರೆದನು. ಮುಂದಣ ವೀರಶೈವ ಕವಿಗಳು ಸ್ವಾಭಿಮಾನದಿಂದ ಕೂಡಿದ ಈ ಸಂಪ್ರದಾಯವನ್ನು ಬಲಪಡಿಸಿದರು.

ಭೀಮಕವಿಯು ಬಸವನನ್ನೂ, ಪದ್ಮಣಾಂಕನು ಕೆರೆಯ ಪದ್ಮರಸನನ್ನೂ, ಚಾಮರಸನು ಪ್ರಭುದೇವರನ್ನೂ, ವಿರಕ್ತ ತೋಂಟದಾರ್ಯನು ತೋಂಟದ ಸಿದ್ಧಲಿಂಗ ಮತ್ತು ಪಾಲ್ಕುರಿಕೆ ಸೋಮನಾಥರನ್ನೂ, ಚೆನ್ನಬಸವಾಂಕನು ಅಕ್ಕಮಹಾದೇವಿಯನ್ನೂ, ಬೊಮ್ಮರಸನು ರೇವಣಸಿದ್ಧನನ್ನೂ, ವಿರೂಪಾಕ್ಷ ಪಂಡಿತನು ಚೆನ್ನಬಸವನನ್ನೂ, ಅದ್ರೀಶಕವಿಯು ಪ್ರೌಢದೇವರಾಯನನ್ನೂ, ಪರ್ವತೇಶನು ರೇವಣಸಿದ್ಧ, ಮರುಳಸಿದ್ಧ, ಏಕೋರಾಮ, ಪಂಡಿತಾರಾಧ್ಯರೆಂಬ ಚತುರಾಚಾರ್ಯರನ್ನೂ ಕುರಿತು ಕಾವ್ಯಗಳನ್ನು ಬರೆದನು. ಅಂತೆಯೇ ತಮಿಳು ನಾಡಿನ ೬೩ ಪುರಾತನರು, ಆಂಧ್ರದೇಶದ ಮಲ್ಲಿಕಾರ್ಜುನ ಪಂಡಿತಾರಾಧ್ಯ ಮತ್ತು ಪಾಲ್ಕುರಿಕೆ ಸೋಮ

ನಾಥ ಮೊದಲಾದವರನ್ನು ಕುರಿತು ಕನ್ನಡದಲ್ಲಿ ಕಾವ್ಯಗಳು ನಿರ್ಮಾಣ ವಾದುವು. ಇದು ಇಷ್ಟಕ್ಕೇ ನಿಲ್ಲಲಿಲ್ಲ. ಕನ್ನಡಿಗರಾದ ಬಸವಣ್ಣ, ಚೆನ್ನ ಬಸವಣ್ಣ, ಪ್ರಭುದೇವ ಮೊದಲಾದವರನ್ನು ಕುರಿತು, ಸಂಸ್ಕೃತ, ತೆಲುಗು, ತಮಿಳು, ಮರಾಠಿ ಮೊದಲಾದ ಭಾಷೆಗಳಲ್ಲಿಯೂ ಕಾವ್ಯಗಳೂ, ಪುರಾಣ ಗಳೂ ನಿರ್ಮಾಣವಾದುವು. ಇದರಿಂದ ದಕ್ಷಿಣ ಹಿಂದೂಸ್ಥಾನದ ವಾಙ್ಮಯ ಪ್ರಪಂಚದಲ್ಲಿಯೇ ಬಲವಾದ ಕ್ರಾಂತಿಯುಂಟಾಯಿತು. ಕನ್ನಡ ಬಾಷೆಯೇ ಅಲ್ಲದೆ ತೆಲುಗು, ತಮಿಳು ಬಾಷೆಗಳಲ್ಲಿಯೂ ವೀರಶೈವ ಕವಿಗಳ ಕ್ರಾಂತಿಯ ಕಿಡಿಗಳು ವೀರಶೈವ ಧರ್ಮ ಸಂದೇಶದೊಡನೆ ಬೇರೂರಿದುವು. ಇದರಿಂದ ಜನಸಾಮಾನ್ಯರು ಸಾಹಿತ್ಯದ ಸವಿಗಾಣಲು ಕಾರಣವಾಯಿತು.

ವೀರಶೈವ ಕವಿಗಳು ವರ್ಣನೆಯಲ್ಲಿಯೂ ಹೊಸತನವನ್ನು ತೋರಿದರು. ರಾಘವಾಂಕ, ಷಡಕ್ಷರದೇವರಂಥವರ ಕಾವ್ಯಗಳಲ್ಲಿ ಅಂತಹ ನೂತನ ವರ್ಣನೆ ಗಳನ್ನು ಕಾಣಬಹುದು. ಪ್ರತಿಯೊಬ್ಬ ಮಹಾಕವಿಯೂ ತನ್ನ ಗ್ರಂಥದ ಪ್ರಾರಂಭದಲ್ಲಿ ಕೇವಲ ಶಿವ, ಶಿವೆ, ನಂದಿ, ಭೃಂಗಿ ಮೊದಲಾದ ಪ್ರಮಥ ರನ್ನೂ ಶಿವಶರಣರನ್ನೂ, ಶಿವಕವಿಗಳನ್ನೂ ಸ್ಮರಿಸುವ ಪರಿಪಾಠವನ್ನೇ ಅಲ್ಲದೆ, ಸಮುದ್ರವರ್ಣನೆಯಿಂದ ಕಾವ್ಯವನ್ನು ಪ್ರಾರಂಭಿಸುವ ಪದ್ಧತಿಯನ್ನು ಮೊದಲುಮಾಡಿದರು. ಪ್ರತಿಯೊಂದು ಅಧ್ಯಾಯ ಅಥವಾ ಅಶ್ವಾಸಗಳ ಆದ್ಯಂತದಲ್ಲಿ ಶಿವಪಾರ್ವತಿಯರ ಸ್ತೋತ್ರಗಳು ಕಂಗೊಳಿಸಿದುವು. ವೀರಶೈವ ವಚನಕಾರರಂತೆ ವೀರಶೈವ ಕವಿಗಳೂ ತಮ್ಮ ಕಾವ್ಯಗಳಿಗೆ ತಮ್ಮ ತಮ್ಮ ಇಷ್ಟದೇವತೆಗಳ ಅಂಕಿತವನ್ನು ಇಡುವ ಪದ್ಧತಿಯನ್ನು ಪ್ರಾರಂಭಿಸಿದರು. ಹರಿಹರ, ರಾಘವಾಂಕ ಸೋಮರಾಜ, ವಿರೂಪಾಕ್ಷ ಪಂಡಿತ ಮೊದಲಾದವರು ಪಂಪಾವಿರೂಪಾಕ್ಷನನ್ನೂ, ಎಳಂದೂರು ಷಡಕ್ಷರದೇವನು ದನುಗೂರಿನ ಶಿವ ಲಿಂಗೇಶ್ವರನನ್ನೂ, ವಿರಕ್ತ ತೋಂಟದಾರ್ಯನು ನಿರಂಜನ ಲಿಂಗವನ್ನೂ, ಚಾಮರಸನು ಗುಹೇಶ್ವರ ಲಿಂಗವನ್ನೂ, ಪದ್ಮಣಾಂಕನು ವಿಶ್ವನಾಥನನ್ನೂ, ನಿಜಗುಣನು ಶಂಭುಲಿಂಗನನ್ನೂ, ಸರ್ಪಭೂಷಣನು ಗುರುಸಿದ್ಧನನ್ನೂ ತಮ್ಮ ಕಾವ್ಯಗಳಿಗೆ ಅಂಕಿತಗಳೆಂದು ಸ್ವೀಕರಿಸಿದರು. ಮುಂದಿನ ಕುಮಾರ ವ್ಯಾಸ, ಲಕ್ಷ್ಮೀಶಾದಿ ಬ್ರಾಹ್ಮಣ ಮಹಾಕವಿಗಳೂ, ಪುರಂದರದಾಸ,

ಜಗನ್ನಾಥ ದಾಸಾದಿ ದಾಸವರ್ಯರೂ ಈ ಅಂಕಿತದ ಸಂಪ್ರದಾಯವನ್ನು ಸ್ವೀಕರಿಸಿರುವರೆಂಬುದಕ್ಕೆ ಕನ್ನಡ ಸಾಹಿತ್ಯ ಚರಿತ್ರೆಯು ನಿದರ್ಶನವಾಗಿದೆ.

ವೀರಶೈವ ಕವಿಗಳು ಮತ ಪ್ರಚಾರಕ್ಕಾಗಿ ಕಾವ್ಯಗಳನ್ನು ಬರೆದರೆಂಬುದು ಬಹುಮಟ್ಟಿಗೂ ಒಪ್ಪಿಕೊಳ್ಳತಕ್ಕ ಮಾತು. ಚೆನ್ನಬಸವಪುರಾಣ, ಪದ್ಮರಾಜ ಪುರಾಣ, ಸಿದ್ಧೇಶ್ವರ ಪುರಾಣ, ವೀರಶೈವ ಮಹಾಪುರಾಣ, ಶಿವತತ್ವ ಚಿಂತಾಮಣಿ, ವೃಷಭೇಂದ್ರವಿಜಯ ಈ ಗ್ರಂಥಗಳಲ್ಲಿ ಸಾಹಿತ್ಯಾಂಶಗಳಿಗೆ ಇರುವಷ್ಟು ಪ್ರಾಮುಖ್ಯತೆಯೇ ಮತತತ್ವ ನಿರೂಪಣೆಗೂ ಉಂಟು. ಆದರೆ ಶುದ್ಧ ಸಾಹಿತ್ಯ ಸ್ವರೂಪದ ಗ್ರಂಥಗಳನ್ನು ಲಿಂಗವಂತ ಕವಿಗಳು ಬರೆದಿಲ್ಲವೆಂದು ಹೇಳುವಂತಿಲ್ಲ. ಹರಿಹರನ ಗಿರಿಜಾಕಲ್ಯಾಣ, ರಾಘವಾಂಕನ ಹರಿಶ್ಚಂದ್ರ ಕಾವ್ಯ, ಸೋಮರಾಜನ ಶೃಂಗಾರಸಾರ, ಷಡಕ್ಷರ ಕವಿಯ ರಾಜಶೇಖರ ವಿಳಾಸ ಮತ್ತು ಶಬಶಂಕರವಿಳಾಸ, ಗುಬ್ಬಿ ಮಲ್ಲಣಾರ್ಯನ ಭಾವ ಚಿಂತಾರತ್ನ, ಸುರಂಗ ಕವಿಯ ತ್ರಿಷಷ್ಟಿ ಪುರಾತನ ವಿಲಾಸ, ಬಸವಪ್ಪ ಶಾಸ್ತ್ರಿಯ ದಮಂತೀ ಸ್ವಯಂವರ ಅಂತೆಯೇ ಕಂಚಿಯ ಶಂಕರಾರಾಧ್ಯನ ಸಂಸ್ಕೃತ ಬಸವೇಶವಿಜಯ, ಷಡಕ್ಷರ ಕವಿಯ ಸಂಸ್ಕೃತ ಕವಿಕರ್ಣ ರಸಾಯನವ್ ಇತ್ಯಾದಿ ಕಾವ್ಯಗಳು ಶುದ್ಧ ಸಾಹಿತ್ಯ ಪ್ರಧಾನವೆನಿಸಿವೆ. ಆದುದರಿಂದ ಧರ್ಮದ ಸೇವೆಯ ಜೊತೆಗೆ ಸಾಹಿತ್ಯ ಸೇವೆಯೂ ಈ ಕವಿಗಳ ಹೆಗ್ಗುರಿಯಾತ್ತೆಂಬುದಕ್ಕೆ ಮೇಲೆ ಕಂಡ ಗ್ರಂಥಗಳು ನಿದರ್ಶನವಾಗಿವೆ. ನಂದಿ ಛಂದಸ್ಸನ್ನು ಬರೆದ ಕವಿನಂದಿ, ಶಬ್ದಮಣಿದರ್ಪಣಕ್ಕೆ ವ್ಯಾಖ್ಯಾನಮಾಡಿದ ನಿಟ್ಟೂರು ನಂಜಯ್ಯ, ಮತ್ತು ಲಿಂಗಣಾರಾಧ್ಯ, ಅಲಂಕಾರ ಗ್ರಂಥಗಳನ್ನು ಬರೆದ ಮದನತಿಲಕದ ಕಲ್ಲರಸ, ಕನ್ನಡ ಕುವಲಯಾನಂದವನ್ನು ಬರೆದ ಸಿರಸಂಗಿಯ ಜಾಯೇಂದ್ರಪ್ರಭು, ಕನ್ನಡ ಶಬ್ದಾದರ್ಶದ ಕೈ॥ ಬಿ. ಮಲ್ಲಪ್ಪನವರು ಮುಂತಾದವರು ವೀರಶೈವರೆಂಬುದನ್ನು ನೆನಪಿಡಬೇಕಾಗಿದೆ.

ವೀರಶೈವ ಧರ್ಮವು "ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟ, ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರು" "ಸತ್ಯವ ನುಡಿವುದೇ ದೇವಲೋಕ, ಮಿಥ್ಯವನುಡಿವುದೇ ಮರ್ತ್ಯಲೋಕ", "ಸದಾಚಾರವೇ ಸ್ವರ್ಗ, ದುರಾ

ಚಾರವೇ ನರಕ", "ಕಲ್ಲನಾಗರ ಕಂಡರೆ ಹಾಲನೆರೆಯೆಂಬರು, ದಿಟದ ನಾಗರ ಕಂಡರೆ ಹೊಡೆ ಎಂಬರು" ಉಣುವ ಜಂಗಮ ಬಂದರೆ ಉಣಬಡಿಸ ಲೊಲ್ಲರು, ಉಣದಿರ್ಪ ಲಿಂಗಗಳಿಗೆ ಎಡೆಮಾಡಿ ನಮಿಪರು ಬಣಗುಗಳು", ದಯವಿಲ್ಲದ ಧರ್ಮವಾವುದಯ್ಯಾ, ದಯವಿರಬೇಕು ಸರ್ವಪ್ರಾಣಿಗಳಲ್ಲಿ" "ಕಾಯಕವೇ ಕೈಲಾಸ", ದೇವನೊಬ್ಬನೇ ಕಾಣಿರೋ" ಲಿಂಗಮುಖ ಜಂಗಮ", "ವರ್ಣಾನಾಂ ಕಿಂ ಪ್ರಯೋಜನಂ ?", 'ಲಿಂಗಭೋಗೋಪ ಭೋಗಿ', "ಉಂಡು ಉಪವಾಸಿ, ಬಳಸಿ ಬ್ರಹ್ಮಚಾರಿ" ಇತ್ಯಾದಿ ಮಹತ್ತ್ವದ ನಿಗೂಢ ತತ್ವಗಳನ್ನು ನಿರೂಪಿಸತಕ್ಕುದು. ಶುದ್ಧ ಸಾಹಿತ್ಯವು ಕೇವಲ ಆನಂದವನ್ನೇ ಧ್ಯೇಯವನ್ನಾಗಿ ಉಳ್ಳುದಾದರೆ, ವೀರಶೈವ ಸಾಹಿತ್ಯವು ಆನಂದದ ಜತೆಗೆ ಆಧ್ಯಾತ್ಮಿಕವನ್ನೂ ಮುಖ್ಯವಾದ ಗುರಿಯನ್ನಾಗಿ ಉಳ್ಳು ದಾಗಿದೆ ಎಂಬುದನ್ನು ಹೇಳುವುದೇ ಇಲ್ಲಿ ನಮ್ಮ ತಾತ್ಪರ್ಯವಾಗಿದೆ. ಅದು ನಿಮಿತ್ತವೇ ವೀರಶೈವ ವಚನ ಸಾಹಿತ್ಯವು ಒಂದು ದೃಷ್ಟಿಯಿಂದ ಸಾಹಿತ್ಯವೂ ಅಹುದು. ಇನ್ನೊಂದು ದೃಷ್ಟಿಯಿಂದ ಶಾಸ್ತ್ರವೂ ಅಹುದು. ಆದುದ ರಿಂದಲೇ ಅದು ಹೃದ್ಯವು ಎನಿಸಿದೆ. ವೀರಶೈವ ಸಾಹಿತ್ಯದ ಗುಟ್ಟು ಗುರಿಗಳೇ ನೆಂಬುದನ್ನು ನಾವು ಅಲ್ಲಿ ಅರಿಯಬಹುದು.

ಓದುಗಬ್ಬಗಳಿಗಿಂತ ಹಾಡುಗಬ್ಬಗಳು ಜನತೆಯ ಹಿತದೃಷ್ಟಿಯಿಂದ ಹೆಚ್ಚು ಉಪಯುಕ್ತವಾದುವು ಎಂದು ಪ್ರಾಜ್ಞರು ಹೇಳುತ್ತಾರೆ. ನಮ್ಮ ಅನು ಭವದಿಂದ ಕೂಡ ಇದು ನಿಜವೆನಿಸುತ್ತದೆ. ಕನ್ನಡ ನಾಡಿನಲ್ಲಿ ಪಂಪನ ಆದಿ ಪುರಾಣದಿಂದ ಆದ ಲಾಭಕ್ಕಿಂತ, ರತ್ನಾಕರ ವರ್ಣಿಯ ಭರತೇಶ ವೈಭವ ದಿಂದ ಆದ ಲಾಭ ಹೆಚ್ಚಿನದು. ರುದ್ರಭಟ್ಟನ ಜಗನ್ನಾಥ ವಿಜಯದಿಂದಾದ ಪ್ರಯೋಜನಕ್ಕಿಂತ, ಪುರಂದರದಾಸರ ಹಾಡುಗಳಿಂದಾದ ಪ್ರಯೋಜನ ಹೆಚ್ಚಿನದು. ಸೋಮರಾಜನ ಶೃಂಗಾರಸಾರದಿಂದ ಆದ ಪ್ರಯೋಜನಕ್ಕಿಂತ ಸೋಮಕವಿಯ ಸೋಮೇಶ್ವರಶತಕದಿಂದಾದ ಪ್ರಯೋಜನ ಹಿರಿದಾದುದ್ದು ಎಂಬ ಈ ವಿಷಯವನ್ನು ಜನಜೀವನದ ಪರಿಚಯವಿರುವವರೆಲ್ಲರೂ ಒಪ್ಪಿ ಕೊಳ್ಳಬೇಕಾಗುತ್ತದೆ. ಆದುದರಿಂದಲೇ ಹಾಡುಗಬ್ಬಗಳು ಸಾಹಿತ್ಯದಲ್ಲಿ ಜೀವಂತ ಹಾಗೂ ಗಂಡು ಕಾವ್ಯಗಳೆನಿಸುತ್ತವೆ.

ವೀರಶೈವ ಸಾಹಿತ್ಯವು ಹಾಡುಗಬ್ಬಗಳಿಗೆ ಹೆಸರಾದುದು. ಷಟ್ಪದಿಗಳು, ಗೀತೆಗಳು, ವಚನಗಳು, ದ್ವಿಪದಿಗಳು, ಚೌಪದಿಗಳು, ತ್ರಿಪದಿಗಳು, ಶತಕಗಳು, ಕೋಲುಪದಗಳು, ಯಕ್ಷಗಾನಗಳು ಇವೆಲ್ಲವೂ ಈ ಜಾತಿಗೆ ಸೇರಿದುವು. ಕೇವಲ ರಾಜಾಸ್ಥಾನದಲ್ಲಿ ಕವಿ ಪಂಡಿತ ಗಮಕಿಗಳಿಂದ ಓದಲ್ಪಟ್ಟು ಪಂಡಿತರನ್ನು ತಲೆದೂಗಿಸುವ ರಾಜಶೇಖರ ವಿಳಾಸ, ಗಿರಿಜಾ ಕಲ್ಯಾಣ, ಕವಿಕರ್ಣ ರಸಾಯನ ದಂತಹ ಗ್ರಂಥಗಳು ನಮಗೆ ಬೇಡವೆಂಬುದು ಇಲ್ಲಿ ನಮ್ಮ ತಾತ್ಪರ್ಯವಲ್ಲ. ಗುಡಿಗೆ ಗೋಪುರವಿದ್ದಂತೆ ನಮ್ಮ ನುಡಿಯ ಗುಡಿಗೆ ಇಂಥವುಗಳು ಬೇಕೇಬೇಕು. ಆದರೆ ಗೋಪುರವನ್ನು ನೋಡಿ ತಲೆದೂಗುವ ನಾವು, ಗುಡಿಯ ನೆಲಗಟ್ಟು ಘಟ್ಟಿಯಾಗಿರಬೇಕೆಂದೂ ಗೋಪುರವನ್ನು ಹೊರುವ ಕಂಭಗಳು ಭದ್ರವಾಗಿರಬೇಕೆಂದೂ ಅಪೇಕ್ಷಿಸುವುದು ಅಪರಾಧವಲ್ಲವಷ್ಟೆ ? ಆದುದರಿಂದ ಜನಸಾಮಾನ್ಯರನ್ನು ಹಾದಿಗೆ ತರುವ, ಜನಜೀವನದಲ್ಲಿ ರಸಾನುಭವವನ್ನುಂಟು ಮಾಡುವ ಹಾಡುಗಬ್ಬಗಳು ಜನತೆಯ ದೃಷ್ಟಿಯಿಂದ ಪ್ರಧಾನವಾದುವುಗಳು ಎಂಬುದಿಷ್ಟೇ ಇಲ್ಲಿ ನಮ್ಮ ತಾತ್ಪರ್ಯ. ಕನ್ನಡ ನಾಡಿನಲ್ಲಿ ನಿಜಗುಣ ಶಿವಯೋಗಿಯ ಕೈವಲ್ಯಪದ್ಧತಿ, ಪುರಾತನರ ತ್ರಿವಿಧಿ, ಅನುಭವಸಾರ, ಅನುಭವಬೋಧೆ, ಪರಮಾರ್ಥ ಗೀತೆ ಮೊದಲಾದ ಹಾಡುಗಬ್ಬಗಳಿಂದ ಆದ ಉಪಕಾರವು ಅನುಪಮವಾದುದು. ಕನ್ನಡಿಗರಲ್ಲಿ ಅಧ್ಯಾತ್ಮವಿದ್ಯೆಯನ್ನು ಬಳೆಸಲು ಶಿವಯೋಗಿ ನಿಜಗುಣನು ಆದಿಮ ಗುರುವೆನಿಸಿದ್ದಾನೆ. ಶ್ರೀ ಸರ್ಪಭೂಷಣ ಶಿವಯೋಗಿ, ಶ್ರೀ ಘನಮಠಾರ್ಯ, ಶ್ರೀ ಮುಪ್ಪಿನ ಷಡಕ್ಷರ, ಸರ್ವಜ್ಞಮೂರ್ತಿ, ಮೈಲಾರದ ಬಸವಲಿಂಗ, ಮುಳುಗುಂದ ಮಹಾಂತಸ್ವಾಮಿ, ಶಾಲ್ಯದ ಕೃಷ್ಣಪ್ರಭು, ಮತು ಕೂರು ನಂಜುಂಡ ಶಿವಯೋಗಿ, ನೊಣವಿನಕೆರೆಯ ಕರಿಬಸವಸ್ವಾಮಿ ಮೊದಲಾದ ಮಹಾತ್ಮರು ನಿಜಗುಣ ಶಿವಯೋಗಿಯ ಪರಂಪರೆಯನ್ನು ಮುಂದುವರಿಸಿದ ಕೀರ್ತಿಗೆ ಭಾಗಿಗಳಾಗಿದ್ದಾರೆ. ಶಿವಯೋಗಿಗಳಾದ ಇವರ ಹಾಡುಗಬ್ಬಗಳು ಕನ್ನಡ ನಾಡಿನಲ್ಲಿ ಶಿವಭಕ್ತಿ, ಸದಾಚಾರಗಳ ಹುಲುಸಾದ ಬೆಳೆಯನ್ನು ಬಳೆದು ಶಿವಾನುಭವದ ಸುಮಧುರಫಲವನ್ನು ಯಥೇಚ್ಛವಾಗಿ ಕೊಟ್ಟಿವೆ. ಹಾಗೂ ವೀರಶೈವ ಸಾಹಿತ್ಯವನ್ನು ಅತ್ಯಂತ ಜನಪ್ರಿಯಗೊಳಿಡೆ.

ವೀರಶೈವ ವಾಙ್ಮಯದಲ್ಲಿ ಶತಕಗಳಿಗೆ ಬಹಳ ಪ್ರಾಮುಖ್ಯತೆ ಇದೆ. ಹಂಪೆಯ ಹರಿಹರನು ಇತರ ವಿಷಯಗಳಂತೆ ಈ ವಿಷಯದಲ್ಲಿಯೂ ಮಾರ್ಗ ದರ್ಶಕನು. ಅವನ ಪಂಪಾಶತಕ, ರಕ್ಷಾಶತಕ ಮತ್ತು ವಿರೂಪಾಕ್ಷ ಶತಕ ಗಳು ಆ ಕವಿಯ ಭಕ್ತಿ ಜ್ಞಾನ ವೈರಾಗ್ಯ ಗುಣಗಳ ಮೂರು ಮಹಾ ಫಲಗಳು. ಅಲ್ಲಿಂದ ಮುಂದೆ ಮಗ್ಗೆಯ ಮಾಯಿದೇವನ ಶತಕತ್ರಯವು ಗಣ್ಯವಾದುದು. ಜನಪ್ರಿಯತೆಯಲ್ಲಿ ಸೋಮ ಕವಿಯ ಸೋಮೇಶ್ವರ ಶತಕವು ಅಗ್ರಗಣ್ಯವಾದುದು. ನಿಜಲಿಂಗ ಶತಕ, ಚೆನ್ನಮಲ್ಲ ಶತಕ, ಬಸವಪ್ಪಶಾಸ್ತ್ರಿಯ ನೀತಿ ಶತಕ ಮತ್ತು ಕನ್ನಡ ಭರ್ತೃಹರಿ ಶತಕತ್ರಯ, ನಿರಂಜನ ಶತಕ, ಷಡಕ್ಷರ ಕಂದ, ಸ್ವಾದಿ ಸದಾಶಿವರಾಜನ ಪಂಚಶತಕಗಳು, ಕರಿಬಸವ ಶಾಸ್ತ್ರಿ ಗಳ ನಯ ಶತಕ, ಆಂಧ್ರ ವೃಷಾಧಿಪ ಶತಕಮು ಮೊದಲಾದುವುಗಳು ಇಲ್ಲಿ ಸ್ಮರಣಾರ್ಹವಾದುವು. ಇಂತಹ ನೂರು ಶತಕಗಳನ್ನು ಉಳ್ಳ ಒಂದು ತಾಳೆಯೋಲೆಯ ಗ್ರಂಥವನ್ನು ಮೈಸೂರಿನಲ್ಲಿದ್ದ ಆಸ್ಥಾನ ಮಹಾವಿದ್ವಾನ್, ಕರ್ಣಾಟಕ ಭಾಷಾರತ್ನಂ ಕೈ|| ಕರಿಬಸವ ಶಾಸ್ತ್ರಿಗಳ ಮನೆಯಲ್ಲಿ ನಾನು ಕಂಡುದುಂಟು. ಪೂಜ್ಯರಾದ ಕನ್ನಡ ಕವಿ ಚರಿತ್ರೆಕಾರರೂ ಈ ಗ್ರಂಥವನ್ನು ಅಲ್ಲಿ ಕಂಡಿದ್ದರು. ಈಗ ಆ ಗ್ರಂಥವು ಅಲ್ಲಿ ಇದೆಯೋ ಇಲ್ಲವೋ ತಿಳಿಯದು. ಮುಖ್ಯವಾಗಿ ವೀರಶೈವ ವಾಙ್ಮಯದಲ್ಲಿ ಶತಕಗಳ ಪ್ರಭಾವ ಎಷ್ಟೊಂದು ವಿ.ಗಿಲಾದುದು ಎಂಬುದನ್ನು ತಿಳಿಸುವುದು ಇಲ್ಲಿ ನಮ್ಮ ತಾತ್ಪರ್ಯ.

ಶತಕಗಳು ನೀತಿ ಭರಿತಗಳಾಗಿವೆ. ಲೋಕಾನುಭವವನ್ನು ನಿರೂಪಿಸು ತ್ತವೆ. ಜಾಣ್ನುಡಿಗಳಿಂದ ಕಂಗೊಳಿಸುತ್ತವೆ. ಚಿಕ್ಕ ಮಾತಿನಲ್ಲಿ ದೊಡ್ಡ ಅರ್ಥವನ್ನು ಹೇಳುತ್ತವೆ. ಕಂಠಪಾಠ ಮಾಡಲು ಅರ್ಹವಾಗಿವೆ. ಆಂಧ್ರ ಭಾಷೆಯಲ್ಲಿ ಪಾಲ್ಕುರಿಕೆ ಸೋಮನಾಥನು ಬರೆದಿರುವ "ವೃಷಾಧಿಪ ಶತಕಮು" ಎಂಬುದು ಕನ್ನಡದ ಹರಿಹರಾದಿಗಳ ಶತಕಗಳಿಂದ ಸ್ಫೂರ್ತಿ ಯನ್ನು ಪಡೆದಿರಬೇಕೆಂದು ನಮಗೆ ಭಾಸವಾಗುತ್ತದೆ. ಕನ್ನಡದ ಹಾಡುಗಬ್ಬ ಗಳ ಗುಂಪಿಗೆ ಸೇರಿದ ಈ ಶತಕಗಳು ಕನ್ನಡ ಸಾಹಿತ್ಯ ಸಂಸ್ಕೃತಿಗೆ ಮಹೋಪ ಕಾರಮಾಡಿವೆ. ಕನ್ನಡಿಗರ ಜೀವನಕ್ಕೆ ನವಚೈತನ್ಯವನ್ನು ಉಂಟುಮಾಡಿವೆ.

ಕವಿತೆಯು ಸಂಸ್ಕಾರ ಜನ್ಯವಾದುದು. ಅದು ಬಹು ಜನ್ಮಗಳ ಪುಣ್ಯ ಪರಿಪಾಕದಿಂದ ಪ್ರಾಪ್ತವಾಗತಕ್ಕುದು. ಸಂಸ್ಕಾರವು ಕವಿತೆಗೆ ಮೂಲಕಾರಣ. ದೇಶಾಟನ, ಪಂಡಿತ ಭಾಷಣ, ಶಾಸ್ತ್ರಾಧ್ಯಯನ ಮೊದಲಾದುವು ಅದಕ್ಕೆ ಪರಿಪೋಷಕವಾದುವು. ಕವಿಯು ಅಳಿಯುವನು. ಕೃತಿಯು ಉಳಿಯುವುದು. ಕವಿಯೇ ಸರ್ವರೊಳುತ್ತಮಂ, ನಾನೃಷಿಃ ಕುರುತೇ ಕಾವ್ಯಂ, ಶಾಪಾನು ಗ್ರಹ ಸಮರ್ಥರಲ್ಲವೆ ಕವಿಗಳ್, ಪಾಪಮಿದು ಪುಣ್ಯಮಿದು ಉಚಿತಮಿದು ಅನುಚಿತಮಿದು ಎಂಬುದನ್ನು ತಿಳಿಯ ಹೇಳತಕ್ಕುದು ಸತ್ಕವಿತೆಯ ಲಕ್ಷಣ ಇತ್ಯಾದಿ ವಿಷಯಗಳನ್ನು ವಿಶ್ವದ ಸಾಹಿತಿಗಳೆಲ್ಲರೂ ಒಪ್ಪಿಕೊಳ್ಳುತ್ತಾರೆ. ಆದರೆ, ಕವಿತೆಯು ಯಾರಿಗೆ ಸಮರ್ಪಣೀಯವಾದುದು ? ಕಥಾನಾಯಕ ರಾಗಲು ಅರ್ಹತೆಯುಳ್ಳವರು ಯಾರು ? ಎಂಬ ಬಗ್ಗೆ ವೀರಶೈವ ಕವಿಗಳು ತಮ್ಮದೇ ಆದ ಒಂದು ಉದಾರ ಧೋರಣವನ್ನು ಸ್ವೀಕರಿಸಿದ್ದಾರೆ.

ಕನ್ನಡ ಕವಿ ಸಾರ್ವಭೌಮನಾದ ಹರಿಹರನು ತನ್ನ ಪಂಪಾಶತಕದಲ್ಲಿ

ವೃ॥ ಮನುಜರ ಮೇಲೆ ಸಾವವರಮೇಲೆ ಕನಿಷ್ಠರ ಮೇಲೆ ಪದ್ಯಮಂ ।
ತನತನಗಿಂದ್ರ ಚಂದ್ರ ರವಿ ಕರ್ಣ ದಧೀಚಿ ಬಲೀಂದ್ರರೆಂದು ನೀ ।
ನನವರತಂ ಪೊಗಳ್ದು ಕೆಡಬೇಡೆಲೆ ಮಾನವ ನೀನಪರ್ಸಿಶಂ ।
ನೆನೆಪೊಗಳರ್ಚಿಸೆಮ್ಮ ಘನಪೆಂಪಿನ ಸೊಂಪಿನ ಹಂಪೆಯಾಳ್ದನಂ।

ಎಂದು ಹೇಳಿ ವೀರಶೈವ ಕವಿಗಳಿಗೆ ಶಿವಪಥದ ಹಾದಿಯನ್ನು ತೋರಿಸಿ ಕೊಟ್ಟಿದ್ದಾನೆ. ಹಲವು ನರಕವಿಗಳು 'ಪೂಗಣ್ಣ'ನನ್ನು 'ಕಮಲಾಕ್ಷ' ಎಂದು ಹೊಗಳಿ ಹೊಟ್ಟೆಯನ್ನು ಹೊರೆದುದನ್ನು ಕಂಡು ಹರಿಹರನು ಬೇಸರಪಟ್ಟು ಇಂತಹ ಉತ್ತಮ ಪಂಥವನ್ನು ತಮ್ಮವರಿಗೆ ಹಾಕಿ ಕೊಟ್ಟಿರಬೇಕು. ಅದ ಕ್ಕಾಗಿಯೇ ಅವನ ಶಿಷ್ಯನಾದ ರಾಘವಾಂಕನು ಶಿವಭಕ್ತರಿಗಾಗಿ ಹೇಳಿದ ತನ್ನ ಗ್ರಂಥಗಳಿಗೆ "ಪಾಲಕರು ಶಿವಭಕ್ತರ್ಕಳ್" ಎಂದು ಹೇಳಿ "ಪರರ....ನುತಿಸ ದಿರ್ಪ ಭಾಷೆಯು ತನ್ನ ಮನದೊಳಗೆ ಹಿಡಿದಿರ್ಪನು" ಎಂದು ಹೇಳಿಕೊಂಡು ಶರಣರನ್ನು ಕುರಿತು ಶ್ರೇಷ್ಠ ಕಾವ್ಯಗಳನ್ನು ಕಟ್ಟಿದ್ದಾನೆ. ಪುರಾತನ ವಿಲಾಸದ ಸುರಂಗ ಕವಿಯು "ಸಲೆ ಶಿವನಂ ಪೊಗಳ್ವ ಕವಿಯ ಜನ್ಮವೆ ಸಫಲಂ" "ಸನ್ಮತಿಯಾದುದಕ್ಕೆ ಕವಿ ನೀಂ ಕಾತ್ಯಾಯನೀ ಪತಿಯಂ ಬೇಗಂ ಪೊಗಳ್"

"ಮಾನವ ಸ್ತುತಿಗಂಗೈಸದಿರ್ ಅಲ್ಪಕಾರ್ಯಂ ಪಾಲುಂಡು ಮೇಲುಂಬರೇ?" ಜಗಮರಿಯಲ್ ಸುರಂಗ ಕವಿ ನಾಲಗೆಯಂ ಗಿರಿಶಂಗೆ ಮಾರಿದಂ" ಎಂದು ಹೇಳಿ ಹರಿಹರನ ಪಂಥವನ್ನು ಮುಂದುವರಿಸಿದ್ದಾನೆ. ವೀರಶೈವ ಕವಿಗಳಿಗೆ ಸೀಮಾ ಪುರುಷನೆನಿಸಿದ ಷಡಕ್ಷರದೇವನು ತನ್ನ ರಾಜಶೇಖರ ವಿಳಾಸ ಮಹಾಕಾವ್ಯದಲ್ಲಿ.

ಕಂ॥ ರಸೆಯೊಳ್ ರಸವತ್ಕವಿತೆಯ ।
ನುಸುರಲ್ಪಡೆದಸಮನಯನನಂ ಪೊಗಳದೆ ಮಾ ॥
ನಿಸರಂ ಸುರರಂ ಪೊಗಳ್ವುದು ।
ಕಸವರಮಂ ಕಳೆದು ಕಸವನಾಂತವೊಲಕ್ಕುಂ ॥

ಎಂದು ಹೇಳಿ,

ಅದರಿಂದೆ ಮಹಿತ ಮಹಿಮಾ ।
ಸ್ಪದನಂ ಶಿವನಂ ತದೀಯ ಶರಣ ವ್ರಜಮಂ ॥
ಪದೆದು ಮುದದೊದವೆ ಬಲ್ಲಂ ।
ದದೆ ನುತಿಸೆಂ ನು ತಿಸೆ ನುಳಿದ ಸುರರಂ ನರರಂ ॥

ಎಂದು ಶಪಥಮಾಡಿ, ಶಿವಾರ್ಪಿತವಾದ ಭಾವದಿಂದ ಕವಿತೆಯನ್ನು ಬರೆದು "ಪಂಪಾಪುರದರಸ ವಿರೂಪಾಕ್ಷ ಸಾಕ್ಷಾತ್ಸು ಪುತ್ರಂ" ಎನಿಸಿದ ಗುರು ಹರೀಶ್ವರನ ಬಗ್ಗೆ ತನ್ನ ಭಕ್ತಿ ಗೌರವಗಳನ್ನು ತೋರಿಸುವುದಕ್ಕಾಗಿ.

ವೃ।। ಧರೆಯೊಳ್ ಮೇಣ್ ಪುಟ್ಟಪುಟ್ಟುತ್ತುರುಳ್ವನರರ ಮೇಲುರ್ವಿಕಬ್ಬಂಗಳಂ ಬಿ।
ತ್ತರಿಸುತ್ತಂ ಸಪ್ರಯಾಸಂ ಕೆಲಕೆಲರಕಟಾ ಕಬ್ಬಿಗರ್ ಕೆಟ್ಟುಪೋದರ್ ।।
ಹರಿದೇವಂ ದೇವದೇವೋತ್ತಮನ ಶರಣರಂ ಪಾಡಿ ಕೈವಲ್ಯಲಕ್ಷ್ಮೀ ।
ವರನಾದಂ ಮತ್ತಮಂಗತ್ಯಧಿಕ ಶಿವಕವೀಂದ್ರರ್ಗದಾರ್ ಸಾಟಿಯಪ್ಪರ್? ।।

ಎಂದು ಹೇಳಿರುವನು. ಇದೇ ಕವಿಯು ತನ್ನ ಕವಿಕರ್ಣ ರಸಾಯನಂ ಎಂಬ ಕಾವ್ಯದಲ್ಲಿ

ಶಿವಸ್ಯ ತದ್ಭಕ್ತತತೇರ್ವಿಧಾಯ। ಕೃತೀರನೇಕಾಃ ಸುಕವಿಪ್ರಣುತ್ಯಾಃ ॥
ಶಿವಸ್ಯ ಸಾಯುಜ್ಯಮಿಹಪ್ರಪನ್ನೋ। ಹರೀಶ್ವರಸ್ತೇನ ಸಮಃ ಕವಿಃ ಕಃ ॥

ಕವಿತೆಯು ಸಂಸ್ಕಾರ ಜನ್ಯವಾದುದು. ಅದು ಬಹು ಜನ್ಮಗಳ ಪುಣ್ಯ ಪರಿಪಾಕದಿಂದ ಪ್ರಾಪ್ತವಾಗತಕ್ಕುದು. ಸಂಸ್ಕಾರವು ಕವಿತೆಗೆ ಮೂಲಕಾರಣ. ದೇಶಾಟನ, ಪಂಡಿತ ಭಾಷಣ, ಶಾಸ್ತ್ರಾಧ್ಯಯನ ಮೊದಲಾದುವು ಅದಕ್ಕೆ ಪರಿಪೋಷಕವಾದುವು. ಕವಿಯು ಅಳಿಯುವವನು. ಕೃತಿಯು ಉಳಿಯುವುದು. ಕವಿಯೇ ಸರ್ವರೊಳುತ್ತಮಂ, ನಾನೃಷಿಃ ಕುರುತೇ ಕಾವ್ಯಂ, ಶಾಪಾನು ಗ್ರಹ ಸಮರ್ಥರಲ್ಲವೆ ಕವಿಗಳ್, ಪಾಪವಿದು ಪುಣ್ಯವಿದು ಉಚಿತವಿದು ಅನುಚಿತವಿದು ಎಂಬುದನ್ನು ತಿಳಿಯ ಹೇಳತಕ್ಕುದು ಸತ್ಕವಿತೆಯ ಲಕ್ಷಣ ಇತ್ಯಾದಿ ವಿಷಯಗಳನ್ನು ವಿಶ್ವದ ಸಾಹಿತಿಗಳೆಲ್ಲರೂ ಒಪ್ಪಿಕೊಳ್ಳುತ್ತಾರೆ. ಆದರೆ, ಕವಿತೆಯು ಯಾರಿಗೆ ಸಮರ್ಪಣೀಯವಾದುದು ? ಕಥಾನಾಯಕ ರಾಗಲು ಅರ್ಹತೆಯುಳ್ಳವರು ಯಾರು ? ಎಂಬ ಬಗ್ಗೆ ವೀರಶೈವ ಕವಿಗಳು ತಮ್ಮದೇ ಆದ ಒಂದು ಉದಾರ ಧೋರಣವನ್ನು ಸ್ವೀಕರಿಸಿದ್ದಾರೆ.

ಕನ್ನಡ ಕವಿ ಸಾರ್ವಭೌಮನಾದ ಹರಿಹರನು ತನ್ನ ಪಂಪಾಶತಕದಲ್ಲಿ

ವೃ॥ ಮನುಜರ ಮೇಲೆ ಸಾವವರಮೇಲೆ ಕನಿಷ್ಠರ ಮೇಲೆ ಪದ್ಯಮಂ ।
ತನತನಗಿಂದ್ರ ಚಂದ್ರ ರವಿ ಕರ್ಣ ದಧೀಚಿ ಬಲೀಂದ್ರರೆಂದು ನೀ ।
ನನವರತಂ ಪೊಗಳ್ದು ಕೆಡಬೇಡೆಲೆ ಮಾನವ ಸೀನಹರ್ಸಿಷಂ ।
ನೆನೆಪೊಗಳರ್ಚಿಸೆಮ್ಮ ಘನಸೆಂಪಿನ ಸೊಂಪಿನ ಹಂಪೆಯಾಳ್ದನಂ।

ಎಂದು ಹೇಳಿ ವೀರಶೈವ ಕವಿಗಳಿಗೆ ಶಿವಪಥದ ಹಾದಿಯನ್ನು ತೋರಿಸಿ ಕೊಟ್ಟಿದ್ದಾನೆ. ಹಲವು ನರಕವಿಗಳು 'ಪೂಗಣ್ಣ'ನನ್ನು 'ಕಮಲಾಕ್ಷ' ಎಂದು ಹೊಗಳಿ ಹೊಟ್ಟೆಯನ್ನು ಹೊರೆದುದನ್ನು ಕಂಡು ಹರಿಹರನು ಬೇಸರಪಟ್ಟು ಇಂತಹ ಉತ್ತಮ ಪಂಥವನ್ನು ತಮ್ಮವರಿಗೆ ಹಾಕಿ ಕೊಟ್ಟಿರಬೇಕು. ಅದ ಕ್ಕಾಗಿಯೇ ಅವನ ಶಿಷ್ಯನಾದ ರಾಘವಾಂಕನು ಶಿವಭಕ್ತರಿಗಾಗಿ ಹೇಳಿದ ತನ್ನ ಗ್ರಂಥಗಳಿಗೆ "ಪಾಲಕರು ಶಿವಭಕ್ತರ್ಕಳ್" ಎಂದು ಹೇಳಿ "ಪರರ....ನುತಿಸ ದಿರ್ಪ ಭಾಷೆಯು ತನ್ನ ಮನದೊಳಗೆ ಹಿಡಿದಿರ್ಪನು" ಎಂದು ಹೇಳಿಕೊಂಡು ಶರಣರನ್ನು ಕುರಿತು ಶ್ರೇಷ್ಠ ಕಾವ್ಯಗಳನ್ನು ಕಟ್ಟಿದ್ದಾನೆ. ಪುರಾತನ ವಿಲಾಸದ ಸುರಂಗ ಕವಿಯು "ಸಲೆ ಶಿವನಂ ಪೊಗಳ್ವ ಕವಿಯ ಜನ್ಮವೆ ಸಫಲಂ" "ಸನ್ಮತಿಯಾದುದಕ್ಕೆ ಕವಿ ನೀಂ ಕಾತ್ಯಾಯನೀ ಪತಿಯಂ ಬೇಗಂ ಪೊಗಳ್"

“ಮಾನವ ಸ್ತುತಿಗಂಗೈಸದಿರ್ ಅಲ್ಪಕಾರ್ಯಮಂ ಪಾಲುಂಡು ಮೇಲುಂಬರೇ?” ಜಗಮರಿಯಲ್ ಸುರಂಗ ಕವಿ ನಾಲಗೆಯಂ ಗಿರಿಶಂಗೆ ಮಾರಿದಂ” ಎಂದು ಹೇಳಿ ಹರಿಹರನ ಪಂಥವನ್ನು ಮುಂದುವರಿಸಿದ್ದಾನೆ. ವೀರಶೈವ ಕವಿಗಳಿಗೆ ಸೀಮಾ ಪುರುಷನೆನಿಸಿದ ಷಡಕ್ಷರದೇವನು ತನ್ನ ರಾಜಶೇಖರ ವಿಳಾಸ ಮಹಾಕಾವ್ಯದಲ್ಲಿ.

ಕಂ॥ ರಸೆಯೊಳ್ ರಸವತ್ಕವಿತೆಯ ।
ನುಸುರಲ್ಪಡೆದಸಮನಯನನಂ ಪೊಗಳದೆ ಮಾ ॥
ನಿಸರಂ ಸುರರಂ ಪೊಗಳ್ವುದು ।
ಕಸವರಮಂ ಕಳೆದು ಕಸವನಾಂತನ್ವೊಲಕ್ಕುಂ ॥

ಎಂದು ಹೇಳಿ,

ಅದರಿಂದೆ ಮಹಿತ ಮಹಿಮಾ ।
ಸ್ಪದನಂ ಶಿವನಂ ತದೀಯ ಶರಣ ವ್ರಜಮಂ ॥
ಪದೆದು ಮುದನೊದವೆ ಬಲ್ಲಂ ।
ದದೆ ನುತಿಪೆಂ ನುತಿಸೆ ನುಳಿದ ಸುರರಂ ನರರಂ ॥

ಎಂದು ಶಪಥಮಾಡಿ, ಶಿವಾರ್ಪಿತವಾದ ಭಾವದಿಂದ ಕವಿತೆಯನ್ನು ಬರೆದು “ಪಂಪಾಪುರದರಸ ವಿರೂಪಾಕ್ಷ ಸಾಕ್ಷಾತ್ಸು ಪುತ್ರಂ” ಎನಿಸಿದ ಗುರು ಹರೀಶ್ವರನ ಬಗ್ಗೆ ತನ್ನ ಭಕ್ತಿ ಗೌರವಗಳನ್ನು ತೋರಿಸುವುದಕ್ಕಾಗಿ.

ವೃ॥ ಧರೆಯೊಳ್ ಮೇಣ್ ಪುಟ್ಟಪುಟ್ಟುತ್ತುರುಳ್ವನರರ ಮೇಲುರ್ಬಿಕಬ್ಬಂಗಳಂ ಬಿ।
ತ್ತರಿಸುತ್ತುಂ ಸಪ್ರಯಾಸಂ ಕೆಲಕೆಲರಕಟಾ ಕಬ್ಬಿಗರ್ ಕೆಟ್ಟುಪೋದರ್ ॥
ಹರಿದೇವಂ ದೇವದೇವೋತ್ತಮನ ಶರಣರಂ ಪಾಡಿ ಕೈವಲ್ಯಲಕ್ಷ್ಮೀ ।
ವರನಾದಂ ಮತ್ತಮಂಗತ್ಯಧಿಕ ಶಿವಕವೀಂದ್ರರ್ಗದಾರ್ ಸಾಟಿಯಪ್ಪರ್? ॥

ಎಂದು ಹೇಳಿರುವನು. ಇದೇ ಕವಿಯು ತನ್ನ ಕವಿಕರ್ಣ ರಸಾಯನಂ ಎಂಬ ಕಾವ್ಯದಲ್ಲಿ

ಶಿವಸ್ಯ ತದ್ಭಕ್ತತತೇರ್ವಿಧಾಯ। ಕೃತೀರನೇಕಾಃ ಸುಕವಿಪ್ರಣುತ್ಯಾಃ ॥
ಶಿವಸ್ಯ ಸಾಯುಜ್ಯಮಿಹಪ್ರಪನ್ನೋ। ಹರೀಶ್ವರಸ್ತೇನ ಸಮಃ ಕವಿಃ ಕಃ ॥

ಎಂದು ಹರಿಹರನಿಗೆ ಸಮನಾದ ಕವಿಯು ಲೋಕದಲ್ಲಿ ಇಲ್ಲವೆಂದು ಬಹಳಷಾಗಿ ಶ್ಲಾಘಿಸಿರುವನು. ಆದುದರಿಂದಲೇ ಇದೇ ಭಾವವನ್ನು ಷಟ್ಪದಿ ಗ್ರಂಥ ಕರ್ತೃಗಳಲ್ಲಿ ಪ್ರಖ್ಯಾತನಾದ ಚಾಮರಸನು ಸ್ವೀಕರಿಸಿ, ತಾನು ಹೇಳಲು ಹೊರಟಿರುವುದು 'ಕಾಳಿಗದ ಕಥೆಯಲ್ಲ, ವಿಷಯಗಳೇಳಿಗೆಯ ವಿಧಿಯಲ್ಲ, ಹೊಟ್ಟೆಯ ಹೂಳಲಿಕೆ ಹಿಂಸೆಯನುಮಾಡುವ ಹೊಲಬುತಾನಲ್ಲ' ಮತ್ತು 'ಸತ್ತವರ ಕತೆಯಲ್ಲ, ಜನನದ ಕುತ್ತದಲಿ ಕುದಿಕುದಿದು ಕರ್ಮದ ಕತ್ತಲೆಗೆ ಸಿಲ್ಕುವರ ಸೀಮೆಯ ಹೊಲಬುತಾನಲ್ಲ, ಹೊತ್ತುಹೋಗದೆ ಪುಂಡರಾಲಿಪ ಮತ್ತಮತಿಗಳ ಗೋಷ್ಠಿಯಲ್ಲ' ಎಂದು ಹೇಳಿ, ತನ್ನ ಪ್ರಭು ಲಿಂಗ ಲೀಲೆಯು 'ಸತ್ಯ ಶರಣರು ಆಲಿಸಲು' ಅರ್ಹವಾದುದು ಎಂದು ಹೇಳಿರುವನು. ಇದೇ ಅರ್ಥದಲ್ಲಿ ಚೆನ್ನ ಬಸವಪುರಾಣ ಕರ್ತೃವಾದ ವಿರೂ ಪಾಕ್ಷ ಪಂಡಿತನು "ತಾನು ಬಣ್ಣಿಸುವ ಜನರು ಮನುಜರಲ್ಲ ಭಕ್ತರು, ಅದರಿಂ ಈ ಕಥೆಯಂ ಒಲಿದು ಕೇಳ್ವುದು" ಎಂದು ಹೇಳಿ ಹರಿಹರನ ಪಂಥಕ್ಕೆ ತಲೆಬಾಗಿರುವನು. ಮುಖ್ಯವಾಗಿ ವೀರಶೈವ ಮಹಾಕವಿಗಳು ಶಿವಶರಣರನ್ನೂ ಶಿವಲೀಲೆಗಳನ್ನೂ ಕುರಿತು ಶಿವತತ್ವ ಬೋಧೆಗಾಗಿ ಕಾವ್ಯಗಳನ್ನು ಬರೆಯ ಬೇಕೆಂಬ ಭಾವವನ್ನು ಚೆನ್ನಾಗಿ ಒಲಿಸಿಕೊಂಡಿರುವರು. ನರಸ್ತುತಿಯನ್ನು ಮಾಡಿದ್ದರಿಂದ ಗುರು ಹರಿಹರನು ತನ್ನ ಶಿಷ್ಯ ರಾಘವಾಂಕನ ಹಲ್ಲುಗಳನ್ನು ಮುರಿದನೆಂದೂ, ಸಿದ್ಧರಾಮಾದಿ ಶರಣರ ಗ್ರಂಥಗಳನ್ನು ಬರೆದು ಅವನು ಮತ್ತೆ ಹಲ್ಲುಗಳನ್ನು ಪಡೆದನೆಂದೂ ಹುಟ್ಟಿದ ಕಥೆಯು ಈ ಅರ್ಥದಲ್ಲಿಯೇ ಪ್ರಸಿದ್ಧಿಗೆ ಬಂದಿರಬೇಕು. ಕಾಲಕ್ರಮದಲ್ಲಿ ಕಟ್ಟು ಕಥೆಯಾಗಿ ಅದು ಬಳೆದು ಬಂದಿರಬೇಕು.

ವೀರಶೈವ ವಾಙ್ಮಯವು ವಿಸ್ತಾರವಾದುದು ಎಂದು ಈ ಹಿಂದೆಯೇ ಹೇಳಿದೆಯಷ್ಟೆ. ಅದು ಪ್ರಾಚೀನ ಭಾರತದ ರಾಷ್ಟ್ರ ಭಾಷೆಯಾದ–ಆರ್ಯರ ನಂಬಿಕೆಯಂತೆ ದೇವಭಾಷೆ ಎನಿಸಿದ-ಸಂಸ್ಕೃತದಲ್ಲಿ ಕೂಡ ಬಹಳಷಾಗಿ ಉಂಟು. ಕಾಮಿಕಾದಿ ವಾತುಲಾಂತವಾದ ಶಿವಾಗಮಗಳು, ಸ್ಕಾಂದ ಪುರಾಣ, ಲಿಂಗ ಪುರಾಣ ಮೊದಲಾದ ಮಹಾ ಪುರಾಣಗಳು, ವೀರಶೈವ ಮತ ವಿಷಯವನ್ನು ಹಲವೆಡೆಗಳಲ್ಲಿ ಬೋಧಿಸಿವೆ. ವೇದದಲ್ಲಿ ಕೂಡ ವೀರ

ಶೈವ ಉಂಟೆಂದು ಲಿಂಗಧಾರಣ ಚಂದ್ರಿಕೆ, ಶ್ರುತಿಸಾರ ಭಾಷ್ಯಾದಿ ಗ್ರಂಥ ಕರ್ತೃಗಳು ಹೇಳುತ್ತಾರೆ. ಸುಮಾರು ಕ್ರಿ. ಶ. ೮ ನೆಯ ಶತಮಾನದಲ್ಲಿ ಗೋಕರ್ಣ ಕ್ಷೇತ್ರದಲ್ಲಿದ್ದ ನೀಲಕಂಠನೆಂಬ ವೀರಶೈವ ಆಚಾರ್ಯನು ವೀರ ಶೈವ ಮತ ವಿಷಯವನ್ನು ಕುರಿತು ಒಂದು ಭಾಷ್ಯವನ್ನು ಬರೆದಿರುವನೆಂದು ಕ್ರಿಯಾಸಾರದಲ್ಲಿ

ನೀಲಕಂಠಶಿವಾಚಾರ್ಯ ನಾಮ್ನಾಭಾಷ್ಯಮುಚೀಕರತು।
ಶಿವಾದ್ವೈತ ಸಿದ್ಧಾಂತ ಸ್ಥಾಪಯಾಮಾಸಭೂತಲೇ ॥

(ಕ್ರಿ. ಸಾ. ಪ್ರ. ೧. ೩೧.)

ಎಂದು ಹೇಳುತ್ತಾನೆ. ಆನಂದಗಿರಿಯು ಶಂಕರ ವಿಜಯದಿಂದ ನೀಲ ಕಂಠ ಮತ್ತು ಶಂಕರಾಚಾರ್ಯರಿಗೆ ಗೋಕರ್ಣದಲ್ಲಿ ನಡೆದ ವಾದ ವಿಷಯವು ಸ್ಪಷ್ಟಗೊಳ್ಳುತ್ತದೆ. ಆದುದರಿಂದ ಕ್ರಿಯಾಸಾರಕಾರನ ಮಾತನ್ನು ನಾವು ಸಂಶಯ ದೃಷ್ಟಿಯಿಂದ ನೋಡಲು ಕಾರಣವಿಲ್ಲ. ಈ ಕ್ರಿಯಾಸಾರಕ್ಕೆ ಕೆಳದಿಯ ನಿರ್ವಾಣ ಮಂತ್ರಿಯು 'ಸಾರಸರ್ವಸ್ವ' ಎಂಬ ವಾಖ್ಯಾನ ಬರೆ ದಿದ್ದಾನೆ. ಅದುದರಿಂದ ನೀಲಕಂಠ ಶಿವಾಚಾರ್ಯನು ಮೊದಲನೆಯ ವೀರ ಶೈವ ಸಂಸ್ಕೃತ ಗ್ರಂಥಕಾರನೆಂದು ನಮಗೆ ತೋರುತ್ತದೆ. ನೀಲಕಂಠ ಭಾಷ್ಯವು ಇಂದು ಉಪಲಬ್ಧವಿಲ್ಲ. ಈ ಹೆಸರಿನ ಭಾಷ್ಯವೊಂದು ಗುಳೇದ ಗುಡ್ಡದ ಶ್ರೀಗಳಿಂದ ಬೆಂಗಳೂರಲ್ಲಿ ೧೮೯೦ ರಲ್ಲಿ ಅಚ್ಚಾಗಿ ಪ್ರಕಟವಾಗಿದೆ. ಆದರೆ ಇದು ಪ್ರಮಾಣಾರ್ಹವಲ್ಲವೆಂದು ತಿಳಿದು ಬಂದಿದೆ. ಇವನ ಶಿಷ್ಯನಾದ ಹರದತ್ತನು 'ಚತುರ್ವೇದ ತಾತ್ಪರ್ಯ ಸಂಗ್ರಹ' ಎಂಬ ಗ್ರಂಥವನ್ನು ಬರೆ ದಿದ್ದಾನೆ. ಶ್ರೀಕರಭಾಷ್ಯದಲ್ಲಿ ಹೇಳಿದ ಅಗಸ್ತ್ಯನ ಸೂತ್ರ ವೃತ್ತಿಯೂ ವೀರಶೈವ ಗ್ರಂಥವಾಗಿರಬೇಕು. ಅಲ್ಲಿಂದ ಮುಂದೆ ಸಿದ್ಧಾಂತ ಶಿಖಾಮಣಿಯ ಕರ್ತೃ ಶಿವಯೋಗಿ, ಶ್ರೀಕರ ಭಾಷ್ಯವನ್ನು ಬರೆದ ಶ್ರೀಪತಿ ಪಂಡಿತ, ಬಸವ ರಾಜೀಯನ್ನು ಬರೆದ ಪಾಲ್ಕುರಿಕಿ ಸೋಮನಾಥ, ಸಂಸ್ಕೃತ ಸಾನಂದ ಚರಿ ತೆಯ ಕೆರೆಯ ಪದ್ಮರಸ, ಶಿವಾದ್ವೈತ ಮಂಜರಿಯ ಸ್ವಪ್ರಭಾನಂದ, ಅನುಭವ ಸೂತ್ರದ ಮಾಯಿದೇವ, ಆನಂದಚಂದ್ರಿಕೆಯ ಮರಿತೋಂಟ ದಾರ್ಯ, ಲಿಂಗಧಾರಣ ಚಂದ್ರಿಕೆಯ ನಂದಿಕೇಶ್ವರ, ಸಂಸ್ಕೃತ ಪಂಡಿತಾ

ರಾಧ್ಯ ಚರಿತೆಯನ್ನು ಬರೆದ ಗುರುರಾಜ, ಸಂಸ್ಕೃತ ರೇಣುಕ ಚಂಪುವಿನ ಕರ್ತೃ ಈಶಾನ ಗುರು, ಶ್ರುತಿಸಾರ ಭಾಷ್ಯದ ಶಿವಪೂಜಾಯುತಿ, ಮಾಚಿದೇವ ಮನೋವಿಲಾಸದ ಕವಿ ಮಾಚಿದೇವ, ಶಿವಾಧಿಕ್ಯ ಶಿಖಾಮಣಿಯ ಕರ್ತೃ ಸೋಸಲೆ ರೇವಣಾರಾಧ್ಯ, ಸಿದ್ಧಾಂತ ಸಾರಾವಳಿಯ ತ್ರಿಲೋಚನ ಪಂಡಿತ, ವೀರಶೈವ ಕೌಸ್ತುಭದ ಮೌನಪ್ಪ ಪಂದಿತ, ಧರ್ಮಶಿರೋಮಣಿಯು ಷಡಕ್ಷರ ಮಂತ್ರಿ, ಶಿವಾಧಿಕ್ಯ-ಭಕ್ತಾತಿಥ್ಯಗಳನ್ನು ಬರೆದ ಷಡಕ್ಷರದೇವ, ಶಿವತತ್ವ ರತ್ನಾಕರ, ಸುಭಾಷಿತ ಸುರುದ್ರುಮ, ಶೈವಸಂಜೀವಿನೀ ಮೊದಲಾದ ಗ್ರಂಥ ಗಳನ್ನು ಬರೆದ ಕೆಳದಿಯ ಬಸವರಾಜ, ಸಂಸ್ಕೃತ ವಿವೇಕ ಚಿಂತಾಮಣಿ ಯನ್ನು ಬರೆದ ಕೊಡಗಿನ ಲಿಂಗರಾಜ, ವಾತುಲಾಗಮಕ್ಕೆ ವೀರಶೈವ ವ್ಯಾಖ್ಯೆ ಯನ್ನು ಬರೆದ ಗುಬ್ಬಿ ಮಲ್ಲಣ್ಣ, ವೀರಶೈವಾನ್ವಯ ಚಂದ್ರಿಕೆಯ ಕರ್ತೃ ಗುಬ್ಬಿಯ ವೀರೇಶ್ವರ ಶಾಸ್ತ್ರಿ, ನಾರಾಯಣೋಪಸಿಷದ್ಭಾಷ್ಯವನ್ನು ಬರೆದ ವೃಷಭ ಪಂಡಿತ, ವೇದಾಂತಸಾರ ವೀರಶೈವ ಚಿಂತಾಮಣಿಯ ಕರ್ತೃ ನಿಟ್ಟೂರು ನಂಜಣಾಚಾರ್ಯ, ಅನಾದಿ ವೀರಶೈವಾಚಾರ ಸಂಗ್ರಹವನ್ನು ಬರೆದ ಸಿದ್ಧವೀರ ಮೊದಲಾದವರು ಸುಪ್ರಸಿದ್ಧರಾದ ವೀರಶೈವ ಕವಿಗಳೆನಿಸಿ ದ್ದಾರೆ. ಮೈಸೂರು, ಮದರಾಸು, ಅಡಿಯಾರು, ತಂಜಾವೂರು, ಕಾಶ್ಮೀರ, ಬರೋಡ ಮೊದಲಾದ ಕಡೆಗಳಲ್ಲಿರುವ ಪ್ರಾಚೀನ ಪುಸ್ತಕ ಭಂಡಾರ ಗಳಲ್ಲಿಯೂ, ಹಲವು ವೀರಶೈವ ಮಠಮಾನ್ಯಗಳಲ್ಲಿಯೂ ಮಹತ್ವದ ವೀರ ಶೈವ ಗ್ರಂಥಗಳು ಸಿಕ್ಕುತ್ತವೆ. ಶಿವರಹಸ್ಯ, ಪರಮರಹಸ್ಯ, ವೀರಶೈವ ಸದಾಚಾರಸಂಗ್ರಹ, ವೀರಶೈವಾಚಾರ ಪ್ರದೀಪಿಕೆ, ವೀರಮಾಹೇಶ್ವರಾಚಾರ ಸಾರಸಂಗ್ರಹ ಮೊದಲಾದ ಮಹತ್ವದ ಗ್ರಂಥಗಳು ಉತ್ತಮ ಟೀಕೆ ಟಿಪ್ಪಣಿ ಗಳೊಡನೆ ಪ್ರಕಟವಾಗಿ ಬೆಳಕಿಗೆ ಬರುವುದವಶ್ಯವೆನಿಸಿದೆ.

ಕನ್ನಡದಲ್ಲಿ ಪ್ರಸಿದ್ಧನಾದ ನಿಜಗುಣ ಶಿವಯೋಗಿಯು ಸಂಸ್ಕೃತದಲ್ಲಿ ಕೂಡ 'ಆತ್ಮತರ್ಕಚಿಂತಾಮಣಿ' ಮತ್ತು 'ದರ್ಶನಸಾರಂ' ಎಂಬ ಎರಡುಗ್ರಂಥ ಗಳನ್ನು ಬರೆದಂತೆ ವದಂತಿ ಇದೆ. ಈ ಎರಡು ಗ್ರಂಥಗಳೂ ಉಪಲಬ್ಧವಿಲ್ಲ. ನೀಲಕಂಠ ಭಾಷ್ಯದಂತೆಯೇ ಕಾಲಗರ್ಭದಲ್ಲಿ ಅಡಗಿವೆ. ಸರ್ಪಭೂಷಣ ಶಿವ ಯೋಗಿಯ ಜ್ಞಾನಶತಕದ ಒಂದು ಪ್ರತಿ ನನ್ನು, ಶರಣಸಾಹಿತ್ಯ ಕಾರ್ಯಾಲ

ಯದಲ್ಲಿದೆ. ಅಮುದ್ರಿತ ಸೋಮನಾಥ ಭಾಷ್ಯವೂ ನಮ್ಮಲ್ಲುಂಟು. A. ಸಂಸ್ಕೃತದಲ್ಲಿ ವ್ಯಾಸೋಕ್ತ ಬಸವ ಪುರಾಣಂ, ಚೆನ್ನಬಸವ ಪುರಾಣಂ, ವ್ಯಾಸೋಕ್ತ ಪ್ರಭುಲಿಂಗಲೀಲಾದಿಗಳನ್ನು ಬರೆದ ಕವಿಗಳು ವೀರಶೈವರೆಂಬು ದನ್ನು ಹೇಳಬೇಕಾಗಿಲ್ಲವಷ್ಟೆ ?

ಮತಪ್ರಸಾರವು ವೀರಶೈವ ಸಾಹಿತ್ಯದ ಹೆಗ್ಗುರಿ. ಮಾನವ ಕುಲದ ಉದ್ಧಾರವು ವೀರಶೈವ ದರ್ಶನದ ಮುಖ್ಯೋದ್ದೇಶ. ಆದುದರಿಂದ ಭರತ ಖಂಡದ ಪ್ರಾಚೀನ ಭಾಷೆಯಾಗಿಯೂ, ಇಂದು ವಿಶ್ವದ ಎಲ್ಲ ವಿಶ್ವವಿದ್ಯಾನಿಲ ಯದಲ್ಲಿ ಗಣ್ಯಸ್ಥಾನವನ್ನು ಪಡೆದಿರತಕ್ಕುದಾಗಿಯೂ ಇರುವ ಸಂಸ್ಕೃತ ಭಾಷೆ ಯಲ್ಲಿ ವೀರಶೈವ ಕವಿಗಳು ಅದ್ವಿತೀಯವಾದ ಗ್ರಂಥಗಳನ್ನು ಬರೆದಿರುವ ರೆಂಬುದು ನಾವು ಹೆಮ್ಮೆಪಡತಕ್ಕ ವಿಷಯವಾಗಿದೆ. ಈ ಸಂಸ್ಕೃತ ಗ್ರಂಥ ಗಳಲ್ಲಿ ಷಡಕ್ಷರ ಕವಿಯ ಕವಿಕರ್ಣ ರಸಾಯರಣಮ್, ಕಂಚಿ ಶಂಕರಾಧ್ಯನ ಬಸವೇಶ ವಿಜಯಮ್, ಗುರುರಾಜ ಕವಿಯ ಸಂಸ್ಕೃತ ಪಂಡಿತಾರಾಧ್ಯ ಚರಿತೆ, ಈಶಾನ್ಯ ಗುರುವಿನ ಸಂಸ್ಕೃತ ರೇಣುಕ ಚಂಪು, ಪದ್ಮರಸನ ಸಂಸ್ಕೃತ ಸಾನಂದ ಚರಿತೆ ಎಂಬ ನಾಲ್ಕಾರು ಗ್ರಂಥಗಳನ್ನು ಸಾಹಿತ್ಯ ಪ್ರಧಾನವೆಂದು ಹೇಳಬಹುದು. ಉಳಿದುವುಗಳೆಲ್ಲವೂ ವೀರಶೈವ ಧರ್ಮ, ಮತ್ತು ದರ್ಶನಗಳನ್ನು ಕುರಿತಾದುವು ಎಂಬುದನ್ನು ನಾವು ಇಲ್ಲಿ ನೆನಪಿಡ ಬೇಕಾಗಿದೆ.

ಸಂಸ್ಕೃತ ವಾಙ್ಮಯವು ಪ್ರಪಂಚದಲ್ಲಿ ಪ್ರಸಿದ್ಧವಾದುದು. ಅದರಲ್ಲಿ ಪರಿಶೋಭಿತವಾದ, ವೇದ,ಆಗಮ, ಉಪನಿಷತ್ತು, ಷಡ್ದರ್ಶನಗಳು,ಗೀತಾದಿ ಶಾಸ್ತ್ರಗಳು, ರಾಮಾಯಣ, ಮಹಾಭಾರತಾದಿ ಇತಿಹಾಸಗಳು, ಭಾಸ, ಕಾಳಿ ದಾಸ, ಬಾಣ, ಭವಭೂತಿ ಮೊದಲಾದ ಮಹಾಕವಿಗಳಿಂದಾದ ಪ್ರಾಚೀನ ಕಾವ್ಯಾಲಂಕಾರ ನಾಟಕಗಳು ಜಗನ್ಮಾನ್ಯವೆನಿಸಿವೆ. ಅಲ್ಲದೆ ವೀರಶೈವ ದರ್ಶ ನವು ನಿಗಮಾಗಮ ಸಮ್ಮತವೆಂದು ಗಣ್ಯ ಪ್ರಾಚೀನ ವಿದ್ವಾಂಸರು ಹೇಳುತ್ತ ಬಂದಿದ್ದಾರೆ. ಕಾರಣ ಸಮಾಜ ಸಂಸ್ಕೃತಿಗಳ ಹಿತದ ದೃಷ್ಟಿಯಿಂದ ಸಂಸ್ಕೃತ ಸಾಹಿತ್ಯಕ್ಕೂ, ವೀರಶೈವ ಧರ್ಮಕ್ಕೂ ನಿಕಟ ಸಂಬಂಧವಿರುವುದು ಅವಶ್ಯ ಮತ್ತು ಅನಿವಾರ್ಯ. ಭಾಷೆಯು ವಾಗ್ರೂಪವಾದುದು. 'ವಾಕ್'

A. ಜ್ಞಾನಶತಕಂ ಮತ್ತು ಸೋಮನಾಥ ಭಾಷ್ಯಗಳು ಅಚ್ಚಾಗಿವೆ (ಸಂ)

ಎಂದರೆ ಸರಸ್ವತಿ. ಆಕೆ ಯಾರಿಗೆತಾನೇ ಬೇಡ? ಗಾಳಿ, ನೀರು, ಸೂರ್ಯ, ಚಂದ್ರರನ್ನು ದ್ವೇಷಿಸಿದಂತೆಯೇ ಭಾಷೆಯನ್ನು ದ್ವೇಷಿಸುವುದೂ ಕೂಡ ಮೂರ್ಖತನವಾಗಿದೆ. ತಮಿಳು ನಾಡಿನಲ್ಲಿ ಕಲವರಿಗೆ ಸಂಸ್ಕೃತವ ಬಗ್ಗೆ ತುಂಬಾ ದ್ವೇಷವಿದೆ ಎಂಬುದು ವ್ಯಸನಕರವೇ ಸರಿ.

ವೀರಶೈವ ವಾಙ್ಮಯವು ಕನ್ನಡ ಸಂಸ್ಕೃತಗಳಲ್ಲಿಯೇ ಅಲ್ಲದೆ ತೆಲುಗು ಮತ್ತು ತಮಿಳು ಭಾಷೆಗಳಲ್ಲಿಯೂ ಬಹಳವಾಗಿ ಇದೆ. ಬಸವನ ಹಿಂದಿನವ ರೆನಿಸಿದ ಅನ್ನಮಾಮಾತ್ಯ ಮತ್ತು ನನ್ನ ಚೋಡ ಎಂಬ ಇಬ್ಬರು ಮಹಾಕವಿ ಗಳು ಆಂಧ್ರ ಸಾಹಿತ್ಯದಲ್ಲಿ ಬಹಳ ಪ್ರಸಿದ್ಧರಾಗಿದ್ದಾರೆ. ಮಲ್ಲಿಕಾರ್ಜುನ ಪಂಡಿತಾರಾಧ್ಯನು ತೆಲುಗಿನಲ್ಲಿ 'ಶಿವತತ್ವಸಾರಮು' 'ಗಣಸಹಸ್ರನಾಮು' ಬರೆ ದಿದ್ದಾನೆ. ಪ್ರಸಿದ್ಧನಾದ ಪಾಲ್ಕುರಿಕೆ ಸೋಮನಾಥನು ಆಂಧ್ರ ಕವಿತ್ವಕ್ಕೆ ಸೀಮಾಪುರುಷನೆನಿಸಿ ಆಂಧ್ರ ಬಸವಪುರಾಣ, ಆಂಧ್ರ ಪಂಡಿತಾರಾಧ್ಯ ಚರಿತ್ರಮು, ವೃಷಾಧಿಪ ಶತಕಮು, ಅನುಭವಸಾರಮು ಮೊದಲಾದ ಮಹ ತ್ವದ ಗ್ರಂಥಗಳನ್ನು ಬರೆದು ಆಂಧ್ರ ವಾಙ್ಮಯಕ್ಕೆ ಆದ್ಯಾಚಾರ್ಯನೆನಿಸಿ ದ್ದಾನೆ. ಕನ್ನಡದಲ್ಲಿ ಹರಿಹರನಿಗಿರುವ ಸ್ಥಾನವೇ ತೆಲುಗಿನಲ್ಲಿ ಸೋಮ ನಾಥನಿಗುಂಟು. ವಿಜಯನಗರ ಕೃಷ್ಣದೇವರಾಯನ ಅಷ್ಟದಿಗ್ಗಜಗಳಲ್ಲಿ ಒಬ್ಬನೂ, ರಾಜಶೇಖರ ಚರಿತ್ರಮು ಎಂಬ ಮಹಾಕಾವ್ಯದ ಕರ್ತೃವೂ ಆದ ಮಾದಯ್ಯಗಾರಿ ಮಲ್ಲನ್ನ ಎಂಬುವನು ಕೀರ್ತಿವೆತ್ತ ತೆಲುಗು ಭಾಷೆಯ ಲಿಂಗವಂತ ಕವಿಯು.

ಆಂಧ್ರ ಚೆನ್ನಬಸವ ಪುರಾಣದ ಕರ್ತೃ ಪಾಪಯಾಮಾತ್ಯ, ತೆಲುಗು ಬಸವೇಶ ಚಂಪು ಮತ್ತು ಪ್ರಭುಲಿಂಗಲೀಲಾ ಚಂಪುಗಳ ಕರ್ತೃ ಪಿಡುಪರ್ತಿ ಬಸವ, ಆಂಧ್ರಸಾಹಿತ್ಯದಲ್ಲಿ ಸುಪ್ರಸಿದ್ಧವಾದ ಪ್ರಭುಲಿಂಗಲೀಲಾ ಕಾವ್ಯ ವನ್ನು ಬರೆದ ಪಿಡುಪರ್ತಿ ಸೋಮನಾಥ, ವಿಕಟ ಕವಿಯಾದ ತೆನಾಲಿ ರಾಮ ಕೃಷ್ಣ ಮೊದಲಾದವರು ತೆಲುಗುಭಾಷೆಯಲ್ಲಿ ಪ್ರಸಿದ್ಧರಾದ ವೀರಶೈವ ಕವಿ ಗಳು. ವೀರಶೈವ ಮತಚರಿತ್ರೆಯಲ್ಲಿ ಸುಪ್ರಸಿದ್ಧ ವಿದ್ವಾಂಸರೆನಿಸಿರುವ ಆರಾಧ್ಯ ಸಂಹಿತೆ ಮತ್ತು ಶ್ರೀಕರಭಾಷ್ಯಗಳ ಕರ್ತೃ ಶ್ರೀಪತಿ ಪಂಡಿತ, ಶಿವತತ್ವ ಸಾರಮು, ಗಣಸಹಸ್ರ ನಾಮುಗಳನ್ನು ಬರೆದ ಮಲ್ಲಿಕಾರ್ಜುನ

ಆಂಧ್ರ ಚೆನ್ನಬಸವ ಪುರಾಣದ ಕರ್ತೃ ಪಾಪಯಾಮಾತ್ಯ, ತೆಲುಗು ಬಸವೇಶ ಚಂಪು ಮತ್ತು ಪ್ರಭುಲಿಂಗಲೀಲಾ ಚಂಪುಗಳ ಕರ್ತೃ ಪಿಡುಪರ್ತಿ ಬಸವ, ಆಂಧ್ರ ಸಾಹಿತ್ಯದಲ್ಲಿ ಸುಪ್ರಸಿದ್ಧವಾದ ಪ್ರಭುಲಿಂಗಲೀಲಾ ಕಾವ್ಯ ವನ್ನು ಬರೆದ ಪಿಡುಪರ್ತಿ ಸೋಮನಾಥ, ವಿಕಟ ಕವಿಯಾದ ತೆನಾಲಿ ರಾಮ ಕೃಷ್ಣ ಮೊದಲಾದವರು ತೆಲುಗು ಭಾಷೆಯಲ್ಲಿ ಪ್ರಸಿದ್ಧರಾದ ವೀರಶೈವ ಕವಿ ಗಳು. ವೀರಶೈವ ಮತಚರಿತ್ರೆಯಲ್ಲಿ ಸುಪ್ರಸಿದ್ಧ ವಿದ್ವಾಂಸರೆನಿಸಿರುವ ಆರಾಧ್ಯ ಸಂಹಿತೆ ಮತ್ತು ಶ್ರೀಕರಭಾಷ್ಯಗಳ ಕರ್ತೃ ಶ್ರೀಪತಿಪಂಡಿತ, ಶಿವತತ್ವ ಸಾರಮು, ಗಣಸಹಸ್ರ ನಾಮಗಳನ್ನು ಬರೆದ ಮಲ್ಲಿಕಾರ್ಜುನ ಪಂಡಿತ, ಪಂಡಿ ತಾರಾಧ್ಯನ ಗುರುವಾದ ಕೋಟಿ ಪಲ್ಲಾರಾಧ್ಯ ಮೊದಲಾದವರು ಸುಪ್ರಸಿದ್ಧ ಆಂಧ್ರದೇಶದ ವೀರಶೈವ ವಿದ್ವಾಂಸರೆಂದು ನಾವು ತಿಳಿದಿರುವುದು ಆವಶ್ಯ. ವೀರಶೈವ ಪಂಡಿತತ್ರಯರಾದ ಮಂಚಣ್ಣ ಪಂಡಿತ, ಮಲ್ಲಿಕಾರ್ಜುನ ಪಂಡಿತ, ಮತ್ತು ಶ್ರೀಪತಿ ಪಂಡಿತರು, ಕೋಟಿಪಲ್ಲಾರಾಧ್ಯ ಮತ್ತು ಪಾಲ್ಕುರಿಕೆ ಸೋಮ ನಾಥರು ಆಂಧ್ರದೇಶದಲ್ಲಿ ವೀರಶೈವ ಮತಪ್ರಚಾರ ಮಾಡಿದ ಮಹಾತ್ಮರು.

ತೆಲುಗಿನಂತೆ ತಮಿಳು ಭಾಷೆಯಲ್ಲಿಯೂ ವೀರಶೈವ ಕವಿಗಳು ವಿಪುಲ ವಾಗಿದ್ದಾರೆ. ತಮಿಳು ಪೆರಿಯಪುರಾಣಕ್ಕೂ ವೀರಶೈವ ಮತಕ್ಕೂ, ಪುರಾತ ನರ ತೇವಾರಗಳಿಗೂ ವೀರಶೈವ ವಚನಗಳಿಗೂ ನಿಕಟವಾದ ಸಂಬಂಧವಿದೆ. ಮಹಾಕವಿ ವಟ್ಟಕೂತ್ತರ್ ಎಂಬುವರು ಕುಂಭಕೋಣಂನಲ್ಲಿ ೧೩೦೦ ವರ್ಷಗಳ ಹಿಂದೆ ಇದ್ದರೆಂದು ತಮಿಳು ವೀರಶೈವ ವಿದ್ವಾಂಸರು ಹೇಳುತ್ತಾರೆ. ತಮಿಳಿ ನಲ್ಲಿ ಬಸವಪುರಾಣವನ್ನುಬರೆದ ಕವಿ(ಬಸವಲಿಂಗನು?)ಪ್ರಖ್ಯಾತನೆನಿಸಿದ್ದಾನೆ. 'ಪಿಳ್ಳೈನೈನಾರ್' ಎಂಬ ವೀರಶೈವ ಕವಿಯು ಗುಬ್ಬಿಯ ಮಲ್ಲಣಾರ್ಯನ ಭಾವ ಚಿಂತಾರತ್ನಕ್ಕೂ, ಎಳಂದೂರು ಷಡಕ್ಷರದೇವನ ರಾಜಶೇಖರ ವಿಳಾಸಕ್ಕೂ ಮೂಲಮಾತೃಕೆಯಾದ ತಮಿಳು ಸತ್ಯೇಂದ್ರ ಚರಿತೆಯನ್ನು ರಚಿಸಿದ್ದಾನೆ. ೧೬ನೆಯ ಶತಮಾನದಲ್ಲಿ ತೆಂಕಣ ನಾಡಿನಲ್ಲಿ ಪ್ರಸಿದ್ಧರಾದ ತಿರುವಣ್ಣಾ ಮಲೆಯ ಶಿವಪ್ರಕಾಶ ಸ್ವಾಮಿಗಳು ತಮಿಳಿನಲ್ಲಿ ಪ್ರಭುಲಿಂಗ ಲೀಲೆ, ಸಿದ್ಧಾಂತ ಶಿಖಾಮಣಿ ಮೊದಲಾದ ಸುಪ್ರಸಿದ್ಧ ೩೬ ಗ್ರಂಥಗಳನ್ನು ಬರೆದಿದ್ದಾರೆ. ಇವರು ವೀರಶೈವ ಕವಿಗಳೆಂಬುದು ಸೂರ್ಯಪ್ರಕಾಶದಷ್ಟು ಸ್ಪಷ್ಟವಾಗಿದೆ.

4

ತಮಿಳು ಪ್ರಭುಲಿಂಗಲೀಲೆಯು ಪ್ರಪಂಚದ ಸಾಹಿತ್ಯದಲ್ಲಿ ಪರಿಗಣಿತವಾಗಿದೆ. ಈಗಲೂ ತಮಿಳು ನಾಡಿನಲ್ಲಿ ವೀರಶೈವ ಪಂಡಿತರು ಬಹಳವಾಗಿದ್ದಾರೆ.

ಹಂಪೆಯ ಹರೀಶ್ವರನು ತಮಿಳಿನ ಪೆರಿಯಪುರಾಣದ ಆಧಾರದಿಂದ ೬೩ ಶರಣರ ರಗಳೆಯನ್ನು ಬರೆದಿದ್ದಾನೆ. ಗುಬ್ಬಿ ಮಲ್ಲಣಾರ್ಯನು ಭಾವ ಚಿಂತಾರತ್ನದ ಕಥಾವಸ್ತುವನ್ನು ತಮಿಳು ಸತ್ಯೇಂದ್ರ ಚರಿತೆಯಿಂದ ಸ್ವೀಕರಿಸಿದ್ದಾನೆ. ಕಂಚಿ ಶಂಕರಾರಾಧ್ಯನು ಕನ್ನಡ ಬಸವ ಪುರಾಣವನ್ನು ಸಂಸ್ಕೃತದಲ್ಲಿ ಬರೆದಿದ್ದಾನೆ. ಭೀಮಕವಿಯು ಬಸವಪುರಾಣವನ್ನು ತೆಲುಗಿನಿಂದ ಪರಿವರ್ತಿಸಿದ್ದಾನೆ. ಪದ್ಮರಸನ ದೀಕ್ಷಾಬೋಧೆಯು ಹಲವು ಶತಮಾನಗಳ ಮೊದಲೇ ತೆಲುಗು ಭಾಷೆಗೆ ಪಿಡುಪರ್ತಿ ಬಸವಯ್ಯ ಕವಿಯಿಂದ ಪರಿವರ್ತಿಸಲ್ಪಟ್ಟಿದೆ. ಕನ್ನಡದ ಪ್ರಭುಲಿಂಗಲೀಲೆಯು ಮತ್ತು ಸಂಸ್ಕೃತ ಸಿದ್ಧಾಂತ ಶಿಖಾಮಣಿಯನ್ನು ಶಿವಪ್ರಕಾಶ ಸ್ವಾಮಿಗಳು ತಮಿಳಿನಲ್ಲಿ ಭಾಷಾಂತರಿಸಿದ್ದಾರೆ. ಪಾಲ್ಕುರಿಕೆ ಸೋಮನಾಥನ ತೆಲುಗು ಪಂಡಿತಾರಾಧ್ಯ ಚರಿತೆಯು ಗುರುರಾಜಕವಿ ಮತ್ತು ನೀಲಕಂಠ ಕವಿಗಳಿಂದ ಸಂಸ್ಕೃತ ಮತ್ತು ಕನ್ನಡದಲ್ಲಿ ಪರಿವರ್ತಿತವಾಗಿದೆ. ಕನ್ನಡ ಬಸವ ಪುರಾಣವು ತಮಿಳಿನಲ್ಲಿ ಭಾಷಾಂತರಿಸಲ್ಪಟ್ಟಿದೆ. ಪಾಲ್ಕುರಿಕೆ ಸೋಮನಾಥನು ಪಂಚಭಾಷಾ ಕವಿಯೆನಿಸಿದ್ದನೆಂಬುದಕ್ಕೆ ವೃಷಾಧಿಪಶತಕದಲ್ಲಿ ಸಾಕ್ಷಿಯಿದೆ. ತಮಿಳಿನ ತೇವಾರುಗಳು ಕನ್ನಡ ವಚನಕಾರರ ಮೇಲೆ ಪ್ರಭಾವವನ್ನು ಬೀರಿವೆ. 'ಆದ್ಯರ ವಚನ' ಎಂದು ಶರಣರು ಹೇಳುವುದು ತಮಿಳು ತೇವಾರಗಳನ್ನು ಮತ್ತು ಮಾಣಿಕ್ಯ ವಾಚಕರ ತಿರುವಾಚಕಂ ಗಳನ್ನು ಕುರಿತಾಗಿರಬೇಕು ಇತ್ಯಾದಿ ವಿಚಾರಗಳೆಲ್ಲವೂ ವೀರಶೈವ ವಾಙ್ಮಯದ ವಿಸ್ತಾರಕ್ಕೂ, ಈ ವಿಷಯದಲ್ಲಿ ಕನ್ನಡ, ಸಂಸ್ಕೃತ, ತೆಲುಗು, ತಮಿಳು ಮೊದಲಾದ ಸಾಹಿತ್ಯಗಳಿಗೆ ಇರುವ ಬಾಂಧವ್ಯಕ್ಕೂ ನಿದರ್ಶನವಾಗಿವೆ.

ಮರಾಠಿ ಭಾಷೆಯಲ್ಲಿ ವೀರಶೈವ ಸಾಹಿತ್ಯವು ವಿಪುಲವಾಗಿ ಇಲ್ಲವಾದರೂ ಅಷ್ಟಿಷ್ಟು ಉಂಟೆಂದು ತಿಳಿದುಬಂದಿದೆ. ನಾಸಿಕದ ಶಾಂತಲಿಂಗ ದೇಶಿಕನು ಶ್ರೀ ನಿಜಗುಣನ ವಿವೇಕಚಿಂತಾಮಣಿಯನ್ನು ಮರಾಠಿಯಲ್ಲಿ ಬರೆದಿದ್ದಾನೆ. ವೀರಶೈವ ಮಹಾಯೋಗಿಗಳಾದ ಮನ್ಮಥ ಸ್ವಾಮಿಗಳ ಅಭಂಗಗಳು ಮರಾಠಿಯಲ್ಲಿ ತುಕಾರಾಮಾದಿಗಳ ಅಭಂಗಗಳಂತೆ ಪ್ರಸಿದ್ಧವಾಗಿವೆ. ಛಾಮರಸನ

ಪ್ರಭುಲಿಂಗ ಲೀಲೆಯು ಮರಾಠಿಭಾಷೆಯಲ್ಲಿ ಓವಿ ಛಂದಸ್ಸಿನಲ್ಲಿ ಬರೆಯಲ್ಪಟ್ಟಿದೆ. ಕೈವಾರದ ಮಲ್ಲಪ್ಪನವರು ಪ್ರಕಟಿಸಿದ ೬೦-೭೦ ವೀರಶೈವ ಮತ ಗ್ರಂಥಗಳು ಸಂಸ್ಕೃತದ ಮೂಲ-ಮರಾಠಿ ವ್ಯಾಖ್ಯಾನದಿಂದ ಪರಿಶೋಭಿತವಾಗಿವೆ.A ಆದುದರಿಂದ ಮರಾಠಿ ಸಾಹಿತ್ಯಕ್ಕೂ ವೀರಶೈವ ಧರ್ಮಕ್ಕೂ ಅಲ್ಪಸ್ವಲ್ಪ ಸಂಬಂಧ ಉಂಟೆಂದು ಈ ಕಾರಣಗಳಿಂದ ಒಪ್ಪಿಕೊಳ್ಳಬೇಕಾಗುವುದು.

ವೀರಶೈವ ವಾಙ್ಮಯವು ಎಷ್ಟು ವಿಸ್ತಾರವಾದುದೆಂಬುದನ್ನು ಈಗ ನಾವು ತಿಳಿದಿರುತ್ತೇವೆ. ಅದು ಎಂತಹ ಕ್ರಾಂತಿಕಾರಕವಾದ ಭಾವನೆಗಳಿಂದ ಕೂಡಿರುವುದೆಂಬುದನ್ನು ಈಗ ತಿಳಿದಿರುತ್ತೇವೆ. ಆಂಧ್ರ ಕವಿಕಾಳಿದಾಸನಾದ ಶ್ರೀನಾಥನು ಪಂಡಿತಾರಾಧ್ಯನನ್ನು ಕುರಿತು ತೆಲುಗಿನಲ್ಲಿ ಒಂದು ಮಹಾಕಾವ್ಯವನ್ನು ಬರೆದಿರುವನೆಂಬುದು ವೀರಶೈವ ವಾಙ್ಮಯದ ಮತ್ತು ಧರ್ಮದ ಪ್ರಭಾವಕ್ಕೆ ಸ್ಪಷ್ಟವಾದ ನಿದರ್ಶನವಾಗಿದೆ. ಪ್ರಸಿದ್ಧರಾದ ಆಂಧ್ರಕವಿಗಳು ಪಾಲ್ಕುರಿಕೆ ಸೋಮನಾಥನನ್ನು ಆಂಧ್ರವಾಙ್ಮಯದ ಉದ್ಧಾರಕನೆಂದು ಹೇಳಿದ್ದಾರೆಂಬುದು ನಮ್ಮ ಮಾತಿಗೆ ಬೆಂಬಲವಾಗಿದೆ. ನಿಜಗುಣ ಶಿವಯೋಗಿಯ ವೇದಾಂತ ಗ್ರಂಥಗಳು, ಗುರುಬಸವ ಕವಿಯ ಮನೋವಿಜಯಾದಿ ತಾತ್ವಿಕ ಗ್ರಂಥಗಳು, ಸರ್ವಜ್ಞಕವಿಯ ತ್ರಿಪದಿಯ ಸೂಳ್ನುಡಿಗಳು, ಮುಮುಕ್ಷುಗಳಾದ ವಿವೇಕಿಗಳಾದ ಕನ್ನಡಿಗರೆಲ್ಲರ ಮನ್ನಣೆಗೆ ಪಾತ್ರವಾಗಿವೆ. ವೀರಶೈವ ವಚನಸಾಹಿತ್ಯವು ವಿಶ್ವಸಾಹಿತ್ಯದಲ್ಲಿ ಸೇರ್ಪಡೆಯಾಗಲು ಅರ್ಹವಾಗಿದೆ ಎಂಬುದು ವಿದ್ವನ್ಮಾನ್ಯವಾಗಿದೆ. ಆದುದರಿಂದ ಇಂತಹ ಸಾಹಿತ್ಯವನ್ನು ಸಮಾಜ ಹಿತಕ್ಕಾಗಿಯೂ, ದೇಶದ ಹಿತಕ್ಕಾಗಿಯೂ ಉಳಿಸುವುದು ಬಳಸುವುದು ನಮ್ಮೆಲ್ಲರ ಆದ್ಯ ಕರ್ತವ್ಯವಾಗಿದೆ.

ಈ ಪ್ರಸಂಗದಲ್ಲಿ ವೀರಶೈವ ಗ್ರಂಥ ಪ್ರಚಾರಕರನ್ನು ಕುರಿತು ಒಂದೆರಡು ಮಾತುಗಳನ್ನು ಹೇಳಲು ಬಯಸುತ್ತೇವೆ. ವೀರಶೈವ ವಾಙ್ಮಯದ ಬಹುಭಾಗವು ತಾಳೆಯೋಲೆಯ ಸೆರೆಮನೆಯಲ್ಲಿ ಕುಳಿತಿದೆ. ಹಲವು ಗ್ರಂಥಗಳು ಹುಳುಗಳ ಹಾಗೂ ಬೆಂಕಿಯ ಪಾಲಾಗುತ್ತಿವೆ. ಇದು ಅಪಾರವಾದ

---

A ಇತ್ತೀಚೆಗೆ ಸೊಲ್ಲಾಪುರದ ಶ್ರೀಮತಿ ಜಯದೇವಿತಾಯಿ ಲಿಗಾಡೆಯವರು ಬಸವ, ಸಿದ್ಧರಾಮ, ಅಕ್ಕಮಹಾದೇವಿ ಮೊದಲಾದವರ ವಚನಗಳನ್ನು ಮರಾಠಿಗೆ ಭಾಷಾಂತರಿಸಿದ್ದಾರೆ. (ಸಂ.)

ದುಃಖದ ವಿಷಯುವಾಗಿದೆ. ನಮ್ಮ ಜನರು ತಮ್ಮ ಸಾಹಿತ್ಯ ಸಂಸ್ಕೃತಿಯ ರಕ್ಷಣೆಗೆ ಮುಂದೆ ಬರದಿರುವುದು ಅಪಾಯಕರ ಮತ್ತು ಅವಮಾನಕ ಈ ದೈನ್ಯಾವಸ್ಥೆಯು ದೂರವಾಗುವಂತೆ ಧನಿಕರನ್ನು ಭಗವಂತನು ಅನುಗ್ರ ಸಲಿ. ಅವರು ನಮ್ಮ ಸಾಹಿತ್ಯ ಸಂಪತ್ತನ್ನು ಉಳಿಸಲು ಮುಂದೆ ಬರಲಿ.

ವೀರಶೈವ ವಾಙ್ಮಯೋದ್ಧಾರಕರಾದ ತೆಲುಗು ಬಸವಪುರಾಣ ಮತ್ತು ಪಂಡಿತಾರಾಧ್ಯ ಚರಿತೆಗಳನ್ನು ಪ್ರಕಟಿಸಿದ ಕೈ|| ದೇಶೋದ್ಧಾರಕ ನಾಗೇಶ್ವ ರಾಯರು, ಕೈ|| ಯಜಮಾನ್ ವೀರಸಂಗಪ್ಪನವರು, ಕೈ|| ಕರ್ನಾಟ ಭಾಷಾರತ್ನ ಕರಿಬಸವ ಶಾಸ್ತ್ರಿಗಳು, ಕೈ|| ಎನ್. ಆರ್. ಕರಿಬಸವಶಾಸ್ತ್ರಿಗಳು ಕೈ|| ಚಿಟಗೆ ಬಸವಲಿಂಗ ಶಾಸ್ತ್ರಿಗಳು, ಮದರಾಸಿನ ಗುರುಬಸವ ಅಂಡ ಕಂಪನಿಯ ಒಡೆಯರೂ ತಮಿಳು ವೀರಶೈವ ಗ್ರಂಥಗಳ ಉದ್ಧಾರಕರೂ ಆ ಕೈ|| ನಾಗಪ್ಪಶೆಟ್ಟರು, ಕೈ|| ವ್ಯಾಕರಣದ ಬಿ. ಮಲ್ಲಪ್ಪನವರು, ಕೈ|| ಬಿ ಬಸವಾರಾಧ್ಯರು, ಕೈ|| ವಾರದ ಮಲ್ಲಪ್ಪನವರು, ಕೈ|| ವಿ. ಬಿ. ಹಾಲಭಾ ಯವರು, ಲಿಂ|| ಬಸವಲಿಂಗಸ್ವಾಮಿಗಳು, ಕೈ|| ಎಸ್. ಎಸ್. ಬಸವನಾ ರವರು, ಕೈ|| ಸಾಖರೆಯವರು, ವೀರಶೈವ ಗ್ರಂಥ ಪ್ರಕಟನೆಗಾಗಿ ತಮ್ಮ ಜೀವನವನ್ನು ಸವೆಯಿಸುತ್ತಿರುವ ಡಾ|| ಫ. ಗು. ಹಳಕಟ್ಟಿಯವರು, ಡಾ ಎಸ್. ಸಿ. ನಂದಿಮಠದವರು, ಡಾ|| ಆರ್. ಸಿ. ಹಿರೇಮಠರು, ಶ್ರೀ ಹೆಚ್. ದೇವೀರಪ್ಪನವರು, ಶ್ರೀ ಎಲ್. ಬಸವಾರಾಧ್ಯರು, ಪ್ರೊ|| ಭೂಸನೂರಮಠರು, ಇವರೆಲ್ಲರೂ ವೀರಶೈವ ವಾಙ್ಮಯದ ಉದ್ಧಾರಕರೆನಿಸಿದ್ದಾರೆ. ಇತ್ತೀಚೆಗೆ ನಮ್ಮೆಲ್ಲರ ಸುದೈವದಿಂದ ಕರ್ನಾಟಕದ ಕರ್ಮಯೋಗಿಗಳೂ, ವೀರಶೈವ ಸಮಾ ಜದ ಉದ್ಧಾರಕರೂ ಆದ ಧಾರವಾಡದ ಶ್ರೀಮನ್ನಿರಂಜನ ಮೃತ್ಯುಂಜಯ ಮಹಾಸ್ವಾಮಿಗಳು ವೀರಶೈವ ಪ್ರಾಚೀನ ಗ್ರಂಥಗಳ ಪ್ರಕಟನೆಯನ್ನು ಕೈಕೊಂಡಿರುವುದು ನಮ್ಮ ಉತ್ಸಾಹವನ್ನು ಹೆಚ್ಚಿಸಿದೆ. ಜಗದ್ಗುರು ಮೂರು ಸಾವಿರ ಮಠಾಧೀಶರೂ, ಶಿವಯೋಗಮಂದಿರದವರೂ ಈಗ ಗ್ರಂಥ ಪ್ರಕಟನೆಗೆ ತೊಡಗಿರುವುದು ಸಂತೋಷಕರ ಸಂಗತಿ.

ನಾವು ಸುಮ್ಮನೆ ನಮ್ಮ ಹಿಂದಿನದನ್ನು ಹೊಗಳಿಕೊಳ್ಳುವುದರಲ್ಲಿ ಅರ್ಥ ವಿಲ್ಲ. ವೀರಶೈವ ವಿದ್ವಾಂಸರಿಗೆ ಹಿಂದಿದ್ದ ರಾಜಾಶ್ರಯವು ಈಗ ಇಲ್ಲವಾಗಿದೆ. ಸಮಾಜಮುಖಂಡರು ಸಾಹಿತ್ಯವನ್ನು ಅಲಕ್ಷಿಸಿದ್ದಾರೆ. ಮುಖ್ಯವಾಗಿ ಈ

ಕಾರ್ಯವನ್ನು ಕೈಕೊಳ್ಳಬೇಕಾದ ಬಹುಮಂದಿ ಮಠಾಧಿಪತಿಗಳು ಪರಾಙ್ಮುಖ ರಾಗಿದ್ದಾರೆ. ಹಿಂದಿನ ವೀರಶೈವ ಕವಿಗಳಲ್ಲಿ ಬಹುಮಂದಿ ಮಠಾಧಿಪತಿಗಳಾ ಗಿದ್ದವರು. ಈಗ ಕೇವಲ ಸಾಹಿತ್ಯಸೇವೆಗೆ ಮೀಸಲಾದ ಹಲಕೆಲವು ಜನರು ಲಕ್ಷ್ಮೀ ಪ್ರಸನ್ನತೆ ಇಲ್ಲದವರಾಗಿದ್ದಾರೆ. ಆದುದರಿಂದ ವೀರಶೈವ ವಾಙ್ಮಯವು ಬೂದಿಮುಚ್ಚಿದ ಕೆಂಡದಂತೆ, ರಾಹುಗ್ರಸ್ತ ಚಂದ್ರನಂತೆ ಆಗಿದೆ. ಈ ಪರಿಸ್ಥಿತಿಯನ್ನು ಹೋಗಲಾಡಿಸಿ ಆ ವಾಙ್ಮಯವು ತಲೆಯೆತ್ತುವಂತೆ ಮಾಡ ಬೇಕಾದುದು ಜನರೆಲ್ಲರ ಕರ್ತವ್ಯವಾಗಿದೆ. ಇದಕ್ಕಾಗಿ ನಾವು ಕೆಲವು ರಚನಾತ್ಮಕವಾದ ಸಲಹೆಗಳನ್ನು ಮಾಡಲಿಚ್ಛಿಸುತ್ತೇವೆ.

ಮುದ್ರಣವಾದ ಮತ್ತು ಮುದ್ರಣವಾಗದ ಕನ್ನಡ,ಸಂಸ್ಕೃತ,ತೆಲುಗು, ತಮಿಳು,ಮರಾಠಿ ಮೊದಲಾದ ಎಲ್ಲ ಭಾಷೆಗಳ 'ವೀರಶೈವ ಗ್ರಂಥಗಳ ಸೂಚಿಕೆ' ಅತ್ಯವಶ್ಯ. ಆಂಧ್ರ ಗ್ರಂಥಸೂಚಿ ಈ ಬಗ್ಗೆ ನಮಗೆ ಮಾರ್ಗದರ್ಶಕವಾಗಿದೆ.

ಎಲ್ಲ ಭಾಷೆಗಳಲ್ಲಿ ಗ್ರಂಥಗಳನ್ನು ಬರೆದಿರುವ ವೀರಶೈವ ಕವಿಗಳ ಒಂದು ವಿಸ್ತಾರವಾದ ಕವಿಚರಿತೆ ಅತ್ಯವಶ್ಯ. ಪ್ರಕಟವಾದ ಕನ್ನಡ,ತೆಲುಗು,ತಮಿಳು, ಸಂಸ್ಕೃತ ಮೊದಲಾದ ಕವಿಚರಿತೆಗಳಲ್ಲಿ ವೀರಶೈವ ಕವಿಗಳ ಬಗ್ಗೆ ಹೇಳಿರುವ ವಿಷಯಗಳು ಅಪೂರ್ಣವೂ ಅತೃಪ್ತಿಕರವೂ ಆಗಿವೆ. ಈ ಕಾರ್ಯವನ್ನು ಕೈಗೊಂಡು ನಡೆಯಿಸುವುದು ವೀರಶೈವ ವಿದ್ವಾಂಸರ ಆದ್ಯ ಕರ್ತವ್ಯವಾಗಿದೆ. ಅದಕ್ಕೆ ಬೆಂಬಲ ಕೊಡುವುದು ಸಮಾಜದ ಕಾರ್ಯ. ಹರಿಹರ, ರಾಘವಾಂಕ, ಸೋಮನಾಥ,ನಿಜಗುಣ,ಷಡಕ್ಷರ,ಬಸವಪ್ಪಶಾಸ್ತ್ರಿ ಮೊದಲಾದವರ ಬಗ್ಗೆ ಕವಿ ಪ್ರಶಸ್ತಿಗಳಾಗಬೇಕು. ಇದು ವಿಶಾಲವಾದ ಕವಿಚರಿತ್ರೆಗೆ ಪೋಷಕವಾದುದು.

ವೀರಶೈವ ಮತ ಗ್ರಂಥಗಳಲ್ಲಿ ಹಾಗೂ ಕಾವ್ಯಗಳಲ್ಲಿ ಬರುವ ಶಬ್ದಗಳ, ಮುಖ್ಯವಾಗಿ ಪಾರಿಭಾಷಿಕ ಶಬ್ದಗಳ (Technical words) ಕೋಶ ಅವಶ್ಯವಾಗಿದೆ. ಈ ಪ್ರಸಂಗದಲ್ಲಿ ಹಲವು ಶತಮಾನಗಳಿಂದ ವೀರಶೈವ ಕವಿಗಳು ಛಂದಸ್ಸು, ವ್ಯಾಕರಣ ಮತ್ತು ನಿಘಂಟು ಗ್ರಂಥಗಳನ್ನು ಬರೆಯುತ್ತ ಬಂದಿರುವರೆಂಬುದು ನಾವಿಲ್ಲಿ ನೆನಪಿಡುವ ಸಂಗತಿ. ತುರಮುರಿಯವರ ಕರ್ಣಾಟಕ ಶಬ್ದಮಂಜರಿ, ಹೆಸರುಘಟ್ಟದ ಹೊನ್ನಪ್ಪನವರ ಕರ್ಣಾಟಕ ಕಲ್ಪದ್ರುಮ, ವಿರಕ್ತ ತೋಂಟದಾರ್ಯರ ಕರ್ಣಾಟಕ ಶಬ್ದಮಂಜರಿ, ಲಿಂಗ ಮಂತ್ರಿಯ ಕಬ್ಬಿಗರ ಕೈಪಿಡಿ ಮೊದಲಾದ ಕನ್ನಡ ನಿಘಂಟುಗಳು ವೀರಶೈವ

ವಿದ್ವಾಂಸರಿಂದ ಬರೆಯಲ್ಪಟ್ಟುವೆಂಬುದು ನೆನಪಿಡತಕ್ಕ ಸಂಗತಿ. ಸುಮಾ ೪೫ ವರ್ಷಗಳ ಹಿಂದೆ ವಿರಚಿತವಾದ ಕೈ|| ನ್ಯಾಮತಿ ಪಂಡಿತ ಪ್ರಭಣ್ಣನ ವಿಸ್ತಾರವಾದ ಕನ್ನಡ ನಿಘಂಟು ಮುದ್ರಣವಾಗದೆ ಉಳಿದಿದೆ. ಅ ಪ್ರಕಟನೆಯೂ ಎಲ್ಲ ದೃಷ್ಟಿಯಿಂದಲೂ ಅವಶ್ಯ. ಈಗ ಶ್ರೀ ಹಳಕಟ್ಟಿಯ 'ಶಿವಾನುಭವ ಶಬ್ದಕೋಶ' ಪ್ರಕಟವಾಗಿದೆ. A ಆದರೆ ವಿಸ್ತಾರವಾದ ವೀರಶೈವ ಶಬ್ದಕೋಶ ಪ್ರಕಟವಾಗುವುದು ಅವಶ್ಯವಾಗಿದೆ.

ಪ್ರಾಚೀನ ಗ್ರಂಥಪ್ರಕಟನೆಯು ಬಹು ಪುಣ್ಯಪ್ರದವಾದುದೆಂ ಜೈನಧರ್ಮದಲ್ಲಿ ಭಾವಿಸಲ್ಪಟ್ಟಿದೆ. ಇದನ್ನು 'ಜ್ಞಾನ ದಾನ' ಎನ್ನುತ್ತಾ ರಾಜಾ ನಿರ್ಮಲಮುಖರ್ಜಿಯವರಂತಹ ಜೈನ ಶ್ರೀಮಂತರು ಉದಾರವಾ ಧನಸಹಾಯಮಾಡಿ ಪುಸ್ತಕಾಲಯಗಳನ್ನು ಸ್ಥಾಪಿಸಿದ್ದಾರೆ. ಇದು ಲಿ ವಂತರಿಗೆ ಮಾರ್ಗದರ್ಶಕವಾಗಿರಲಿ. ಲಿಂಗವಂತರಲ್ಲಿ ಕೊಡುಗೈ ದೊರೆಗ ಬಹಳವಾಗಿದ್ದರೂ ವಾಙ್ಮಯ ಪ್ರಚಾರದಲ್ಲಿ ಅವರ ದೃಷ್ಟಿಯು ಇಲ್ಲವಾಗ ವೀರಶೈವ ಮತೋದ್ಧಾರಕರಾದ ಕೆರೆಯ ಪದ್ಮರಸರ ದೀಕ್ಷಾಬೋ ಕುಮಾರ ಪದ್ಮರಸನ ಕನ್ನಡ ಸಾನಂದಚರಿತೆ, ಪಾಲ್ಕುರಿಕೆ ಸೋಮನಾಥ ಸಂಸ್ಕೃತ ಬಸವರಾಜೀಯಂ ಮತ್ತು ವೀರಶೈವ ಮತಪ್ರಕಾಶಿಕೆ, ಶ್ರೀಪ ಪಂಡಿತನ ಆರಾಧ್ಯಸಂಹಿತೆ, ಗುಬ್ಬಿ ಮಲ್ಲಣ್ಣನ ವಾತುವಾಗಮ ವ್ಯಾಖ್ಯಾನ ಪರ್ವತೇಶನ ಚತುರಾಚಾರ್ಯಪುರಾಣ, ಗುಬ್ಬಿ ಶಾಂತೇಶನ ತೋಂಟದಾ ಪುರಾಣ, ವೀರಣ್ಣೊಡೆಯಗಳ ಶೂನ್ಯಸಂಪಾದನೆ, ಸುಪ್ರಸಿದ್ಧ ಶಿವರಹಸ್ಯ ಪರಮರಹಸ್ಯ, ಸ್ವಾದಿ ಸದಾಶಿವರಾಜನ ಸದಾಶಿವ ನೀತಿಗಳು ವೀರಭದ್ರ ಕವಿಯ ಪುರಾತನರ ಪುರಾಣ, ಹರಿಹರನ ವಿರೂಪಾಕ್ಷಶತಕ ನೀಲಕಂಠಾರಾಧ್ಯನ ಆರಾಧ್ಯ ಚರಿತೆ, ಮರಿತೋಂಟದಾರ್ಯರ ಕೈ ಸಂಜೀವಿನಿ, ರಾಘವಾಂಕನ ಶರಭಚರಿತೆ ಮತ್ತು ಹರಿಹರಮಹತ್ವ, ವಿರ ತೋಂಟದಾರ್ಯನ ಚಿದಾನಂದಸಿಂಧು, ವಿರೂಪಾಕ್ಷ ಕವಿಯ ದೇವ ದಾಸಿಮಯ್ಯ ಪುರಾಣ, ತಿರುಮಲಭಟ್ಟನ ಗೀತಗೌರೀಪರ, ಬಸವ ಶಾಸ್ತ್ರಿಯ ಹರ್ಷಚರಿತೆ ಇತ್ಯಾದಿ ಮಹತ್ವದ ಗ್ರಂಥಗಳು ಪ್ರಕ ವಾಗುವುದು ಅತ್ಯವಶ್ಯ. ಸಮಾಜದ ಮಠಾಧಿಪತಿಗಳೂ, ಶ್ರೀಮಂತರು ಈ ಬಗ್ಗೆ ತಮ್ಮ ಲಕ್ಷ್ಯವನ್ನು ಪೂರೈಸಿ ಈ ಗ್ರಂಥ ಪ್ರಕಟನೆಯ ಕಾರ್ಯವನ್ನು

A 'ಶರಣ ಸಾಹಿತ್ಯದಲ್ಲಿ ವೀರಶೈವ ಪಾರಿಭಾಷಿಕ ಶಬ್ದಗಳ ಪಟ್ಟಿಕೆ ಪ್ರಕಟವಾಗಿದೆ (ಸಂ.

ಕೈಗೊಂಡವರಿಗೆ ಉದಾರವಾಗಿ ಧನಸಹಾಯಮಾಡುವುದು ಎಲ್ಲ ವಿಧದಿಂದಲೂ ಅವಶ್ಯ ಮತ್ತು ಅನಿವಾರ್ಯ. ಇಲ್ಲವಾದರೆ ಉತ್ತಮವಾದ ಈ ವಾಙ್ಮಯವು ಉದ್ಧಾರವಾಗುವುದೆಂತು ? ಸಮಾಜ ಸಂಸ್ಕೃತಿ ಉಳಿವುದೆಂತು ?A

ವೀರಶೈವ ವಾಙ್ಮಯದ ಉದ್ಧಾರಕ್ಕೆ ಮೊಟ್ಟಮೊದಲು ಆಗಬೇಕಾದ ಕಾರ್ಯ ಗ್ರಂಥ ಭಂಡಾರದ ಸ್ಥಾಪನೆ. ಅ. ಭಾ. ವೀ. ಮಹಾಸಭೆಗಳಲ್ಲಿ ಹಲವು ವೇಳೆ ಈ ಗೊತ್ತುವಳಿಯಾಗಿದೆ. ಆದರೂ ಕಾರ್ಯರೂಪಕ್ಕೆ ಬಂದಿಲ್ಲ. ಧಾರವಾಡದಲ್ಲಿ ಈ ಕಾರ್ಯ ಲಿಂಗಾಯತ ಸಾಹಿತ್ಯ ಸಮಿತಿಯವರಿಂದ ಮುಂದೆ ಸಾಗಿರುವುದು ಇದ್ದುದರಲ್ಲಿ ಸಮಾಧಾನವಾಗಿದೆ. ಸುಸಂಘಟನೆಯಿಂದ ಅಖಿಲ ಭಾರತದಲ್ಲಿ ವೀರಶೈವ ಸಾಹಿತ್ಯ ಸಂಸ್ಕೃತಿಗಳ ಪ್ರಚಾರಕ್ಕೆ ಅ. ಭಾ. ವೀ. ಸಾ. ಪರಿಷತ್ತು ಶ್ರಮಿಸಬೇಕಾಗಿದೆ. ಶ್ರೀ ಚಿತ್ರದುರ್ಗ ಜಗದ್ಗುರುಗಳು, ಶ್ರೀ ಹುಬ್ಬಳ್ಳಿ ಜಗದ್ಗುರುಗಳು ಈ ಬಗ್ಗೆ ಮನಸ್ಸು ಮಾಡಲಿ.

ವೀರಶೈವ ಪ್ರಾಚೀನ ಗ್ರಂಥಗಳು ಶುದ್ಧವಾಗಿಯೂ, ಸುಂದರವಾಗಿಯೂ ಪ್ರಕಟವಾಗಬೇಕು. ಧಾರವಾಡದಲ್ಲಿ ಮುದ್ರಣವಾದ ಚೆನ್ನಬಸವ ಪುರಾಣ, ಪ್ರಭು ಲಿಂಗಲೀಲೆ, ಶಬರಶಂಕರ ವಿಳಾಸ, ಶಂಕರ ದಾಸಿಮಯ್ಯ ಪುರಾಣ, ಬಸವೇಶ್ವರ ವಚನಗಳು, ಗಿರಿಜಾಕಲ್ಯಾಣ ಮೊದಲಾದ ಗ್ರಂಥಗಳು ಈ ವಿಷಯದಲ್ಲಿ ಮಾರ್ಗದರ್ಶಕವಾಗಿವೆ.

ವೀರಶೈವ ವಿಭೂತಿಗಳು, ರಾಜರುಗಳು, ಮತ್ತು ಶರಣರುಗಳನ್ನು ಕುರಿತು ಐತಿಹಾಸಿಕ ದೃಷ್ಟಿಯಿಂದ ಕನ್ನಡ, ತಮಿಳು, ತೆಲುಗು, ಹಿಂದಿ, ಮರಾಠಿ ಮತ್ತು ಇಂಗ್ಲಿಷ್ ಮೊದಲಾದ ಭಾಷೆಗಳಲ್ಲಿ ಗ್ರಂಥಗಳು ಪ್ರಕಟವಾಗಬೇಕು. ವೀರಶೈವ ಮತತತ್ವಗಳನ್ನು ಕುರಿತು ಎಲ್ಲ ಭಾಷೆಗಳಲ್ಲಿಯೂ ಗ್ರಂಥಗಳು ಪ್ರಕಟವಾಗಬೇಕು. ಮೈಸೂರಿನ ವಿಶ್ವವಿದ್ಯಾನಿಲಯದಲ್ಲಿ ಪ್ರಕಟವಾಗಿರುವ ಹರಿಶ್ಚಂದ್ರ ಕಾವ್ಯಸಂಗ್ರಹ, ಪ್ರಭುಲಿಂಗ ಲೀಲಾಸಂಗ್ರಹ, ವಚನ ಧರ್ಮಸಾರದಂತಹ ಪ್ರಾಚೀನ ಮಹಾಕಾವ್ಯಗಳ ಸಂಗ್ರಹ ಗ್ರಂಥಗಳು ಪ್ರಕಟವಾಗುವುದು ವಿದ್ಯಾರ್ಥಿಗಳ ಮತ್ತು ಜನಸಾಮಾನ್ಯರ ಹಿತದೃಷ್ಟಿಯಿಂದ ಅವಶ್ಯವಾಗಿದೆ.

---

A ಡಾ॥ ದಿವಾಕರರ ವಚನಶಾಸ್ತ್ರರಹಸ್ಯ, ಶ್ರೀ ಬಸವೇಶ್ವರ ವಚನ, ಪ್ರಭುದೇವರ ವಚನ ಈಗ ಹಿಂದಿಗೆ ಭಾಷಾಂತರವಾಗಿವೆ. (ಸಂ.)

ಪ್ರಬುದ್ಧವಾದ ಪ್ರತಿಯೊಂದು ಜನಾಂಗವೂ ಸಮಾಜವೂ ತಮ್ಮ ಚರಿತ್ರೆಯನ್ನೂ, ಪರಂಪರೆಯನ್ನೂ ಕಾಪಾಡಿಕೊಳ್ಳಬೇಕು. ಈಗಿನ ವೀರಶೈವ ಸಮಾಜವು ಈ ಬಗ್ಗೆ ತುಂಬಾ ಅನಾದರವನ್ನು ತೋರಿಸಿದೆ. ಕೊಲ್ಲಿಪಾಕಿ, ಕಲ್ಯಾಣ, ಕಪ್ಪಡಿ ಸಂಗಮ, ಮುಳಬಾಗಿಲು, ಬಗೆವಾಡಿ, ಇಂಗಳೇಶ್ವರ, ಕಂಚಿ, ಶ್ರೀಶೈಲ, ಉಳವಿ, ಕೊಲ್ಲಿಪಾಕಿ, ಹರದನಹಳ್ಳಿ, ಸೊನ್ನಲಿಗೆ, ಬಳ್ಳಿಗಾವಿ, ಉಡುತಡಿ, ಅಬಲೂರು, ಮಾಸೂರು, ಹಂಪೆ, ಗೋಕರ್ಣ, ಲಕ್ಷ್ಮೇಶ್ವರ ಮೊದಲಾದ ವೀರಶೈವ ಪ್ರಾಚೀನ ಕ್ಷೇತ್ರಗಳ ಇತಿಹಾಸ ಸಂಶೋಧನೆಯು ಬಹಳ ಅವಶ್ಯವಾದದ್ದು. ಮೇಲೆ ಹೇಳಿದ ಈ ಕ್ಷೇತ್ರಗಳೇ ಅಲ್ಲದೆ ಕೆಳದಿ, ಇಕ್ಕೇರಿ, ಬಿದನೂರು, ಮಡಕೇರಿ, ಸ್ವಾದಿ, ಪುಂಗನೂರು, ಬಿಜ್ಜಾವರ, ಓರುಂಗಲ್ಲು, ಹಾಗಲ್ವಾಡಿ, ಕಿತ್ತೂರು ಮೊದಲಾದ ಪ್ರಾಚೀನ ವೀರಶೈವ ರಾಜಧಾನಿಗಳನ್ನು ಸಂದರ್ಶಿಸಿ, ಅಲ್ಲಿನ ಇತಿಹಾಸವನ್ನೂ, ಅಲ್ಲಿ ಸಿಗುವ ತಾಮ್ರ ಮತ್ತು ಶಿಲಾ ಶಾಸನಗಳನ್ನೂ ಸಂಗ್ರಹಿಸಿ ಪ್ರಕಟಿಸುವುದು ಬಹು ಮುಖ್ಯವಾದ ವಿಷಯ. ವೀರಶೈವ ಗ್ರಂಥಗಳ ಪ್ರಕಟನೆಯು ಎಷ್ಟು ಮಹತ್ವವೋ, ವೀರಶೈವ ಶಿಲಾಶಾಸನಗಳ ಸಂಗ್ರಹವೂ ಅಷ್ಟೇ ಮಹತ್ವ. ಬಸವೇಶ್ವರ, ದೇವರ ದಾಸಿಮಯ್ಯ, ರೇವಣಸಿದ್ಧೇಶ್ವರ, ಸಿದ್ಧರಾಮೇಶ್ವರ, ತೋಂಟದಾರ್ಯ, ಕೇಶಿರಾಜ ದಂಡನಾಯಕ, ಲಕ್ಕಣಾಮಾತ್ಯ, ಕೆರೆಯ ಪದ್ಮರಸ ಮೊದಲಾದ ಐತಿಹಾಸಿಕ ಮಹಾಪುರುಷರ ಸಂಬಂಧವಾದ ಶಾಸನಗಳನ್ನು ಸಂಗ್ರಹಿಸಿ ಪ್ರಕಟಿಸುವುದು ಬಹು ಜರೂರಾಗಿ ಆಗಬೇಕಾದ ಕಾರ್ಯ. ಮುಳಬಾಗಿಲು, ಶಿವಗಂಗೆ ಇಂಗಳೇಶ್ವರ, ಹರದನಹಳ್ಳಿ ಮೊದಲಾದ ಕಡೆ ಮಹತ್ವದ ಶಿಲಾಶಾಸನಗಳು ಪ್ರಕಟವಾಗದೆ ಇವೆ. ಇವೆಲ್ಲಾ ಪ್ರಕಟವಾಗುವುದವಶ್ಯ. ಇದರಿಂದ ಮಿಗಿಲಾದ ಐತಿಹಾಸಿಕ ಸಂಗತಿಗಳು ತಿಳಿದುಬರುವ ಸಂಭವವುಂಟು.

ಇತ್ತೀಚೆಗೆ ಸಂಶೋಧನೆಯ ಯುಗವು ಪ್ರಾರಂಭವಾಗಿದೆ. ವೀರಶೈವ ಸಾಹಿತ್ಯದ ಬಗೆಗೂ ಸಂಶೋಧನೆಗಳು ನಡೆಯುತ್ತಿವೆ. ವೀರಶೈವರಿಗಿಂತ ವೀರಶೈವೇತರ ವಿದ್ವಾಂಸರೇ ಈ ಬಗ್ಗೆ ಹೆಚ್ಚು ಆಸಕ್ತಿಯನ್ನು ತೋರುತ್ತಿರುವುದು ಒಂದು ಶ್ಲಾಘ್ಯವಾದ ವಿಷಯ. ಅನುಭವ ಮಂಟಪವು ಐತಿಹಾಸಿಕವೆ? ಸಿದ್ಧರಾಮನು ವೀರಶೈವನೆ? ಹರಿಹರ ರಾಘವಾಂಕರು ವೀರಶೈವ ಕವಿಗಳೆಂಬುದಕ್ಕೆ ತಕ್ಕ ಆಧಾರಗಳೇನು? ಕರ್ಣಾಟಕ ಸಂಗೀತದ ಮೂಲ

ಪುರುಷನು ನಿಜಗುಣರೋ? ಪುರಂದರದಾಸರೋ? ನಿಜಗುಣ ಶಿವಯೋಗಿ, ಸರ್ವಜ್ಞಮೂರ್ತಿ, ಸಪ್ತಕಾವ್ಯದ ಗುರುಬಸವ ಮೊದಲಾದ ಜನಪ್ರಿಯ ಕವಿಗಳು ಅವಧೂತರಾಗಿರಬಾರದೇಕೆ ? ರೇವಣಸಿದ್ಧನು ಕಾಳಾಮುಖನಾಗಿರಬಹುದೆ ? ವೀರಶೈವ ಮತಸ್ಥಾಪಕರಾರು ? ಶ್ರೀಕರ ಭಾಷ್ಯವು ಪ್ರಾಚೀನವೆ? ನವೀನವೆ? ೧೪ ನೇ ಶತಮಾನದ ಹಿಂದೆ ವೀರಶೈವ ವಾಙ್ಮಯವಿತ್ತೆ ? ವೀರಶೈವವು ಅವೈದಿಕವೆ ? ವೀರಶೈವ ಮತಕ್ಕೂ ವೇದಾಗಮಗಳಿಗೂ ಬಾಂಧವ್ಯ ಉಂಟೆ ? ನಾಥಪಂಥಕ್ಕೂ ವೀರಶೈವ ಪಂಥಕ್ಕೂ ಸಂಬಂಧವಿರಬಹುದೆ ? ವೇದಾಗಮಗಳಲ್ಲಿ ವೀರಶೈವದ ಅಂಶಗಳಿವೆಯೆ ? ಕಾಶ್ಮೀರ ಶೈವಕ್ಕೂ ವೀರಶೈವಕ್ಕೂ ಸಂಬಂಧವುಂಟೆ? ಇತ್ಯಾದಿ ವಿಚಾರಗಳು ಈಗ ವಿದ್ವಾಂಸರಲ್ಲಿ ಚರ್ಚಿಸಲ್ಪಡುತ್ತಿವೆ. ಇವುಗಳಿಗೆಲ್ಲ ಸಮಂಜಸವಾದ ಉತ್ತರಗಳನ್ನು ಕೊಡುವುದು ವೀರಶೈವ ವಿದ್ವಾಂಸರ ಕರ್ತವ್ಯವಲ್ಲವೆ ? ಈಗ ಈ ಕಾರ್ಯಕ್ಕೆ ಕಂಕಣ ಕಟ್ಟಿದವರು ಎಷ್ಟು ಮಂದಿ? ಇದಕ್ಕಾಗಿಯೇ ಸಂಶೋಧನಾಲಯ ಬೇಕಲ್ಲವೆ ? ಅದಕ್ಕೆ ಧನಿಕರ ಬೆಂಬಲ ಬೇಕಲ್ಲವೆ ?

ವೀರಶೈವ ಸಾಹಿತ್ಯ ಸಮ್ಮೇಳನಗಳೂ ಶಿವಾನುಭವ ಸಮ್ಮೇಳನಗಳೂ ಜತೆಜತೆಯಲ್ಲಿ ನಡೆಯುವುದರಲ್ಲಿ ಒಂದು ಔಚಿತ್ಯವಿದೆ. ಈ ಮೊದಲೇ ನಾವು ಹೇಳಿರುವಂತೆ ಈ ವಾಙ್ಮಯದ ಹುಟ್ಟು ಕೇವಲ ಶಿವಾನುಭವದ ಪ್ರಚಾರಕ್ಕಾಗಿ ; ತನ್ಮೂಲಕ ಮಾನವಕುಲದ ಉದ್ಧಾರಕ್ಕಾಗಿ. ಕೇವಲ ಕನ್ನಡದಲ್ಲಿಯೇ ಅಲ್ಲದೆ, ತಮಿಳು, ತೆಲುಗು, ಸಂಸ್ಕೃತ ಭಾಷೆಗಳಲ್ಲಿಯೂ ಈ ಮಾತಿಗೆ ನಿದರ್ಶನಗಳಿವೆ. ಶಿವಾನುಭವ ಮತ್ತು ವೀರಶೈವ ವಾಙ್ಮಯಗಳು ಶಿವ ಶಕ್ತಿಯರಂತೆ, ಹಾಲು ಸಕ್ಕರೆಗಳಂತೆ, ಕುಸುಮ ಸೌರಭಗಳಂತೆ ಅವಿನಾಭಾವದಿಂದ ಕೂಡಿದುವು. ಏಕೆಂದರೆ ವೀರಶೈವ ಸಾಹಿತ್ಯವು ಪರಶಿವನ ಸದ್ರೂಪವಾದ ಜಗತ್ತಿನ ಸೇವಾರ್ಥವಾಗಿ, ಚಿದ್ರೂಪವಾದ ಶಿವನ ಅನುಗ್ರಹಾರ್ಥವಾಗಿ ಪ್ರಕಟವಾದುದು. ಸಕಲಜೀವಾವಳಿಯ ಲೇಸನೇ ಬಯಸತಕ್ಕುದು. ವೇದಾಂತವು ಜನರು ಹೇಳತಕ್ಕುದು, ಶಿವಾನುಭವವು ಹೇಳಿದಂತೆ ನಡೆಯತಕ್ಕುದು, ಅಂತೇ ಅದಕ್ಕೆ ಮಹತ್ವವಿದೆ. ವಿಶ್ವದ ಉನ್ನತಿಗೆ ಇದರ ಸಹಾಯಬೇಕು. ಶಿವಾನುಭವ ಸಾಹಿತ್ಯ ಪ್ರಚಾರವಾಗಬೇಕು. ಅದರಿಂದ ಜನರ ಉನ್ನತಿಯಾಗಬೇಕು ಮತ್ತು ವಿಶ್ವಕ್ಕೆ ಶಾಂತಿಲಭಿಸಬೇಕು.

ವೀರಶೈವಧರ್ಮ ಸ್ವತಂತ್ರವಾದುದು. ದರ್ಶನವು ಪ್ರಭಾವಯುಕ್ತ ವಾದುದು. ಸಂಸ್ಕೃತಿಯು ಶುದ್ಧವಾದುದು. ಇತಿಹಾಸವು ಉಜ್ವಲವಾದುದು. ಆದುದರಿಂದ ವೀರಶೈವ ವಾಙ್ಮಯವು ಸ್ವತಂತ್ರವಾಗಿ ಬಳೆಯುವುದೂ ಬೆಳಗು ವುದೂ ಅವಶ್ಯ. ಅದರಿಂದ ಕನ್ನಡ ಮೊದಲಾದ ಭಾಷೆಗಳಿಗೇ ಅಲ್ಲದೆ, ಭಾರತೀಯ ವಾಙ್ಮಯ ಪ್ರಪಂಚಕ್ಕೇ ಮಹೋಪಕಾರವುಂಟು. ಸಾಹಿತ್ಯ ವನ್ನೂ ಸಾಹಿತಿಗಳನ್ನೂ ಸಂರಕ್ಷಿಸಿಕೊಳ್ಳುವುದು ಅವಶ್ಯ. ಲಾರ್ಡ್ ಮೆಕಾಲೆ 'ಇಂಗ್ಲೀಷ್ ಸಾಮ್ರಾಜ್ಯವನ್ನು ಬಿಟ್ಟರೂ ನಾವು ಷೇಕ್ಸ್‌ಪಿಯರನನ್ನು ಬಿಡ ಲಾರೆವು' ಎಂದ ಮಾತನ್ನು ಇಂದು ನಾವು ಸ್ಮರಿಸಬೇಕು. ಕೃಷ್ಣದೇವ ರಾಯನು ಮಹಾಕವಿ ಅಲಸಾನಿ ಪೆದ್ದನ್ನನಿಗೆ ಪಾದಪೆಂಡೆಯವಿಟ್ಟು ಅಂಬಾರಿಯಲ್ಲಿ ಕುಳ್ಳಿರಿಸಿ ವಿಜಯನಗರದಲ್ಲಿ ಮೆರೆಸಿದ ಕಥೆಯೂ ನಮಗೆ ಇಂದು ಸ್ಮರಣಾರ್ಹವಾಗಿದೆ.

ವೀರಶೈವ ಮಠಾಧಿಪತಿಗಳಿಗೂ, ವಾಙ್ಮಯ ಪ್ರಚಾರಕ್ಕೂ ನಿಕಟವಾದ ಸಂಬಂಧವುಂಟೆಂದು ಈ ಮೊದಲೇ ಹೇಳಿದೆಯಷ್ಟೆ. ಅದಕ್ಕೆ ಸಾಕ್ಷಿಯಾಗಿ ವಚನಕಾರ ಘನಲಿಂಗಿಯು ಸುತ್ತೂರು ವೀರಸಿಂಹಾಸನ ಮಠದ ಪಟ್ಟಾ ಧ್ಯಕ್ಷನು. ರಾಜೇಂದ್ರವಿಜಯ ಎಂಬ ಚಂಪೂ ಕಾವ್ಯವನ್ನು ಬರೆದ ಶ್ರೀ ಮುರಿಗೆ ದೇಶಿಕೇಂದ್ರನೂ, ಶಿವಲಿಂಗನಾಂದ್ಯವನ್ನು ಬರೆದ ಶ್ರೀ ಇಮ್ಮಡಿ ಮುರಿಗೆಯಸ್ವಾಮಿಯೂ, ಚಿತ್ರದುರ್ಗದ ಶೂನ್ಯಪೀಠ ಶ್ರೀ ಮುರುಘಾಮಠದ ಸ್ವಾಮಿಗಳು. ಸಿದ್ಧೇಶ್ವರ ಪುರಾಣ, ಪಾಲ್ಕುರಿಕೆ ಸೋಮ ನಾಥ ಪುರಾಣ ಮೊದಲಾದ ಗ್ರಂಥಗಳ ಕರ್ತೃವಾದ ವಿರಕ್ತ ತೋಂಟ ದಾರ್ಯನು ನಂದಿಪುರ ಸಿಂಹಾಸನಾಧೀಶ್ವರನು. ಮಹಾಕವಿ ಗುಬ್ಬಿ ಮಲ್ಲಣಾರ್ಯನು ಶಿವಗಂಗೆಯ ಮೇಲಣಗವಿ ವೀರಸಿಂಹಾಸನ ಮಠದ ಶಾಂತನಂಜೇಶ್ವರ ಸ್ವಾಮಿಗಳ ಮುಖ್ಯ ಶಿಷ್ಯನು. ಬಸವಪುರಾಣದ ಪುರಾತನರ ಚರಿತೆಯನ್ನು ಬರೆದ ಕುಮಾರ ಚೆನ್ನಬಸವೇಶನು ಬಾಳೆಹಳ್ಳಿ ಶ್ರೀ ವೀರಸಿಂಹಾಸನ ಮಠದ ಅಧ್ಯಕ್ಷನು. ರಾಜಶೇಖರಾದಿ ಕಾವ್ಯಗಳ ಕರ್ತೃ ಷಡಕ್ಷರದೇವನು ಧನುಗೂರು ಮಠದ ಪಟ್ಟಾಧ್ಯಕ್ಷನು. ಇತ್ಯಾದಿ ನಿದರ್ಶನಗಳಿಂದ ವೀರಶೈವ ಮಠಾಧಿಪತಿಗಳಿಗೂ ಸಾಹಿತ್ಯಕ್ಕೂ ನಿಕಟ ವಾದ ಸಂಬಂಧವುಂಟೆಂದು ಸ್ಪಷ್ಟವಾಗುವುದಿಲ್ಲವೆ?

ಸಂಸಾರದ ಜಂಜಡಕ್ಕೆ ಸಿಕ್ಕದಿದ್ದ, ವೈರಾಗ್ಯದ ಆನಂದದಿಂದ ಉತ್ಸಾಹಿತರಾದ, ಲೋಕೋದ್ಧಾರಕ್ಕೆ ಕಂಕಣ ಕಟ್ಟಿದ, ಬ್ರಹ್ಮಚರ್ಯದ ಬೆಂಬಲದಿಂದ ಬಲಶಾಲಿಗಳಾದ, ಶಿಷ್ಯಾರ್ಜನೆಯ ವಿಪುಲ ಸೌಕರ್ಯವುಳ್ಳ, ಮಠಾಧಿಪತಿಗಳು ಬಹುಮಟ್ಟಿಗೆ ತಮ್ಮದೇ ಆದ ಈ ಕಾರ್ಯ ಕ್ಷೇತ್ರದಲ್ಲಿ ಸಮಾವೇಶವಾದ ವೀರಶೈವ ವಾಙ್ಮಯೋದ್ಧಾರ ಕಾರ್ಯವನ್ನು ಕೈಗೊಳ್ಳುವುದು ಐಹಿಕಾಮುಷ್ಮಿಕ ದೃಷ್ಟಿಗಳಿಂದ ಅವಶ್ಯವೂ ಅನಿವಾರ್ಯವೂ ಆದುದು.

ವಾಙ್ಮಯವು ಜನಜೀವನದ ಉಸಿರು. ವೀರಶೈವ ವಾಙ್ಮಯವು ಲೋಕಜೀವನದ ಪ್ರಗತಿಗೆ ಸಾಧಕವಾದುದು. ಇಂತಹ ವಾಙ್ಮಯದ ವಿಸ್ತಾರಕ್ಕೂ ಪ್ರಸಾರಕ್ಕೂ ಸಹಾಯಮಾಡುವುದು ವೀರಶೈವ ಮಠಾಧಿಪತಿಗಳಿಗೂ ಶ್ರೀಮಂತ ಜನರಿಗೂ ಭೂಷಣ ಪ್ರಾಯವಾದುದು. ಆದುದರಿಂದಲೇ ನಾವು ಇಲ್ಲಿ ಈ ವಿಷಯವನ್ನು ಇಷ್ಟು ಒತ್ತಾಯದಿಂದ ಪ್ರಸ್ತಾಪಿಸಿದ್ದೇವೆ.

ವೀರಶೈವ ಸಾಹಿತ್ಯದ ಸಂಶೋಧನೆ ಹಾಗೂ ಪ್ರಸಾರ ಕಾರ್ಯಗಳು ಕೇವಲ ವೀರಶೈವರಿಗೇ ಅಲ್ಲ, ನಮ್ಮ ನಾಡಿನ ಹಾಗೂ ನಮ್ಮ ಸಂಸ್ಕೃತಿಯ ಉನ್ನತಿಗಾಗಿಯೂ ಬೆಳಕು ಕಾಣಬೇಕು. ವೀರಶೈವ ಧರ್ಮ ಮತ್ತು ದರ್ಶನ ಗ್ರಂಥಗಳು ಭಾರತೀಯ ಜ್ಞಾನಭಂಡಾರದ ಪರಿಪೂರ್ಣತೆಗೆ ಅತಿ ಅಗತ್ಯ ವಿಷಯಗಳೆನಿಸಿವೆ. ಕಾರಣ ಇವುಗಳ ಪ್ರಕಟನ ಕಾರ್ಯವು ಕೂಡ ಸಮಾಜಕ್ಕೆ ಮತ್ತು ರಾಷ್ಟ್ರಕ್ಕೆ ಕಲ್ಯಾಣ ಪ್ರದವೆನಿಸುತ್ತದೆ.

---

# ಭಗವಾನ್ ತೋಂಟದಾರ್ಯನು ಬೋಳಬಸವೇಶ್ವರನಿ
## ಉಪದೇಶಿಸಿದ 'ವೀರಶೈವ ಧರ್ಮ'

ಕರ್ಣಾಟಕದಲ್ಲಿ ಆಗಿಹೋದ ವಿಭೂತಿಪುರುಷರಲ್ಲಿ ಭಗವಾ ತೋಂಟದ ಸಿದ್ಧಲಿಂಗೇಶ್ವರನು ಅಗ್ರಣ್ಯನು. ಈತನು ಹರದನಹಳ್ಳಿಯ ಗೋಸಲ ಸಿದ್ಧೇಶ್ವನ ಪ್ರಶಿಷ್ಯನೂ ಗೋಸಲ ಚೆನ್ನಬಸವೇಶ್ವರನ ಶಿಷ್ಯ ಎನಿಸಿದ್ದಾನೆ. ಈತನು ವೀರಶೈವ ಧರ್ಮಪ್ರಸಾರಕ್ಕಾಗಿ ಸಮಗ್ರ ಭಾ ವನ್ನು ಸಂಚರಿಸಿದಂತೆ ಐತಿಹ್ಯವಿದೆ. ಈತನ ತಪೋಭೂಮಿ ಕಗ್ಗೆರೆ. ಇ ನಾಗಿಣೀನದೀತೀರದಲ್ಲಿ ತುಮಕೂರು ಜಿಲ್ಲೆಯಲ್ಲಿದೆ. ಇಲ್ಲಿಗೆ ಅ ದೂರದಲ್ಲಿ ಈತನ ಶಿವಯೋಗ ಸಮಾಧಿಯ ಸ್ಥಳ ಎಡೆಯೂರು ಇದೆ. ಇ ಈತನ ದಿವ್ಯ ಭವ್ಯದೇವಾಲಯವಿದ್ದು ಅದು ಒಂದು ಯಾತ್ರಾಸ್ಥಳವೆನಿಸಿ ಎಡೆಯೂರು, ಕಗ್ಗೆರೆಗಳ ಮಧ್ಯೆ ತೋಂಟದಾರ್ಯನು ಕಲ್ಲುಬಸವನಿಗೆ ಹು ಮೇಯಿಸಿ ಪವಾಡವನ್ನು ಮೆರೆದ ಮಂಗಲಕ್ಷೇತ್ರವಿದೆ. ವಿಜಯನಗ ಅರಸರಲ್ಲಿ ವಿಖ್ಯಾತನಾದ ವಿರೂಪಾಕ್ಷನ ಕಾಲದಲ್ಲಿ (ಕ್ರಿ. ಶ. ೧೪೭೭ ರಿ ೭೮) ಈ ತೋಂಟದಾರ್ಯನು ಇದ್ದಂತೆ ಚೆನ್ನಬಸವಪುರಾಣದಲ್ಲಿ (ಸಂಧಿ ಪದ್ಯಗಳು ೩೯,೪೦) ಹೇಳಿದೆ. ಈತನು ನಿರಂಜನ ಗಣೇಶ್ವರನ ಅವತಾ ವೆಂದು ಪುರಾಣಗಳಲ್ಲಿ ಹೇಳಿದೆ. ಈತನು ನೂರೊಂದು ಮಂದಿ ವಿರಕ್ತರನ್ನು ಕೂಡಿಕೊಂಡು ಭರತಖಂಡವನ್ನು ಸಂಚರಿಸಿದಂತೆ ವಿರಕ್ತ ತೋಂಟದಾರ್ಯ (೧೫೬೦) ಸಿದ್ಧೇಶ್ವರ ಪುರಾಣದಲ್ಲಿಯೂ, ಕವಿ ಶಾಂತೇಶನ (೧೫೬ ತೋಂಟದ ಸಿದ್ಧೇಶ್ವರ ಪುರಾಣದಲ್ಲಿಯೂ ಹೇಳಿದೆ. ಎಡೆಯೂರು ಸಿ ಲಿಂಗೇಶ್ವರ ದೇವಾಲಯದಲ್ಲಿರುವ (ಕ್ರಿ. ಶ. ೧೫೦೦) ಶಿಲಾಶಾಸನದಲ್ಲಿ ಮಹಾತ್ಮನ ವಿಚಾರವಾಗಿಯೂ, ಈತನ ಶಿಷ್ಯರುಗಳ ವಿಷಯವಾಗಿಯೂ ಗೌರವಾರ್ಹವಾದ ಉಲ್ಲೇಖವಿದೆ.

ಈತನು ಮಹಾಮಹಿಮನೂ ವಿದ್ವಾಂಸನೂ ಆಗಿದ್ದನು. 'ಷಟ್ಸ್ಥ ಜ್ಞಾನ ಸಾರಾಮೃತ' ಎಂಬ ವಚನ ಗ್ರಂಥವನ್ನು ಬರೆದಿದ್ದಾನೆ. ಅದರ

A. ಹರದನಹಳ್ಳಿಯು ಮೈಸೂರು ಜಿಲ್ಲಾ ಚಾಮರಾಜನಗರದ ಹತ್ತಿರವಿದೆ ಅಲ್ಲಿ ಈ ಮಹಾತ್ಮರ ಮಠವಿದೆ. (ಸಂ)

೭೦೧ ವಚನಗಳೂ, ೭ ವೃತ್ತಗಳೂ ಇವೆ. ವೀರಶೈವ ಧರ್ಮಕ್ಕೆ ಈ ಗ್ರಂಥವು ಕೈಗನ್ನಡಿಯಂತಿದೆ. ಈ ಮಹಾತ್ಮನನ್ನು ಕುರಿತು ಈತನ ಶಿಷ್ಯ ಕೋಟಿಗೆ ಸೇರಿದ ವಿರಕ್ತ ತೋಂಟದಾರ್ಯನು ಬರೆದ ಸಿದ್ಧೇಶ್ವರ ಪುರಾಣವು ಅತ್ಯಂತ ಮಹತ್ವಪೂರ್ಣವಾದುದು. ಇದು ೧೮೮೫ ರಲ್ಲಿ ಮೊದಲು ಮೈಸೂರಿನಲ್ಲಿಯೂ ೧೯೫೧ ರಲ್ಲಿ ಈಚೆಗೆ ಗದುಗಿನಲ್ಲಿಯೂ ಅಚ್ಚಾಗಿದೆ ಈ ಪುರಾಣದಲ್ಲಿ ಭಗವಾನ್ ತೋಂಟದಾರ್ಯನು ತನ್ನ ಸನ್ನಿಧಿಯ ಶಿಷ್ಯನಾದ ನಿರಕ್ಷರ ಬೋಳಬಸವೇಶ್ವರನಿಗೆ ಉಪದೇಶಿಸಿದ ವೀರಶೈವಧರ್ಮ ತತ್ವಗಳು ಎಲ್ಲ ಜಿಜ್ಞಾಸುಗಳಿಂದಲೂ ಪರಿಗ್ರಹಿಸಲು ಅರ್ಹವಾಗಿವೆ. ಭಗವಾನ್ ತೋಂಟದಾರ್ಯನು ತನ್ನ ಕರುಣೆಯ ಶಿಶುವೆನಿಸಿದ ಬೋಳಬಸವೇಶ್ವರನಿಗೆ ತಪೋಭೂಮಿಯೆನಿಸಿದ ನಾಗಿಣಿನದೀತೀರದ ಕಗ್ಗೆರೆಯ ಹೂತೋಟದಲ್ಲಿ, ಷಟ್ಸ್ಥಲೋಪದೇಶ ಮಾಡುತ್ತಾನೆ. ಶಿಷ್ಯನು ತನ್ನನ್ನು ಅನುಗ್ರಹಿಸಬೇಕೆಂದು ಭಕ್ತಿಯಿಂದ ಪ್ರಾರ್ಥಿಸುತ್ತಾನೆ. ಪರಮಗುರುವಾದ ತೋಂಟದಸಿದ್ಧಲಿಂಗೇಶ್ವರನು "ನಸುನಗುತ ಆದರದಿಂದೆ ಬೋಳಬಸವೇಶನ ಶಿರವ ಪಿಡಿದು, ಕರುಣದಿಂ ನೆಗಪಿ ಕಾರುಣ್ಯಾಮೃತದ ಕಟಾಕ್ಷಂಗಳಿಂ ಸೂಸಿ, ಪರಮಮುದಮಂ ತಾಳ್ದು .... ನೀಂಕೇಳ್ವ ವರ ಮಹಾ ಪ್ರಶ್ನೆ ಲೇಸಾದುದು, ಈಗಳ್ ಒರೆವೆಂ ಆಲಿಸು ಚಿತ್ತ ಶುದ್ಧಿಯಿಂದ ಎಂದು ನಿರವಿಸುತ ಇರ್ದನ್" ಎಂದು ಸಿದ್ಧೇಶ್ವರ ಪುರಾಣದಲ್ಲಿ ಹೇಳಿದೆ. ಎಲೈ ಬೋಳಬಸವೇಶ್ವರನೆ, 'ಈ ವೀರಶೈವಂ ವೇದಭಾಷ್ಯ ಮತದಿಂ, ನ್ಯಾಯ, ಮೀಮಾಂಸೆ, ಭಾಟ್ಟ, ವೈಷ್ಣವ, ಪಾಶುಪತ, ಪಾಂಚರಾತ್ರ, ವೈಶೇಷಿಕ, ಕಾಪಾಲಿಕ, ಪ್ರಾಭಾಕರ, ಕಾಳ, ಸಾಂಖ್ಯ, ಗಾಣಾಪತಂಗಳಿಂದ ಅಧಿಕಮಪ್ಪುದು. ಶೈವಕ್ಕೆಸಲೆ ಮೂರು ಜನ್ಮಕಂ ಮುಕ್ತಿ, ಭಾವಿಸಿನೋಡೆ ವೀರಶೈವಕ್ಕೆ ಜನ್ಮ ಒಂದರೊಳೆ ಮೋಕ್ಷಂ ಅಪ್ಪುದು. ಕುಲ, ಜಾತಿ, ಆಶ್ರಮ, ಶಕುನ, ಮಂತ್ರ, ತಂತ್ರ, ಸೂತಕ, ಜಾಡ್ಯ ಇವಂ ಕಳೆದು ವೀರಶೈವ ಮಾರ್ಗಂ ಪರಿಶೋಭಿಪುದು. ಆ ವೀರಶೈವ ಮಾರ್ಗದೊಳ್ ಮಹಾ ಶಿವಾಚಾರ ಮಾರ್ಗವನು ಅರಿದು ಸಾವಧಾನದೊಳ್ ಇರ್ಪನೆ ಭಕ್ತನ್, ಆ ಭಕ್ತನೇ ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ' ಎನಿಸಿಕೊಳ್ಳುವನು.

ವೀರಶೈವ ಧರ್ಮದಲ್ಲಿ ಪರಶಿವನೇ ಲಿಂಗವೆಂದೂ ಜೀವನೇ ಅಂ ವೆಂದೂ ಪರಿಗಣಿಸಲ್ಪಟ್ಟಿರುವನು. ಲಿಂಗವು ಇಷ್ಟ, ಪ್ರಾಣ, ಭಾವ ಎಂ ಮೂರು ವಿಧವಾಗಿರುವುದು. ಹಾಗೆಯೇ ಅಂಗವೂಕೂಡ ತ್ಯಾಗಾಂ ಭೋಗಾಂಗ, ಯೋಗಾಂಗ ಎಂದು ಮೂರು ಬಗೆಯಾಗಿರುವುದು. ವೀ ಶೈವವು ಚರಮ ಜೀವನ ವೆನಿಸಿರುವುದು. ಸುರಪಥಸು, ಸೂರಮುಂಚ ಸುಳಿಗಾಳಿ, ಗಾಳಿಯಿದಿರ ದೀಪ, ನೀರ ಬೊಬ್ಬುಳಿಕೆ ಇವುಗಳಂತೆ ನಶ್ವರವಾ ದೇಹವನ್ನು ತಾನಲ್ಲ, ತನ್ನದಲ್ಲ ಎಂದು ತಿಳಿಯುವವನು ನಿಜಕ್ಕೂ ಮ ಜ್ಞಾನಿಯೆನಿಸುವನು. ರೋಗದಿಂದ ಕೋಟಲೆಗೊಂಡವನು ವೈದ್ಯನೆಡೆ ಹೋಗುವ ಹಾಗೆ, ಜನನ ಮರಣಾತ್ಮಕವಾದ ಸಂಸಾರ ದಿಂದ ಬಿಡುಗ ಯನ್ನು ಹೊಂದಬೇಕೆಂದು ಬಯಸುತ ಗುರುವರನ ಎಡೆಗೆ ಐದುವವ ಮಹಾಜ್ಞಾನಿಯೆನಿಸಿಕೊಳ್ಳುವನು. ಹಾಗೂ ಮುಮುಕ್ಷುವೆನಿಸುವನು.

ಪರಮ ಗುರುವು ಕರುಣದಿಂದ ಶಿವಲಿಂಗವನು ಕರತಳಕೆ ಕುಡೆ ಅದ ಸರ್ವಾಂಗದಲಿ ತಾಳ್ದು ಆವಗಂ ಹೆರೆಹಿಂಗದೆ ಜಾಗ್ರತ್, ಸ್ವಪ್ನ, ಸುಷು ಎಂಬಅವಸ್ಥಾತ್ರಯಂಗಳಲಿ ಎಚ್ಚರದಿಂದೆ ಇರುತೆ ಬಾಹ್ಯ ಅಂತರ ಉಭಯ ಗಳಲಿ ಲಿಂಗಕಳಿ ಬೆರೆದು ಒಪ್ಪುತಿರ್ಪಾತನೇ ಲಿಂಗಾಂಗ ಸಂಬಂ ಎನಿಸುವನು.

ಬ್ರಹ್ಮರಾಕ್ಷಸ, ಪಿಶಾಚಾದಿಗಳ ಅಪಮೃತ್ಯುಗಳ ಬಡಿದು ಓಡಿಸು ಸಕಲ ವಶಕೆ ತಿಲಕವು ಎನಿಸುವ ಭಸಿತವನು ವೀರಶೈವನಾದವನು ಅತಿ ಭ ಯಿಂದ ಧರಿಸುವುದು ಶಿವನ ನೇತ್ರಗಳಿಂದ ಹುಟ್ಟಿದ, ತನ್ನನು ಮುಟ್ಟಿದವ ಧರಿಸಿದವರ,ಭವಜಲಧಿಯನು ದಾಂಟಿಸುವ, ರುದ್ರಾಕ್ಷಿಯನು ಲಿಂಗವಂತ ಒಲವಿನಿಂದ ಧರಿಸುವುದು. ಏಳುಕೋಟಿ ಮಂತ್ರಕ್ಕೆ ಜನನಿ ಎನಿಸಿಕೊಂ ರುವ, ತನ್ನನು ಜಪಿಸಿದವರ ಕಾಲನ ಭಯವ ಕಳೆವ, ಸಕಲ ಮೋ ಭೋಗಂಗಳಿಗೆ ನೆಲೆಮನೆ ಎನಿಸಿರುವ, ಪಂಚಾಕ್ಷರಿಯನು ಪರಮಶಿವಭಕ್ತ ಆವಾಗಲೂ ಅನುವರಿದು ಜಪಿಸಬೇಕು.

ಈರೀತಿ, ಲಿಂಗ, ವಿಭೂತಿ, ರುದ್ರಾಕ್ಷಿ, ಶಿವಮಂತ್ರಗಳಿಂದ ಕೂ ಭವಿಗಳ ಅಂದರೆ ಪಾಪಿಗಳ ಸಂಗವನು ಮಾಡದೆ ಅನ್ಯದೈವಗಳ ಭಜಿ

ಪತಿವ್ರತೆಯಂತೆ—ಶರಣಸತಿ ಲಿಂಗಪತಿ ನ್ಯಾಯದಲಿ–ನಿರತನಾಗಿ ಅಖಿಳ ವಸ್ತುಗಳ ಸುಪ್ರೀತಿಯಿಂ ಲಿಂಗಜಂಗಮಕೆ ನಿರ್ವಂಚನೆಯೊಳ್ ಇತ್ತು ಸುಖಿಸನು ಭಕ್ತನು ಎನಿಸುವನು.

ನಿಜವಾದ ವೀರಶೈವ ಭಕ್ತನು ಭವಿಗಳೊಡನೆ ಆಡನು. ಅವರೊಡನೆ ಭೋಜನಂಗೆಯ್ಯನು. ತನ್ನ ಕನ್ನಿಕೆಯನು ಮಹಾಭಕ್ತರಿಗೆ ಕುಡುವುದು ಉತ್ತಮ ಮಾರ್ಗವು. ಹರನ ಭಕ್ತರ್ಗೆ ಕಡಬಡ್ಡಿಗಳ ಕೊಡುವುದು ಪರಮ ಪರಿಣಾಮ. ಬಂದೊಡೆ ಲೇಸು, ಬಾರದಿರ್ದ್ದಡೆ ಪಿರಿದು ಎಂದು ತಿಳಿವುದು.

ಲಿಂಗಧಾರಿಯಾದವನು ತನ್ನ ಲಿಂಗವನು ಅಡಿಮಾಡಿ ಸ್ಥಾವರ ಲಿಂಗಗಳಿಗೆ ಪೊಡಮಟ್ಟು ವರಗಳನು ಬೇಡುವುದು ತಪ್ಪು. ಇದು ಶರಣರ ಧರ್ಮಕ್ಕೆ ಸಲ್ಲದು. ಸದ್ಗುರುವು ಶಿವದೀಕ್ಷಾ ಮೂಲಕವಾಗಿ ತನ್ನ ಕೊರಳಿನಲ್ಲಿ ಧರಿಸಿದ ಇಷ್ಟಲಿಂಗವನು ತನ್ನ ಸರ್ವಸ್ವವೆಂದು ಭಾವಿಸಿ, ಅರ್ಚಿಸಿ ಲಿಂಗ ವಂತರು ಕೃತಾರ್ಥರಾಗುವದು ಎಂದು ಶಿವಾಗಮಗಳು ಹೇಳಿವೆ. ತನು ಮನ ಧನಗಳನು ಗುರು ಲಿಂಗ ಜಂಗಮಕ್ಕೆ ಸಮರ್ಪಿಸುವುದು ವೀರಶೈವ ಲಕ್ಷಣವು. ಹಾಲುಳ್ಳ ಕಾಲದಲಿ ಹಬ್ಬವನು ಮಾಡುವುದು, ಗಾಳಿ ಬಂದಲ್ಲಿ ತೂರಿ ಕೊಳ್ಳುವುದು ಹೇಗೆ ವಿವೇಕವೋ ಹಾಗೆ ಶ್ರೇಷ್ಠವಾದ ನರಜನ್ಮದಲಿ ಲಿಂಗ ಪೂಜೆಯನು ಮಾಡಿ, ಜಂಗಮರ ಸೇವೆಮಾಡಿ, ಶಿವನ ಕೃಪೆಯನ್ನು ಪಡೆಯು ವವನೇ ಪುಣ್ಯವಂತನು. ಶತಕೋಟಿ ದೇವಾಲಯಗಳನು ಕಟ್ಟಿಸಿದ ಪುಣ್ಯವು ಒಬ್ಬ ಜಂಗಮನಿಗೆ ನಮಿಸಿದರೆ ಬರುವುದು. ಶತವಾಜಪೇಯ ಫಲವು ಒಬ್ಬ ಜಂಗಮನನ್ನು ಪೂಜಿಸಿದರೆ ಫಲಿಸುವುದು. ಮನೆಗೆ ಬಂದ ಜಂಗಮರ ಕುಲ, ಜಾತಿ ಭೇದಗಳನು ಅರಸದೆ ಜಂಗಮನನು ಲಿಂಗವೆಂದು ಪೂಜಿಸುವುದು ಶ್ರೇಷ್ಠವಾದ ಧರ್ಮವು. ಹುಸಿ, ಕಳವು, ಠಕ್ಕು ಮೊದಲಾದ ದುರ್ಗುಣ ಗಳಿಂದ ಕೂಡಿ, ವಿಭೂತಿ, ರುದ್ರಾಕ್ಷಿ, ಲಿಂಗಗಳನು ಧರಿಸುವುದರಿಂದ ಯಾವ ಪ್ರಯೋಜನವೂ ಇಲ್ಲ. ಗಂಗೆಯ ನೀರನ್ನು ಹೆಂಡದ ಗಡಿಗೆಯ್ಳಲ್ಲಿ ತುಂಬಿದರೆ ಅದು ಹೇಗೆ ತಾನೇ ತೀರ್ಥವೆನಿಸೀತು? ಬಾಳೆಗೆ ಫಲಂ ಪುಟ್ಟಲು ಅದೇಕಡೆ. ಚೇಳಿಗೆ ಗರ್ಭವಾದುದೇ ಕಡೆ. ಅಂತೆಯೇ ಈಶನ ಭಕ್ತನಿಗೆ ತನ್ನ ಭಾಷೆಯೇ ಕಡೆ. ಭಾಷೆ ಕೆಟ್ಟಾಗ ಅಂತಹ–ಭಕ್ತನನು ಭಾಳನೇತ್ರನು

ಮೆಚ್ಚನು. 'ಹುಸಿವವನು ಹೊಲೆಯನು' ಎಂಬ ನಾಡನುಡಿಯನು ಶಶಿಧರನ ಶರಣನು ಅನುಸರಿಸುವದು. ನಡೆ ನುಡಿಗಳೊಂದಾಗುವುದು ಭಕ್ತನ ಲಕ್ಷಣ. ಮನದೊಳಗೆ ಒಂದು, ಮಾತಿನೊಳಗೆ ಮತ್ತೊಂದು ಇರುವವನು ವೀರಶೈವ ಧರ್ಮಕ್ಕೆ ಸಲ್ಲನು. ತನ್ನ ಸತೀಸುತರೇ ಸರ್ವಸ್ವವೆಂದು ತಿಳಿಯುವವನು ಲಿಂಗ ಜಂಗಮದ ಭಕ್ತಿಯನೆಂತು ಬಲ್ಲನು ?

ಕಡವರವನು ಒರೆದು ಪುಟವಿಡಲು, ಇಕ್ಷುದಂಡವಮಂ ದಂಡಿಸಿ ಗಾಣ ದೊಳಗೆ ಅರೆಯಲು, ಚಂದನವ ಇಕ್ಕಿ ಬಿಡದೆ ಕಲ್ಲೊಳಗೆ ತೇಯಲು ಅವು ನೋವಿಲ್ಲದೆ ಅತಿ ಸುಗುಣವೀವ ತೆರನಂತೆ ಗುರು ಜಂಗವರು ತನ್ನನ್ನು ಭಂಗಿಸಿ ನುಡಿದರೂ ಅವರಿಗೆ ಮಾರುತ್ತರವ ಕೊಡದಿರುವವನು ಸದ್ಭಕ್ತನು. ಮಾಡುವವನು ನಾನು ಎಂಬ ಅಹಂಕಾರವನು ತೊರೆದು ಮಾಡಿಸಿಕೊಳ್ಳು ವವನು ಶಿವನೆಂದು ಅರಿದು. ತನಗೆ ದೊರೆತಿರುವ ಸಮಸ್ತ ಐಶ್ವರ್ಯವು ಶಿವಾನುಗ್ರಹದಿಂದ ಬಂದುದೆಂದು ಭಾವಿಸಿ ಸಮರಸಭಕ್ತಿಯಿಂದ ಸೇವೆ ಯನ್ನು ಮಾಡುವುದೇ ಭಕ್ತನ ಲಕ್ಷಣವು.

ಇನ್ನು ವೀರಮಾಹೇಶ್ವರನ ಲಕ್ಷಣವನ್ನು ಕೇಳು. ಲೌಕಿಕ ಮಾರ್ಗ ದೊಳು ನಡೆಯದೆ, ಅತಿ ನಿಷ್ಠೆಯಿಂದೆ ತನ್ನಯ ಸದ್ವ್ರತಾಚಾರವಂ ಪದುಳದಿಂ ದೇಹಾವಸಾನ ಪರ್ಯಂತಮುಂ ಚದುರತನದಿಂದೆ ನಡೆಸುತ್ತ, ಲಿಂಗದೆ ಮನವ ಹುದುಗಿ ಬಾಹ್ಯ ಪ್ರಪಂಚವನು ಅರಿಯದಿರ್ಪೊಡೆ ಆತನೇ ವೀರಮಾಹೇಶ್ವರನು. ಸಮುದ್ರಗಳು ಮೇರೆದಪ್ಪಿದರೂ ಕುಲಗಿರಿಗಳು ಓಡಾಡಿದರೂ ಭೂಮಿ ರಸಾತಲಕೆ ಇಳಿದರೂ ಸೂರ್ಯಚಂದ್ರರು ಮುರಿದು ಇಳೆಗೆ ಬಿದ್ದರೂ ವೀರಮಾಹೇಶ್ವರನು ತಾನು ಹಿಡಿದ ಶಿವವ್ರತವನು ಎಂದಿಗೂ ಬಿಡನು. ಪರಮ ಮಾಹೇಶ್ವರನು ತೀರ್ಥ ಕ್ಷೇತ್ರಗಳ ಪ್ರವಾಸವನ್ನೂ ವ್ರತ ನಿಯಮಗಳ ಉಪವಾಸವನ್ನೂ ಎಂದೂ ಬಯಸನು. ತಿಥಿ ಸೋಮವಾರ ಸಂಕ್ರಾಂತಿ ಶಿವರಾತ್ರಿ ಮೊದಲಾದುವನ್ನು ಆಚರಿಸುವುದು ಶೈವ ಲಕ್ಷಣವೇ ಹೊರತು ವೀರಶೈವ ಲಕ್ಷಣವಲ್ಲ. ಮಾಯೆಯನ್ನು ಜರಿದು ಲಿಂಗದಲ್ಲಿ ನೆಟ್ಟ ದೃಷ್ಟಿಯುಳ್ಳವನಾಗಿ, ಅನ್ಯ ಸತಿ, ಅನ್ಯ ಧನ, ಅನ್ಯ ಮತ, ಅನ್ಯ ದೈವಗಳನು ಭಜಿಸದೆ ಇರುವವನೇ ನಿಜವಾದ ಮಾಹೇಶ್ವರನು. ಏಕಪತ್ನೀ ವ್ರತಸ್ಥನಲ್ಲ ದವನಿಗೆ ಮಾಹೇಶ್ವರ ವ್ರತವು ಖಂಡಿತವಾಗಿಯೂ ಅಳವಡದು.

ಶರಣರೇ ತನಗೆ ತಂದೆತಾಯಿಗಳು, ಶರಣರೇ ತನ್ನ ಬಂಧು ಬಾಂಧವರು, ಶರಣರೇ ತನ್ನ ಕುಲಗೋತ್ರ ಎಂದು ಭಾವಿಸಿ ಅವರ ಶೇಷ ಪ್ರಸಾದವನು ಸ್ವೀಕರಿಸುವವನೇ ನಿಜವಾದ ಲಿಂಗನಿಷ್ಠನು. ಲಿಂಗವಂತ ಧರ್ಮವನು ಅರಿದು ಆಚರಿಸುವವನು ಶಿವನ ಅನುಭಾವಿಯು.

ಭೂಮಿ, ನೀರು, ಬೆಂಕಿ, ಗಾಳಿ, ಆಗಸ, ಸೋಮ, ಸೂರ್ಯ, ಆತ್ಮ ಎಂಬ ಅಷ್ಟಮೂರ್ತಿಗಳನ್ನು ಪರಶಿವನೇ ನಿರ್ಮಿಸಿದನು. ಭಾಂಡಗಳನ್ನು ಮಾಡುವ ಕುಂಬಾರನು ಅವಕ್ಕೆ ಭಿನ್ನನಾಗಿರುವಂತೆ ಪರಮೇಶ್ವರನು ಈ ಅಷ್ಟಾಂಗಗಳಿಗೆ ಹೊರಗಿರುವನು. ಆದರೂ ಶಿವನು ಸರ್ವಗತನಾಗಿರುವನು. ತನ್ನ ಲೀಲಾಮಾತ್ರದಿಂದ ಈ ಲೋಕವನ್ನು ಸೃಷ್ಟಿಸುವನು, ರಕ್ಷಿಸುವನು, ಲಯ ಮಾಡುವನು. ಶಿವನು ನಿಜವಾದ ಭಕ್ತರ ಹೃದಯದಲ್ಲಿ ವಾಸವಾಗಿರುವನು. ಸೂರ್ಯನು ಜಗತ್ತಿನ ಎಲ್ಲ ಜಲಾಶಯಗಳಲ್ಲಿ ಬಿಂಬಿಸಿದರೂ ಆ ಬಿಂಬಾದಿಗಳಿಗೆ ಉಂಟಾಗುವ ಚಾಂಚಲ್ಯಕ್ಕೆ ಅವನು ಕಾರಣನೆನಿಸುವುದಿಲ್ಲ. ಲೋಕದ ಜನರ ಕಣ್ಣುಗಳ ಬೆಳಕಿಗೆ ರವಿಯೇ ಕಾರಣನಾದರೂ ಜನರ ಕಣ್ಣಿನ ಬಾಧೆಗೆ ಅವನು ಒಳಗಾಗುವುದಿಲ್ಲ. ಅಂತೆಯೇ ಶಿವನು ಎಲ್ಲರ ಹೃದಯದಲ್ಲಿದ್ದರೂ ಅವರ ಸುಖ ದುಃಖಗಳಿಗೆ ಅತೀತನಾಗಿರುವನು ಎಂದು ತಿಳಿಯುವವನೇ ನಿಜವಾದ ಮಾಹೇಶ್ವರನು.

ಬಾಹ್ಯ ಪ್ರಪಂಚದ ಆಸೆಯನು ತೊರೆದು, ಸನ್ಮಾರ್ಗದಿಂದ ಆಚರಿಸಿ, ಗುರುಲಿಂಗ ಜಂಗಮದ ಪ್ರಸಾದವನು ಭುಂಜಿಸುವವನೇ ನಿಜವಾದ ಪ್ರಸಾದಿಯು. ಇವನು ಗುರು ಲಿಂಗ ಜಂಗಮಗಳನ್ನು ಸಮಾನವಾಗಿ ತಿಳಿಯುವನು. ಗುರುವಿನ ಶುದ್ಧ ಪ್ರಸಾದ, ಲಿಂಗದ ಸಿದ್ಧ ಪ್ರಸಾದ, ಜಂಗಮದ ಪ್ರಸಿದ್ಧ ಪ್ರಸಾದಗಳನ್ನು ಶ್ರದ್ಧೆಯಿಂದ ಭುಂಜಿಸುವಾತನೇ ನಿಜವಾದ ಪ್ರಸಾದಿಯು. ಲಿಂಗಾರ್ಚನೆಯನ್ನು ಮಾಡದೆ ಉಂಬುವುದು ಸಲ್ಲದು ಎಂದು ಪ್ರಸಾದಿಯು ತಿಳಿದಿರುವನು. ಗುರುವಿನ ಅಂಗುಷ್ಠದಲ್ಲಿ ಅಷ್ಟಾಷಷ್ಟಿತೀರ್ಥಗಳಿರುವವು. ಜಂಗಮದ ಪಾದದಲ್ಲಿ ಏಳು ಶರಧಿಗಳು ಇರುವವು ಎಂದು ತಿಳಿಯುವುದು ಲಿಂಗವಂತರ ಲಕ್ಷಣ.

ಲಿಂಗದ ಸುಪ್ರಕಾಶದಲ್ಲಿ ಸಮಸ್ತ ಕುಲಗಿರಿಗಳೂ ಇವೆಯೆಂದು ತಿಳಿದವನು ಸುಪ್ರಸಾದಿಯು. ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳಿಗೆ ಲಿಂಗವು

 

ಮೂಲಕಾರಣವೆಂದು ತಿಳಿಯುವವನು ಘನಪ್ರಸಾದಿಯು. "ಗುರುವಿನಿಂದ ಲಿಂಗದಿಂದಂ ಜಂಗಮಂ ಉನ್ನತಮೆನಿಪ್ಪುದು" ಎಂದು ತಿಳಿಯುವವನೇ ಪ್ರಸಾದಿಯು. ಪರಮೇಶ್ವರನೇ ಲೋಕಾನುಗ್ರಹಾರ್ಥವಾಗಿ ಜಗಮರೂಪ ನಿಂದ ಬಂದಿರುವನೆಂದು ಶಿವಾಗಮವು ಹೇಳುವದು. ಮನವನ್ನು ಲಿಂಗಕ್ಕೂ, ಧನವನ್ನು ಜಂಗಮಕ್ಕೂ, ತನುವನ್ನು ದಾಸೋಹಕ್ಕೂ ಸಮರ್ಪಿಸುವಾತನೇ ನಿತ್ಯನಾದಭಕ್ತನು. 'ನಾನು ಅಂತಹ ಭಕ್ತನ ಹೃದಯದಲ್ಲಿ ಸದಾ ನೆಲಸಿರು ವೆನು'ಎಂದು ಪರಮೇಶ್ವರನು ಹೇಳಿರುವನು.'ಲಿಂಗಮುಖ ಜಂಗಮ'ವೆಂದು ಅರಿಯುವವನು ಪ್ರಸಾದಿಯು. ಶಿವನಿಗೆ ಭಕ್ತನೇ ಚೇತನ. ಭಕ್ತನಿಗೆ ಶಿವನೇ ಚೇತನ—ಎಂದು ತಿಳಿಯುವದು ವೀರಶೈವ ಮಾರ್ಗವು. ಕೆಲರು ಕರ್ಮ ವನ್ನು ಆಶ್ರಯಿಸಿರುವರು. ಕೆಲರು ಜ್ಞಾನವನ್ನು ಆಶ್ರಯಿಸಿರುವರು. ನಾನು ಭಕ್ತರನ್ನು ಆಶ್ರಯಿಸಿರುವೆನು" ಎಂದು ಶಿವನು ಆಗಮಗಳಲ್ಲಿ ಹೇಳಿರುವನು.

ಇಂದ್ರಿಯಂಗಳು, ಕರಣ ಸಂಕುಲ (ಬುದ್ಧಿ, ಚಿತ್ತ, ಅಹಂಕಾರ, ಮನಸ್ಸು) ಅರಿಷಡ್ವರ್ಗ (ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ) ಅಷ್ಟಮದಗಳು (ಅನ್ನಮದ, ಅರ್ಥಮದ, ಕುಲಮದ, ರೂಪ ಮದ, ಅಧಿಕಾರಮದ, ಯೌವನಮದ, ವಿದ್ಯಾಮದ, ತಪೋಮದ) ಇವು ಗಳನು ಅಳಿದು, ಸಂಸೃತಿಯನು ಒಡೆದು ಶಾಶ್ವತಾನಂದದಿಂದ ವಿರಾಜಿಸುತಿಪ್ಪ ವನೇ ಶರಣನು. ಶರಣಸಿರ್ಪ ಸ್ಥಳವೇ ಸುಕ್ಷೇತ್ರ. ಅವನ ನುಡಿಯೇ ಮಂತ್ರ ಅವನು ಮುಟ್ಟಿದ ನೀರೇ ತೀರ್ಥ ಎಂದು ಅನುಭವಿಗಳು ಹೇಳುವರು.

ಪ್ರಸಾದ ಸೇವನೆಯಿಂದ ಸಕಲ ಪಾಪಗಳೂ ಪರಿಹಾರವಾಗುವುವು ಅಗಸ್ತ್ಯ, ದೂರ್ವಾಸ, ನಂದಿಕೇಶ್ವರ, ಕಣಾದ, ಮಹಾಕಾಳ, ಸ್ಕಂದ ವೀರಭದ್ರ, ಬಾಣ, ರಾವಣ, ವಾಲ್ಮೀಕಿ, ಕಣ್ವ, ಭೃಗು, ಭರದ್ವಾಜ, ಅತ್ರಿ ಗೌತಮ ಮೊದಲಾದ ಪ್ರಾಚೀನ ಪ್ರಮಥರೂ, ಶಿವಭಕ್ತರೂ ಪ್ರಸಾದ ಸೇವನೆಯಿಂದಲೇ ಕೃತಾರ್ಥರೆನಿಸಿರುವರು.

ಲಿಂಗ ಮತ್ತು ಪ್ರಾಣಗಳಲ್ಲಿ ಸಮರಸವನ್ನು ಹೊಂದಿ ಬಾಹ್ಯ ವಿಷಯಂಗಳಡಗಿ, ನಿರ್ಮಾಯತ್ವವಳವಟ್ಟು, ಸಂಕಲ್ಪರಹಿತನಾದರೆ ಅವನೇ

ಪ್ರಾಣಲಿಂಗಿಯು, ದೇಹಗುಣಗಳನ್ನು ಕೆಡಿಸಿ ಕರಣಗಳ ಹಾವಳಿಯನ್ನು ಅಡಗಿಸಿ ದಶವಾಯುಗುಣಗಳಂ ತಡೆದು ದೃಢಚಿತ್ತನಾಗಿರುವವನೇ ಪ್ರಾಣಲಿಂಗಿಯೆನಿಸುವನು. ಇಷ್ಟಲಿಂಗ, ಪ್ರಾಣಲಿಂಗಗಳ ಸಮನ್ವಯ ಯೋಗವು ಇವನ ಮುಖ್ಯಗುರಿ. ಸಂಕಲ್ಪ ವಿಕಲ್ಪಗಳು ಈತನಿಗೆ ದೂರವು. ಜನನ ಮರಣಗಳು, ಹಸಿವು ತೃಷೆಗಳು ಈತನನ್ನು ಬಾಧಿಸಲಾರವು. ತನು ಗುಣಗಳನು ಕಳೆದು, ಪ್ರಾಣಗುಣಂಗಳಂ ಕೆಡಿಸಿ, ಷಟ್ಚಕ್ರಗಳ ನೆಲೆಯನ್ನು ಮೆಟ್ಟಿ, ಉನ್ಮನಿಯ ಸದ್ಬ್ರಹ್ಮರಂಧ್ರದ ಸಾಸಿರ ದಳದ ಮಧ್ಯದಲಿ ಗುರಿ ಇಟ್ಟವನು ಪ್ರಾಣಲಿಂಗಿಯು. ಪ್ರಾಣಲಿಂಗಿಯ ಪಂಚೇಂದ್ರಿಯಗಳು ಒಳ ಮುಖವಾಗಿ ಅವುಗಳ ಯಜಮಾನನಾದ ಮನವು ಹೃದಯ ಸರಸಿಜದೊಳಿರ್ಪ ಚಿದ್ಘನಲಿಂಗದಲಿ ಸರೆಪೆರೆದು ವಾಯುಗಳ ಗುಣಗಳನು ಅಳಿದಿರಲು ಅಂತಹ ಪ್ರಾಣಲಿಂಗಿಯು ಬಾಹ್ಯದ ಸಂಗವನು ಬಯಸದೆ ಇರುವನು. ಹಲವು ಜಲದ ಕುಂಭಂಗಳಲಿ ಸೂರ್ಯನೊಬ್ಬನೇ ಪ್ರತಿಬಿಂಬಿಸುವಂತೆ, ಶರಣನ ಸಕಲ ಇಂದ್ರಿಯಗಳಲ್ಲಿಯೂ ಆಚಾರ, ಗುರು, ಚರ, ಪ್ರಸಾದ, ಘನ, ಮಹಾ ಎಂಬ ಆರು ಲಿಂಗಗಳು ಬೇರೆಬೇರೆ ರೂಪಿಂದ ಕಂಗೊಳಿಸುವವು.

ಕೈಯಲ್ಲಿ ಇಷ್ಟಲಿಂಗವು ಇರದಿದ್ದರೆ ಆ ಪ್ರಾಣಲಿಂಗವು ಕಾಣಿಸುವುದಿಲ್ಲ. ಭಾವಲಿಂಗವು ಗೋಚರವಾಗುವುದಿಲ್ಲ. ಏಕೆಂದರೆ, ತನ್ನ ಕೈಯಲ್ಲಿ ಕನ್ನಡಿಯನ್ನು ಹಿಡಿಯದವನಿಗೆ ಅವನ ರೂಪು ಕಾಣಿಸಲಾರದು. ಅಂತೆಯೇ ಇಷ್ಟ ಲಿಂಗ ನಿಷ್ಠೆಯಿಲ್ಲದವನಿಗೆ ಪ್ರಾಣಲಿಂಗವು ಅಳವಡದು. ಭಾಂಡದಲ್ಲಿ ಇರುವ ನೀರು ಬೆಂಕಿಯ ಸಂಸರ್ಗದಿಂದ ಬಿಸಿಯಾಗುವ ಹಾಗೆ ಬಾಹ್ಯ ಲಿಂಗದ ಕಳೆಯು ಅಂತರಂಗಕ್ಕೆ ವೇದಿಸಿ ಪ್ರಾಣಲಿಂಗವೆನಿಸಿ ಪ್ರಕಾಶಿಸುವುದು. ಅರಮನೆಯನು ಕಂಡವನಿಗೆ ಅಂತಃಪುರದ ಸುಖದ ಇರವು ತಿಳಿಯದಿರುವಂತೆ, ಕೇವಲ ಇಷ್ಟಲಿಂಗ ಪೂಜೆಯಲಿ ನಿರತನಾದವನಿಗೆ ಪ್ರಾಣಲಿಂಗದ ಅರಿವು ಅನುಸಂಧಾನ ಹೇಗೆತಾನೇ ಸಾಧ್ಯವಾದೀತು? ಗುರುಮುಖದಿಂದ ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗಗಳ ಪೂಜಾವಿಧಾನವನು ತಿಳಿಯುವವನೇ ಧನ್ಯನು. ದೇಹವೆಂಬ ದೇವಾಲಯದೊಳಗೆ ಉನ್ಮನಿಯ ತಾಣದಲ್ಲಿ ಇರುವ ಸುಪ್ರಕಾಶದಿಂದ ಶೋಭಿಸುವ ಆನಂದರೂಪವೆನಿಸುವ ನಿರ್ಮಲ

ಲಿಂಗವೇ ಪ್ರಾಣಲಿಂಗವು. ಯೋಗಮಾರ್ಗದಿಂದ ಇದನು ಅರಿದು ಅರ್ಚಿಸು ವವನು ಪ್ರಾಣಲಿಂಗಿಯು. ಈ ಪ್ರಾಣಲಿಂಗವು ಬ್ರಹ್ಮರಂಧ್ರ, ಭ್ರೂಮಧ್ಯ ಹೃತ್ಕಮಲ ಎಂಬ ಮೂರು ಸ್ಥಳಗಳಲ್ಲಿ ಮೂರು ತೆರನಾಗಿ ಪ್ರಕಾಶಿಸುವುದು. ಇದನು ಬಲ್ಲಾತನೇ ಪ್ರಾಣಲಿಂಗಿಯು. ಈ ಪ್ರಾಣಲಿಂಗವು ಶಿರದಲ್ಲಿ ನಿಷ್ಕ ಗುರುಸ್ವರೂಪದೊಳು ಇಹುದು. ಭ್ರೂಮಧ್ಯದೊಳು ಲಿಂಗರೂಪಿನೊಳಿಹುದು ಹೃತ್ಕಮಲಕರ್ಣಿಕಾ ಕುಹರದೊಳು ಚರಲಿಂಗರೂಪಿನೊಳು (ಜಂಗಮ) ಒಪ್ಪಿರ್ಪುದು. ಈ ಪರಿಯೊಳು ಅವರ ರೂಪಂ ತನ್ನ ಭಾವದೊಳು ಪರಮ ಸಂತೋಷದಿಂ ಭಾವಿಸಿ ಯಜಿಸಲು ಅವಂ ಪ್ರಾಣಲಿಂಗಿಯೆನಿಸುವನು. ಈ ಪ್ರಾಣಲಿಂಗದ ಪೂಜೆಗೆ ಶಾಂತಿಯೇ ಮಜ್ಜನದ ಜಲ, ದಯೆಯೇ ಗಂಧ, ದಾಂತಿಯೇ ಅಕ್ಷತೆ, ವಾಸನಾಕ್ಷಯವೇ ಧೂಪ, ಸುಜ್ಞಾನವೇ ದೀಪ, ಹೃದಯ ಕಮಲವೇ ಪುಷ್ಪ, ಸಂತಸವೇ ತ್ರಿಪುಟ, ರಹಿತತ್ವವೇ ತಾಂಬೂಲ, ವೈರಾ ಗ್ಯವೇ ದರ್ಪಣ, ಪ್ರಣವವೇ ಘಂಟಾಧ್ವನಿ, ಹೀಗಾಗುವುದೇ ಪ್ರಾಣಲಿಂ ಪೂಜಾಕ್ರಮವು. ಅಲ್ಲದೆ ನಡೆಯೇ ಪ್ರದಕ್ಷಿಣ. ಶಯನವೇ ನಮಸ್ಕಾ ನುಡಿಯೆಂಬುದೇ ನುತಿಯು, ವಿಷಯಭೋಗವೇ ಮೃಡಪೂಜೆ. ಸಕಲ ಕರಣಂಗಳು ಎಲ್ಲಂ ವಿನಿಯೋಗದ ಅನುಚರರು ಎನಿಸಿ ಲಿಂಗದೊಡನೆ ಸಮರಸ ಸುಖವ ಪಡೆದು ನಿಜಸುಖಿಯಾಗಿ ಒಡಲ ಗುಣರಹಿತನು ಎಂದೆನಿಸಿ ಚರಿಸುತ್ತಿರ್ಪನೇ ಪ್ರಾಣಲಿಂಗಿಯೆನಿಸಿಕೊಳ್ಳುವನು. ಹಲವು ಜನ ಯೋಗಾ ಭ್ಯಾಸಿಗಳು ಉಸಿರನ್ನು ಮೇಲಕ್ಕೆಳೆದು ಪ್ರಾಣಲಿಂಗದ ನಿಜವನರಿಯದೆ ಭವಪಾಶದೊಳು ಬಿಗಿದು ಸಾಯುತಿಹರು. ಪ್ರಾಣಲಿಂಗಿಯು ಶಿವಯೋಗ ಮಾರ್ಗದಿಂದ ಅನುಸಂಧಾನ ಮಾಡಿ ಪರಿಪೂರ್ಣನಾಗಿ ಶಬ್ದಬ್ರಹ್ಮನೆನಿಸುವನು. ಈ ಶಿವಯೋಗಾನುಸಂಧಾನವು ಎಲ್ಲರಿಗೂ ಸಾಧ್ಯವಾದುದಲ್ಲ. ಮನವು ಚಂಚಲಿಸಲು ತನುವು ಅಳ್ಳಾಡುವುದು. "ಮನಯೇವ ಮನುಷ್ಯಾಣಾಂ ಕಾರಣಂ ಬಂಧ ಮೋಕ್ಷಯೋಃ" ಎಂದು ಉಪನಿಷತ್ತು ಹೇಳುವದು. ಕಾರಣ ಮನೋನಿಗ್ರಹವು ಇಷ್ಟ ಪ್ರಾಣ ಭಾವಲಿಂಗಗಳ ಪೂಜೆಗೆ ಅತಿ ಅಗತ್ಯವಾದುದು. ಈ ಪ್ರಾಣಲಿಂಗ ಪೂಜೆಗೆ ಷಟ್ಚಕ್ರಗಳ A. ಅರಿವು ಅಗತ್ಯ

A. ಮೂಲಾಧಾರ, ಸ್ವಾಧಿಷ್ಠಾನ, ಮಣಿಪೂರ, ಅನಾಹತ, ವಿಶುದ್ಧ, ಸಹಸ್ರಾರ

ಷಟ್ಚಕ್ರಗಳಿಗೂ, ಷಡ್‌ಲಿಂಗಗಳಿಗೂ ವೀರಶೈವದಲ್ಲಿ ಬಾಂಧವ್ಯವಿದೆ. 'ಆರು ನೆಲೆಗಳನು ತಿಳಿದು ಮಿಗೆ ಬೆಳಗಿನಿಂ ತೋರುತಿರ್ಪ ಉನುಮನಿಯ ಮಂಟಪದೊಳು ರಂಜಿಸುವ ಸಾಸಿರದಳದ ಕಮಲದೊಳಗಿರ್ಪ ಅಮೃತ ಬಿಂದುವಿನೊಳು ಆರೂಢವಾಗಿರ್ಪ ಚಿತ್ಪ್ರಣವ ಲಿಂಗದೊಳು ಬೇರಾಗದೆ ಕೂಡಿ ಎರವಿಲ್ಲದೆ ಇರಬಲ್ಲವಂ ಧೀರಂ' ಅವನೇ ಪ್ರಾಣಲಿಂಗ ಸಂಬಂಧಿ ಎಂದು ತತ್ವವಿದರು ಹೇಳುತ್ತಾರೆ.

ಲಿಂಗವು ಪರಶಕ್ತಿಯುತವಾದ ಶಿವನ ಮೂರ್ತಿಯು. ಲಿಂಗವು ಆ ಪರಶಿವನ ತೇಜವು. ಆ ಲಿಂಗವು ಶಿವನನ್ನು ಪಿಂಗದ ನಿರತಿಶಯವಾದ ಆನಂದ ಸಮೂಹವು ಅಲ್ಲದೆ ಆ ಲಿಂಗವೇ ಪರಶಿವನ ಜ್ಞಾನಸ್ವರೂಪವು ಎಂದು ತಿಳಿದವನು ಪ್ರಾಣಲಿಂಗಿಯು. ಕೀಟವು ಭೃಂಗದ ಸಂಗದಿಂದ ಭೃಂಗವೇ ಆಗುವಂತೆ (ಕೀಟ ಭೃಂಗ ನ್ಯಾಯ) ಅಂಗವು ಲಿಂಗದ ಸೋಂಕಿನಿಂದ ಲಿಂಗಸ್ವರೂಪವೇ ಆಗುತ್ತದೆ. ಈ ಲಿಂಗಾಂಗಗಳ ಸಾಮರಸ್ಯ ಸುಖವು ಸರ್ವಾಂಗ ಲಿಂಗಿಗಳಿಗೆ ಮಾತ್ರ ತಿಳಿಯತಕ್ಕುದು. ಪ್ರಾಣಲಿಂಗಿಯು ಲಿಂಗ–ಅಂಗಗಳ ಸಾಮರಸ್ಯವನ್ನು ಹೊಂದಿ ಮಾಯಾಗುಣವನ್ನು ಅಳಿದು ಮೋಕ್ಷಾಕಾರನಾಗಿ ಪರಿಶೋಭಿಸುವನು. 'ಶರಣಸತಿ ಲಿಂಗಪತಿ' ನ್ಯಾಯದಿಂದ ಅನುಭವ ಭಕ್ತಿಯೇ ಆನಂದಭಕ್ತಿ ಯೆನಿಸಿದವನು ಶರಣನೆನಿಸುವನು. ಅಣಿಮಾದಿ ಸಿದ್ಧಿಗಳನ್ನೂ, ಇಂದ್ರಾದಿ ಪದವಿಗಳನ್ನೂ, ಮೂರುಲೋಕಗಳ ಸುಖವನ್ನೂ ತೃಣೀಕರಿಸಿ ಘನಲಿಂಗದಲ್ಲಿ ತಾನೇ ತಾನಾಗಿ ಬೆರೆತವನೇ ಶರಣನೆನಿಸುವನು. ಸಂಸಾರವೆಂಬ ವೃಕ್ಷಕ್ಕೆ ಪಂಚ ಕ್ಲೇಶಗಳೇ ಶಾಖೆ, ಕರ್ಮವೇ ಅದರ ಬೇರು, ವಿಷಯ ರಾಜಿಗಳೇ ಅದರ ಫಲಗಳು, ಈ ಸಂಸಾರ ವೃಕ್ಷವನ್ನು ಶಿವಜ್ಞಾನವೆಂಬ ಕೊಡಲಿಯಿಂದ ಕಡಿಯುವವನೇ ಶರಣನು. ಸಂಸಾರಕ್ಕೆ ಸಮನಾದ ಶತ್ರುವಿಲ್ಲ. ಶಿವಜ್ಞಾನಕ್ಕೆ ಸಮನಾದ ಮಿತ್ರನಿಲ್ಲ. ಮೂಢನಂಬಿಕೆಗಳು ದುಃಖದ ಮೂಲ, ವೈರಾಗ್ಯವೇ ಪರಮ ಸುಖ ಎಂದು ಶರಣನು ತಿಳಿದಿರುವನು. ನೀರಿನಲ್ಲಿ ಇರುವ ತಾವರೆಯೆಲೆಯು ನೀರಿಗೆ ಅಂಟದಿರುವಂತೆ, ಲೋಕದಲ್ಲಿ ಸಂಚರಿಸುವ ಗಾಳಿಯು ಧೂಳಿಯಿಂದ ಕೆಡದಿರುವಂತೆ ನೇತ್ರಕ್ಕೆ ಹಚ್ಚಿದ ಅಂಜನವು ಕಣ್ಣಿಗೆ ಸಂಬಂಧ ಪಡದಂತೆ, ಸತ್, ಚಿತ್, ಆನಂದ

ಸ್ವರೂಪನಾದ ಆತ್ಮನು ಸಂಸಾರದಲ್ಲಿದ್ದರೂ ಅದರ ಸುಖದುಃಖಗಳಿಗೆ
ದಂತಿರುವನು.

ಮಾಯೆಯಿಂದ ಕೂಡಿದ ಸಂಸಾರವು ನಿಜವೆಂಬಂತೆ ಕಂಡುಬಂ
ಅದು ವಿಚಾರಿಸಿ ನೋಡಿದರೆ ಇಂದ್ರಧನುಸ್ಸಿನಂತೆ ಅಸ್ಥಿರ ವೆಂಬು
ಅರಿಯಬಹುದು. ಅಜ್ಞಾನಿಗಳಾದ ಸಂಸಾರಿಗಳನ್ನು ಬೋಧಿಸ ಹೋ
ವುದು ಬಂಜೆಯಾಕಳನ್ನು ಕರೆಯ ಹೋಗಿ ಕೈಮುರಿದುಕೊಂಡಂತೆ. ಗು
ನಲ್ಲಿ ಜ್ಞಾನವೂ ಶಿಷ್ಯನಲ್ಲಿ ಶ್ರದ್ಧೆಯೂ ಇದ್ದರೆ ಶಿವದೀಕ್ಷೆಯು ಸಾರ್ಥಕವ
ವುದು. ಅಜ್ಞಾನಿಯಾದ ಗುರುವನ್ನು ಆಶ್ರಯಿಸಿದರೆ 'ಹುಟ್ಟುಗುರು
ಕೆಟ್ಟಕಣ್ಣವನನ್ನು ಹಿಡಿದುಕೊಂಡು ಪಯಣ ಮಾಡಿದಂತೆ' ಎಂದು ತಿ
ಬೇಕು. ಸಂಸಾರದ ತಿರುಗಣಿಯಲ್ಲಿ ಸಿಕ್ಕಿದವರಿಗೆ ವೈರಾಗ್ಯವು ಬರಲಾ
ಕಣ್ಣಿನಲ್ಲಿ ಕಾಮ, ಮನದಲ್ಲಿ ಕೋಪ, ಜೀವನದಲ್ಲಿ ಆಶಾಪಾಶಗ
ಕೂಡಿದ ಜನ, ಹೆಣ್ಣು, ಮಣ್ಣು, ಹೊನ್ನೆಂಬ ಪಾಶದಲ್ಲಿ ಬಿದ್ದು ತೊ
ವರು. ಇವರು 'ಮನದ ಮುಂದಣ ಆಸೆಯೇ ಮಾಯೆ' ಎಂಬ ಗುಹೇಶ್ವ
ವಚನಾರ್ಥವನ್ನು ಅರಿಯರು. ಅಂಗ ಗುಣಗಳನ್ನು ತೊಲಗಿಸಿ, ಅಂ
ಆಚಾರವನ್ನು ನಿಲಿಸಿ, ಸಂಸಾರದ ಹಂಗು ದೊರೆದು ಮಹಾಜ್ಞಾನವನೇ
ವಿಸಿ ಉತ್ತುಂಗ ಪರಿಪೂರ್ಣ ಸದ್ಭಾವವು ಎಡೆಗೊಂಡು ಚಲಿಸುವಡೆ ಆ
ಜಂಗಮನು ಎನಿಸುವನು. ಸ್ತುತಿ ನಿಂದೆಗಳನ್ನು ಸಮಾನವಾಗಿ ಭಾ
ಇಂದ್ರಿಯ ಸುಖಗಳನ್ನು ತ್ಯಜಿಸಿ, ಸದಾ ಮುಕ್ತಿಯ ಚಿಂತೆಯಿಂದ
ಪರಮ ವಿರತಿಯಿಂದ ಕಂಗೊಳಿಸುವಾತನೇ ಶರಣನೆನಿಸುವನು. ದುಂಬಿ
ಹೂವುಗಳನ್ನು ಹಿಂಸಿಸದೆ ಅದರ ರಸಪಾನ ಮಾಡುವಂತೆ ಭಕ್ತ
ನೋಯಿಸದೆ ಅವರಿತ್ತ ಭಿಕ್ಷೆಯಲ್ಲಿಯೇ ತೃಪ್ತನಾಗಿ ಸದಾ ಲಿಂಗಪೂಜೆ
ನಿರತನಾಗಿರುವವನೇ ಶರಣನು. ಶಾಂತಿಯ ವೇಷವನ್ನು ಧರಿಸು
ಸುಲಭ; ಆದರೆ ಅಂತರಂಗದಲ್ಲಿ ಶಾಂತಿಯನ್ನು ನೆಲೆಗೊಳಿಸುವುದು
ಮಹಾಶಾಂತಿಯಿಂದ ಕೂಡಿರುವವನೇ ನಿಜವಾದ ಶರಣನು ಹಾಗೂ ಆ
ಶಿವಭಕ್ತನು.

ಯಾರನ್ನೂ ಬೇಡದೆ ತಾನಾಗಿ ಬಂದುದನ್ನು ಲಿಂಗಾರ್ಪಿತ ಮ
ಮೌನದಿಂದ ಲಿಂಗಾವಧಾನಿ ಎನಿಸಿ ಸುಜ್ಞಾನಿಗಳ ಸಂಗದಲ್ಲಿ ಸುಖದಿ

ವವನೇ ಶರಣನು. ಕೊಕ್ಕರೆಗಳ ಮಧ್ಯದಲ್ಲಿ ಹಂಸಪಕ್ಷಿ ಇರುವಂತೆ, ಕಾಗೆಗಳ ಗುಂಪಿನಲ್ಲಿ ಕೋಗಿಲೆ ಇರುವಂತೆ, ಕ್ರೂರಮೃಗಗಳ ಮಧ್ಯೆ ಕಾಮಧೇನು ಇರುವಂತೆ ಶರಣನು ಸಂಸಾರದಲ್ಲಿ ಇರುವನು. ಮರವೆ, ಮೌಢ್ಯ, ಆಸೆ, ಮುಳಿಸು ಇವೆಲ್ಲವೂ ಭವದಮಾರ್ಗವೆಂದು ತಿಳಿದು ಇವಕ್ಕೆ ಶರಣನು ದೂರ ವಾಗಿರುವನು. ನಿರ್ಜನ ಪ್ರದೇಶದಲ್ಲಿ ಪರಾಂಗನೆ ಮುಂದೆ ಬಂದು ನಿಂತರೆ, ಹೋಗುವ ದಾರಿಯಲ್ಲಿ ಕನಕವೃಷ್ಟಿ ಕರೆದರೆ, ಶತ್ರುಗಳು ಬಂದು ತನ್ನ ದೇಹ ವನ್ನು ಇರಿದರೆ ಧೃತಿಗೆಡದಿರುವವನೇ ನಿಜವಾದ ಶರಣನು. 'ಶಿವೋಹಂ' ಭಾವದಿಂದ ಕೂಡಿ ಸರ್ವವನ್ನೂ ಶಿವಾರ್ಪಣಮಾಡಿ ಅಹಂಕಾರ ಮಮಕಾರ ರಹಿತನಾಗಿರುವವನೇ ಶರಣನೆನಿಸುವನು. 'ಶರಣಸತಿ ಲಿಂಗಪತಿ' ನ್ಯಾಯ ದಿಂದ ಉಭಯ ಭಾವವೂ ಅಡಗಿ ಸಮರಸತೆಯಿಂದ ಒಂದಾದ ಸಹಜಾನಂದ ಸ್ವರೂಪನೇ ನಿಜವಾದ ಶಿವಶರಣನೆನಿಸುವನು.

ಆನಂದಭಕ್ತಿಯಿಂದ ಶರಣನು ನಡೆದರೆ ಸಮರಸಭಕ್ತಿಯಿಂದ ಲಿಂಗೈಕ್ಯನು ವಿರಾಜಿಸುವನು. ಐಕ್ಯನ ಜೀವನವು 'ಶಿಖಿಕರ್ಪೂರ ನ್ಯಾಯ' ದಂತೆ ಲಿಂಗಾಂಗಗಳ ಸಂಗದ ಏಕರೂಪದಿಂದ ವಿರಾಜಿಸುವುದು. ನೀರು ನೀರಿನಲ್ಲಿ, ಹಾಲು ಹಾಲಿನಲ್ಲಿ, ತುಪ್ಪವು ತುಪ್ಪದಲ್ಲಿ ಸಮರಸವಾದಂತೆ, ಲಿಂಗದಲ್ಲಿ ಅಂಗದ ಸಮರಸ ಹೊಂದಿ ದ್ವೈತಭಾವವನ್ನು ಕಳೆದು, ಶಿವಾ ದ್ವೈತದಲ್ಲಿ ಸಮರಸವಾದವನೇ ಲಿಂಗೈಕ್ಯನು. ತನ್ನನ್ನು ತಾನು ಅರಿತು ಅನುಭವದ ಹಾದಿಯಲ್ಲಿ ಅಘೋರಶಿವನಲ್ಲಿ ಐಕ್ಯವಾದವನೇ ನಿಜವಾದ ಲಿಂಗೈಕ್ಯನು. ಬೆಂಕಿ ಮತ್ತು ಕರ್ಪೂರಗಳು ಮೊದಲು ಎರಡಾಗಿ, ಆಮೇಲೆ ಒಂದಾಗಿ, ಅನಂತರ ನಿರಾಕಾರವಾಗಿ ಇಲ್ಲವಾಗುವಂತೆ ಲಿಂಗಾಂಗ ಸಾಮ ರಸ್ಯದ ಸಂಬಂಧವು ಎಂದು ತಿಳಿಯತಕ್ಕದು. ಲಿಂಗೈಕ್ಯನಾದ ಮಹಿಮನು ಗೃಹಾಕಾಶವು ಮಹಾಕಾಶದಲ್ಲಿ ಅಡಗಿದಂತೆ ತನ್ನ ಜೀವಿತವನ್ನು ಕಳೆದು ಕೊಂಡು ಅನುಪಮ ಷಟ್ಸ್ಥಲಮಾರ್ಗದಿಂದ ಪರಬ್ರಹ್ಮಸ್ವರೂಪನಾಗಿರು ವನು. ಹೀಗೆ ತನ್ನ ನಿಜವ ತಾನರಿದು ಪ್ರೌಢತೆಯನ್ನೈದಿ ಪರತತ್ವರೂಪಾಗಿ ನಿಂದಾತನೇ ಲಿಂಗೈಕ್ಯನು. ಈ ಲಿಂಗೈಕ್ಯನ ಇರವು ಸರ್ವಂಖಲ್ವಿದಂ ಬ್ರಹ್ಮ, ತತ್ವಮಸಿ ಮಹಾ ವಾಕ್ಯಗಳಿಗೂ ಅತೀತವಾದುದು. ನದಿಗಳು ಸಮುದ್ರದಲ್ಲಿ

ಕೂಡಿ ತಮ್ಮ ಮೊದಲಿನ ನಾಮರೂಪಗಳನ್ನು ಕಳೆದುಕೊಳ್ಳುವ ಹಾ
ಆಣವಾದಿ ಮಲಬದ್ಧ ರೂಪರಾದ ಅಂಗಗಳು (ಜೀವಿಗಳು) ಶಿವಾನುಭ
ಮಾರ್ಗದಿಂದ ಲಿಂಗೈಕ್ಯರೆನಿಸಿ ಪರಿಪೂರ್ಣರೆನಿಸುವರು. ಲಿಂಗೈಕ್ಯ
"ಏಕಮೇವಾದ್ವಿತೀಯಂ" "ಲಿಂಗೇನ ಸಹವರ್ತತೇ" ಎಂಬ ಶ್ರುತಿವಾ
ಗಳನ್ನು ತನ್ನ ನಿಜಕೃತಿಯಿಂದ ತನ್ನಲ್ಲಿ ಅಳವಡಿಸಿಕೊಳ್ಳುವನು ಎಂ
ಭಗವಾನ್ ಸಿದ್ಧಲಿಂಗೇಶ್ವರನು ಬೋಳಬಸವೇಶ್ವರನಿಗೆ ನಿರೂಪಿಸುವನು.

ಮಹಾಕವಿ ವಿರಕ್ತ ತೋಂಟದಾರ್ಯರಿಂದ ವಿರಚಿತವಾದ ಸಿದ್ಧೇಶ್ವ
ಪುರಾಣದ ೨೨ ನೇ ಸಂಧಿಯಲ್ಲಿ ಪರಮಗುರು ಸಿದ್ಧಲಿಂಗೇಶ್ವರನು ನಿರಕ್ಷ
ಬೋಳಬಸವೇಶ್ವರನಿಗೆ ಬೋಧಿಸಿದ ಷಟ್ಸ್ಥಲ ತತ್ವ ಅಥವಾ ವೀರಶೈ
ಧರ್ಮವನ್ನು ಈ ಲೇಖನದಲ್ಲಿ ಸಂಗ್ರಹಿಸಿಕೊಡಲಾಗಿದೆ. ಅದೇ ಪುರಾಣ
೨೩-೨೪ ನೇ ಸಂಧಿಗಳಲ್ಲಿ ಲಿಂಗಸ್ಥಲ ಮತ್ತು ಏಕೋತ್ತರ ಶತಸ್ಥಲಗಳನ್ನು
ಶ್ರೀ ಗುರು ತೋಂಟದಾರ್ಯನು ಉಪದೇಶಿಸಿರುವನು.

ವಿರಕ್ತ ತೋಂಟದಾರ್ಯನು ಕ್ರಿ. ಶ. ೧೫೬೦ ರಲ್ಲಿದ್ದಂತೆ ಕವಿಚರಿ
ಯಲ್ಲಿ ಹೇಳಿದೆ. ಈತನು ಸಿದ್ಧೇಶ್ವರ ಪುರಾಣ, ಪಾಲ್ಕುರಿಕೆ ಸೋಮೇಶ್ವ
ಪುರಾಣ, ಕರ್ಣಾಟಕ ಶಬ್ದಮಂಜರಿ, ಚಿದಾನಂದ ಸಿಂಧು, ನಿರಂಜನ ಶತ
ಮೊದಲಾದ ಗ್ರಂಥಗಳನ್ನು ಬರೆದಿದ್ದಾನೆ. ಅಲ್ಲದೆ ಗುರುಬಸವನ ಮನೋ
ವಿಜಯ ಮತ್ತು ಮಾಯಿದೇವನ ಶತಕತ್ರಯಗಳಿಗೆ ವ್ಯಾಖ್ಯಾನಬರೆದಿದ್ದಾನೆ
ಇಷ್ಟೇ ಅಲ್ಲದೆ ಸಿದ್ಧಲಿಂಗೇಶ್ವರ ಶತಕ, ಪಾಲ್ಕುರಿಕೆ ಸೋಮನಾಥನ ಪಂ
ಗದ್ಯಗಳ ಟೀಕೆ (ಬಸವೋದಾಹರಣ ಇತ್ಯಾದಿ) ಇವುಗಳನ್ನು ಬರೆದಂ
ಐತಿಹ್ಯವಿದೆ.

ಈತನು ತುಮಕೂರು ಪಕ್ಕದಲ್ಲಿರುವ ಗೂಳೂರು (ನಂದಿಪುರ) ಚೆನ್ನ
ನಂಜೇಶನಶಿಷ್ಯ ಪರ್ವತೇಂದ್ರನ ಕರಸಂಜಾತನು. ಗೂಳೂರು ಸಿದ್ಧವೀ
ಣ್ಣೊಡೆಯರ ಕೃಪಾಪಾತ್ರನು. ತುಮಕೂರು ಜಿಲ್ಲಾ ಬಿಜ್ಜಾವರದಲ್ಲಿ ಆಳು
ತ್ತಿದ್ದ ತೋಂಟದ ಸಿದ್ಧಲಿಂಗ ಭೂಪಾಲಕನಿಗೆ ಇವನು ಗುರುವಾಗಿದ್ದನು
ಎಂದು ತೋಂಟದ ರಾಯನ ಸಾಂಗತ್ಯದಲ್ಲಿ ಹೇಳಿದೆ. ಈತನು ಗೂಳೂರು

ಸಿದ್ಧವೀರಣ್ಣನವರ ಅಪ್ಪಣೆಯಂತೆ ಪಾಲ್ಕುರಿಕೆ ಸೋಮೇಶ್ವರ ಪುರಾಣವನ್ನು ಬರೆದಂತೆ ತಿಳಿದು ಬರುತ್ತದೆ.

ವೀರಶೈವ ಧರ್ಮವನ್ನು ನಿರೂಪಿಸಲು ಸಿದ್ಧಾಂತ ಶಿಖಾಮಣಿ, ಶಿವಯೋಗ ಪ್ರದೀಪಿಕೆ, ಶ್ರೀಕರಭಾಷ್ಯ, ಕ್ರಿಯಾಸಾರ, ಶಿವಾದ್ವೈತಮಂಜರಿ, ಧರ್ಮಶಿರೋಮಣಿ, ಅನುಭವ ಸೂತ್ರ, ಲಿಂಗಧಾರಣ ಚಂದ್ರಿಕೆ, ವೀರಶೈವ ಆನಂದ ಚಂದ್ರಿಕೆ ಮೊದಲಾದ ಗ್ರಂಥಗಳು ಸಂಸ್ಕೃತದಲ್ಲಿಯೂ, ಗಣ ಭಾಷ್ಯ ರತ್ನಮಾಲೆ, ಶೂನ್ಯ ಸಂಪಾದನೆ, ಲಿಂಗಲೀಲಾ ವಿಲಾಸ ಚಾರಿತ್ರ, ದೀಕ್ಷಾಬೋಧೆ, ಬಸವ ಪುರಾಣ, ಪ್ರಭುಲಿಂಗಲೀಲೆ, ಶಿವತತ್ವ ಚಿಂತಾ ಮಣಿ, ವೀರಶೈವ ಮಹಾಪುರಾಣ, ಪದ್ಮರಾಜ ಪುರಾಣ, ಶತಕತ್ರಯ, ವೃಷಭೇಂದ್ರ ವಿಜಯ, ಗುರುರಾಜ ಚರಿತೆ ಮೊದಲಾದ ಗ್ರಂಥಗಳು ಕನ್ನಡದಲ್ಲಿಯೂ, ಹಾಗೆಯೇ ಪಂಡಿತಾರಾಧ್ಯ ಮತ್ತು ಪಾಲ್ಕುರಿಕೆ ಸೋಮನಾಥರಿಂದ ತೆಲುಗು ಭಾಷೆಯಲ್ಲಿಯೂ, ಶಿವಪ್ರಕಾಶ, ಕರುಣಪ್ರಕಾಶ ಮೊದಲಾದ ಕವಿಗಳಿಂದ ತಮಿಳು ಭಾಷೆಯಲ್ಲಿಯೂ ಹಲವಾರು ವೀರಶೈವ ಧರ್ಮಗ್ರಂಥಗಳು ವಿರಚಿತವಾಗಿವೆ. ವೀರಶೈವಧರ್ಮ, ಮತ್ತು ಸಾಹಿತ್ಯವನ್ನು ಅರಿಯಬೇಕೆಂಬ ಜಿಜ್ಞಾಸುಗಳು ಈ ಗ್ರಂಥಗಳ ನ್ನೆಲ್ಲಾ ಓದುವುದು ಅಗತ್ಯ. ಇಂತಹ ಗ್ರಂಥಗಳಲ್ಲಿ ವಿರಕ್ತ ತೋಂಟದಾರ್ಯನ ಸಿದ್ಧೇಶ್ವರ ಪುರಾಣವು ರತ್ನಪ್ರಾಯವಾಗಿದೆ. ಶಿವಶರಣರ ಮಹಿಮೆಯನ್ನೂ, ವೀರಶೈವ ಧರ್ಮತತ್ವಗಳನ್ನೂ ತಿಳಿಯಲು ಈ ಗ್ರಂಥವು ಕೈಗನ್ನಡಿ ಯಂತಿದೆ. ಈ ಸಂಗ್ರಹವು ಆ ಗ್ರಂಥಸಮುದ್ರದಲ್ಲಿ ಒಂದು ಹನಿ ಮಾತ್ರ.

---

# ೨. ವಚನ ಸಾಹಿತ್ಯ

ಅದ್ಯರ ವಚನ ಪರುಷ ಕಂಡಯ್ಯ ! ಅದರಕ್ಕೆ ಕಹಿ, ಉದರಕ್ಕೆ ಸಿಹಿ,
ಕೂಡಲ ಸಂಗನ ಶರಣರ ವಚನ ಬೇವ ಸವಿದಂತೆ

—ಶ್ರೀ ಬಸವೇಶ್ವರ ದೇವ

ಕಂದ॥ ತಿಳಿಪಲ್ ಶಿವಜೀವೈಕ್ಯಮ ।
ನಿಳಿಪಲ್ ಭವಪಾಶ ಬಂಧಮಂ ಶಿವಪದಮಿ ॥
ತ್ತುಳಿಪಲ್ ನಿಜದೊಳ್ ಚಿತ್ಕ್ರಿಯೆ ।
ಯುಳಪಟ್ಟ ಪುರಾತನೋಕ್ತಿಯೊಂದೆ ಸಮರ್ಥಂ ॥

—ಶ್ರೀ ಕಂಬಾಳ ಶಾಂತಮಲ್ಲ

ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಚಂಪೂಕಾವ್ಯಗಳು, ಷಟ್ಪದಿಕಾವ್ಯಗಳು, ಹಾಡುಗಬ್ಬಗಳು, ಯಕ್ಷಗಾನ ಪ್ರಬಂಧಗಳು, ಗದ್ಯಕಾವ್ಯಗಳು, ಜಾನಪದ ಗೀತೆಗಳು ಮೊದಲಾದ ವಿವಿಧ ಶೈಲಿಯ ಸಾಹಿತ್ಯ ಭಾಗವನ್ನು ನಾವು ಓದಬಹುದು. ಇವುಗಳಲ್ಲಿ ವಚನ ಸಾಹಿತ್ಯ ಎಂಬ ಒಂದು ವಿಶಿಷ್ಟವಾದ ವಾಙ್ಮಯವನ್ನು ಮಾತ್ರ ನಾವು ಅತ್ಯಂತ ಆಸಕ್ತಿಯಿಂದ ಓದಬೇಕು. ಇದನ್ನು 'ವಚನ ಶಾಸ್ತ್ರ', 'ವಚನ ವಾಙ್ಮಯ' ಎಂದು ಮೊದಲಾಗಿ ಕರೆಯುತ್ತಾರೆ. ಕ್ರಿ. ಶ. ೧೧, ೧೨, ಮತ್ತು ೧೬ನೇ ಶತಮಾನಗಳಲ್ಲಿ ದೇವರ ದಾಸಿಮಯ್ಯ, ನಿಜಗುಣದೇವ, ಸಕಲೇಶ ಮಾದರಸ, ಬಸವೇಶ್ವರ, ಪ್ರಭುದೇವರು, ಅಕ್ಕಮಹಾದೇವಿ, ಸಿದ್ಧರಾಮೇಶ್ವರ, ಚೆನ್ನಬಸವಣ್ಣ, ತೋಂಟದ ಸಿದ್ಧಲಿಂಗ, ಘನಲಿಂಗಿದೇವ, ಸ್ವತಂತ್ರ ಸಿದ್ಧಲಿಂಗ ಮೊದಲಾದ ವಿಶಿಷ್ಟ ವಿಭೂತಿಗಳು ಬರೆದ ಸಾಹಿತ್ಯ ವಿಶೇಷವನ್ನು ವಿದ್ವಾಂಸರು, ವಚನ ಶಾಸ್ತ್ರ ಅಥವಾ ವಚನ ಸಾಹಿತ್ಯ ಎಂದು ಕರೆಯುತ್ತಾರೆ. ಕನ್ನಡದಲ್ಲಿ ಸುಮಾರು ೩೦೦ ಮಂದಿ (ಸ್ತ್ರೀ–ಪುರುಷರು ಕೂಡಿ) ವಚನಕಾರರು ಉಂಟೆಂದು ತಿಳಿದು ಬಂದಿದೆ. ಇದು ನಿಜಕ್ಕೂ ಶ್ಲಾಘ್ಯವಾದ ಸಂಗತಿಯಾಗಿದೆ.

ವೀರಶೈವ ಮತೋದ್ಧಾರಕರಾದ



ಭಕ್ತಿಭಂಡಾರಿ ಬಸವಣ್ಣನವರು
ಕಲ್ಯಾಣ ಪಟ್ಟಣ

೨೦ನೆಯ ಶತಮಾನದ ಈ ಸಂಶೋಧನೆ ಮತ್ತು ವಿಮರ್ಶೆಯ ಕಾಲದಲ್ಲಿ ಈ ವಚನ ಸಾಹಿತ್ಯಕ್ಕೆ ರಸಜ್ಞರಾದ ವಿದ್ವಾಂಸರಿಂದ ಹೆಚ್ಚಿನ ಮನ್ನಣೆ ಪ್ರಾಪ್ತವಾಗಿದೆ. ಕನ್ನಡ ಕವಿಚರಿತ್ರೆಕಾರರು ಈ ವಚನ ಸಾಹಿತ್ಯವನ್ನು ಕುರಿತು, "ಈ ವಚನಗಳು ಕನ್ನಡ ಸಾಹಿತ್ಯದಲ್ಲಿ ಪೂಜ್ಯಸ್ಥಾನ ಪಡೆಯಲು ಅರ್ಹವಾಗಿವೆ. ಇವು ಗೂಢವಾದ ವೇದಾಂತ ವಿಷಯಗಳನ್ನು ಸುಲಭವಾದ ಕನ್ನಡ ಮಾತುಗಳಿಂದ ಬಿಗಿಯಾದ ಶೈಲಿಯಲ್ಲಿ ಮನ ಮುಟ್ಟುವಂತೆ ಬೋಧಿಸುತ್ತವೆ. ಇವು ಕನ್ನಡ ಭಾಷೆಯ ಉಪನಿಷತ್ತುಗಳಂತಿವೆ" ಎಂದು ಹೇಳಿದ್ದಾರೆ. (ಕ. ಕ. ಚ. ಭಾಗ ೩. ಪುಟ ೨೮) ಮಾನ್ಯ ಡಾ|| ಆರ್. ಆರ್. ದಿವಾಕರ್‌ರವರು ಬರೆದಿರುವ "ವಚನಶಾಸ್ತ್ರ ರಹಸ್ಯ" ಎಂಬ ಗ್ರಂಥದಲ್ಲಿ "ಶುದ್ಧ ಕನ್ನಡದಲ್ಲಿರುವ ವಚನ ಶಾಸ್ತ್ರವೆಂಬ ಆಧ್ಯಾತ್ಮ ಎಲ್ಲಕ್ಕೂ ಶ್ರೇಷ್ಠವಾದ ಮಾನವ ಧ್ಯೇಯವನ್ನು, ತತ್ವ ಪ್ರಧಾನವಾದ ವಿಶಿಷ್ಟ ಉಪಾಸನಾ ಮಾರ್ಗವನ್ನು ಒಳಗೊಂಡಿರುವುದು. ಈ ಶಾಸ್ತ್ರಕ್ಕೆ ಶೈವಾಗಮಗಳು ಪ್ರತ್ಯಕ್ಷವಾಗಿಯೂ, ವೇದೋಪನಿಷತ್ತಗಳು ಅಪ್ರತ್ಯಕ್ಷವಾಗಿಯೂ ಮೂಲಾಧಾರಗಳಾಗಿರುವುವು" ಎಂದು ಹೇಳಿರುತ್ತಾರೆ. (ಭಾಗ ೨. ಪುಟ ೨೩) ಮೈಸೂರು ವಿಶ್ವವಿದ್ಯಾಲಯ ಪ್ರಕಟನೆಯಾದ ವಚನ ಧರ್ಮಸಾರ ಎಂಬ ಗ್ರಂಥದಲ್ಲಿ ಕೈ|| ಎಂ. ಆರ್. ಶ್ರೀನಿವಾಸಮೂರ್ತಿಗಳು "ವಚನಗಳಲ್ಲಿ, ರಸ, ಭಾವ ಅಲಂಕಾರಗಳೂ, ಉದಾತ್ತಧ್ಯೇಯವೂ ಇರುವುದರಿಂದ ಅವು ಉತ್ತಮ ಸಾಹಿತ್ಯವೆಂದು ಧಾರಾಳವಾಗಿ ಹೇಳಬಹುದು. ವಚನಗಳು ಕನ್ನಡ ಸಾಹಿತ್ಯದ ಉಪನಿಷತ್ತುಗಳು, ಆ ಕವಿಗಳನ್ನು ಕನ್ನಡನಾಡಿನ ರಸಋಷಿಗಳು" ಎಂದು ಹೇಳಿರುತ್ತಾರೆ. ಹೀಗೆ ವೀರಶೈವ ವಚನ ಸಾಹಿತ್ಯವು ಕರ್ನಾಟಕದ ವಿದ್ವಾಂಸರ ಮನ್ನಣೆಗೆ ಪಾತ್ರವಾಗಿ ತನ್ನ ಅಪೂರ್ವತೆ ಹಾಗೂ ವಿನೂತನತೆಗಳಿಂದ ಸಹೃದಯ ಸಾಹಿತಿಗಳ ಮನ್ನಣೆಗೆ ಪಾತ್ರವಾಗಿದೆ.

ವಚ್ ಎಂಬ ಸಂಸ್ಕೃತ ಧಾತುವಿನಿಂದ ವಚನ ಎಂಬ ಶಬ್ದ ಹುಟ್ಟಿದೆ. ನುಡಿ, ಮಾತು ಎಂದು ಅದರ ಅರ್ಥ. ಕಾವ್ಯಗಳಲ್ಲಿ ಛಂದಸ್ಸಿನ ನಿಯಮಕ್ಕೆ ಒಳಪಡದೆ ಬಿಡಿ ಬಿಡಿಯಾದ ಮಾತುಗಳಿಂದ ಬರೆದ ಸಾಹಿತ್ಯವನ್ನು ವಚನ, ಗದ್ಯ ಎಂದು ಹೇಳುತ್ತಾರೆ. ರನ್ನ ಪಂಪಾದಿ ಪ್ರಾಚೀನ ಕವಿಗಳ ಕಾವ್ಯಗಳ

ಲ್ಲಿಯೂ ಕೂಡ ನಾವು ವಚನಗಳನ್ನು ಓದುತ್ತೇವೆ. ಹರಿಹರನ ರಘಟಾ ಕಾವ್ಯದಲ್ಲಿ ಒಂದು ಅಧ್ಯಾಯ ಪದ್ಯದಲ್ಲಿಯೂ, ಇನ್ನೊಂದು ಅಧ್ಯಾಯ ಗದ್ಯ ದಲ್ಲಿಯೂ ಇರುವುದನ್ನು ನೋಡುತ್ತೇವೆ. ಕನ್ನಡದಲ್ಲಿ ವಡ್ಡಾರಾಧನೆ, ಚಾವುಂಡರಾಯ ಪುರಾಣ, ಚಿಕ್ಕದೇವರಾಜ ವಿಜಯ, ರಾಮಾಶ್ವಮೇಧ, ಮುದ್ರಾ ಮಂಜೂಷ ಮೊದಲಾದ ಕೆಲವು ಹಳೆಗನ್ನಡ ಗದ್ಯಕಾವ್ಯ ಗಳನ್ನೂ ಓದಿರುತ್ತೇವೆ. ಆದರೆ, ಶಿವಶರಣರ ವಚನಗಳು ಈ ಗದ್ಯ ಸಾಹಿತ್ಯಕ್ಕಿಂತ ಒಂದ ವಿಶಿಷ್ಟವಾದ ಹೆಚ್ಚಳವನ್ನು ಹೊಂದಿವೆ. ಶರಣರ ವಚನಗಳು ಶಾಸ್ತ್ರದಂತೆ ಜ್ಞಾನ ಬೋಧಕವಾಗಿಯೂ, ಸಾಹಿತ್ಯದಂತೆ ಆನಂದದಾಯಕವಾಗಿಯೂ ಇವೆ. ದೇಶದಲ್ಲಿ ಧರ್ಮ ಪ್ರಚಾರ, ಸಮಾಜದ ಸುಧಾರಣೆ, ಇವುಗಳನ್ನು ತಮ್ಮ ಹೆಗ್ಗುರಿಯನ್ನಾಗಿ ಇಟ್ಟುಕೊಂಡು ಶಿವ ಶರಣರು ವಿಶ್ವಧರ್ಮದ ಮಟ್ಟದಲ್ಲಿ ತಮ್ಮ ಈ ಉದ್ಗಾರಗಳನ್ನು ತೆಗೆದಿರು ತ್ತಾರೆ. ಆದ್ದರಿಂದ ಅವರ ವಚನಗಳು ಶಾಸ್ತ್ರದಂತೆ ಗಂಭೀರವಾಗಿಯೂ, ಸಾಹಿತ್ಯದಂತೆ ಮನೋಹರವಾಗಿಯೂ ಇರುತ್ತವೆ. ಸಂಸ್ಕೃತದ ಉಪನಿ ಷತ್ತುಗಳು, ತಮಿಳಿನ ತೇವಾರ ಮತ್ತು ತಿರುವಾಚಕಂ ಗ್ರಂಥಗಳನ್ನು ಬಿಟ್ಟರೆ ಶಿವಶರಣರ ವಚನಗಳಿಗೆ ಸಮವಾದ ವಾಙ್ಮಯವು ಭಾರತದ ಇತರ ಯಾವ ಭಾಷೆಗಳಲ್ಲಿಯೂ ಇಲ್ಲವೆಂದು ವಿದ್ವಾಂಸರು ಅಭಿಪ್ರಾಯಪಟ್ಟಿರು ತ್ತಾರೆ. ಆದುದರಿಂದಲೇ ಕನ್ನಡಿಗರಾಗಿ ಹುಟ್ಟಿದವರು ಒಮ್ಮೆಯಾದರೂ ಈ ವಚನ ಸಾಹಿತ್ಯದ ಸ್ವರೂಪವನ್ನು ಅರಿಯುವುದು, ಅದರ ಮಾಧುರ್ಯ ವನ್ನು ಸವಿಯುವುದು ಅತ್ಯಗತ್ಯವಾಗಿದೆ. ಮತ್ತು ಉತ್ತಮ ಫಲಪ್ರದವಾಗಿದೆ.

ವಚನಗಳು ಛಂದಸ್ಸಿನ ನಿಯಮಕ್ಕೆ ಒಳಪಟ್ಟಿಲ್ಲ. ಆದರೆ ಆ ಶೈಲಿ ಯಲ್ಲಿ ಗದ್ಯ ಪದ್ಯಗಳ ಸಮ್ಮಿಶ್ರಣ ರೂಪವಾದ ಒಂದು ಬಿಕ್ಕಟ್ಟಿದೆ. ಸುಪ್ರ ಸಿದ್ಧ ಸಾಹಿತಿಗಳಾದ 'ಕು. ವೆಂ. ಪು.' ಅವರು "ಈ ಗದ್ಯ ಕ್ಲಿಪ್ತಛಂದಸ್ಸನ್ನು ತೊರೆದಿದ್ದರೂ ಅದರ ವೈಕಟ್ಟು ಅಛಂದವಾದುದಲ್ಲ. ಅದು ಗದ್ಯರೂಪ ಧಾರಣ ಮಾಡಿದ್ದರೂ ಕಾವ್ಯತ್ವವನ್ನು ಬಿಟ್ಟಿಲ್ಲ. ಆ ಗದ್ಯದ ಪ್ರಕಾರಾಂತ ರವೇ ವಚನ ಸಾಹಿತ್ಯವಾಗಿ ಹೂ ಬಿಟ್ಟಿತು. ವಚನಗಳು ಆ ಗದ್ಯದಿಂದ ಹೊಮ್ಮಿದ ಬಿಡಿ ಬಿಡಿಯ ಕಿಡಿ ಹೂಗಳು" ಎಂದು ಹೇಳಿರುವುದು ಸಮಂಜಸ

ವಾಗಿದೆ. (ಪ್ರಬುದ್ಧ ಕರ್ಣಾಟಕ, ಸಂಪುಟ ೩೧. ಸಂಚಿಕೆ, ೧) ಶರಣರು ಒಂದೇ ಸ್ಥಳದಲ್ಲಿ ಒಂದೇ ಕಾಲದಲ್ಲಿ ವಚನಗಳನ್ನು ಹಾಡಿದಂತೆ ತೋರುವುದಿಲ್ಲ. ಅವರ ಜೀವನದಲ್ಲಿ ಅನೇಕ ಸುಖ ದುಃಖಗಳನ್ನು ಕಂಡು ಉಂಡಾಗ ಈ ವಚನಗಳು ಅವರ ಹೃದಯದಿಂದ ಸ್ಫೂರ್ತಿಗೊಂಡು ಹೊರಹೊಮ್ಮಿವೆ. ಅವನ್ನು ಸಮಕಾಲೀನ ವಿವೇಕಿಗಳು ಸಂಗ್ರಹಿಸಿಟ್ಟದ್ದಾರೆ. ಆದುದರಿಂದಲೇ ಇವು ಸ್ಫೂರ್ತಿದಾಯಕವಾಗಿವೆ. ಹಾಗೂ ಪ್ರಾಸಾದಿಕವಾಗಿವೆ.

ಸಿದ್ಧಾಂತಕಾರರು ಶಿರಃ ಪ್ರಧಾನರು, ವಚನಕಾರರು ಹೃದಯ ಪ್ರಧಾನರು. ಶಂಕರಾದಿ ಆಚಾರ್ಯರ ಭಾಷ್ಯಗಳು ಶಿರಃ ಪ್ರಧಾನರ ವೈದುಷ್ಯ ಪೂರ್ಣ ಸಾಹಸಕಾರ್ಯಗಳು. ಆದರೆ, ತಮಿಳಿನ ತೇವಾರಗಳು, ಕನ್ನಡ ಶರಣರ ವಚನಗಳು, ರಾಮಕೃಷ್ಣ–ರಮಣಮಹರ್ಷಿಗಳ ವಚನಾಮೃತಗಳು ಇತ್ಯಾದಿ ಅನುಭವ ಪ್ರಧಾನವಾದುವು. ಆದುದರಿಂದ ಇದನ್ನು ಅನುಭವ ಸಾಹಿತ್ಯ ಎಂದು ಕರೆದರೂ ತಪ್ಪಲ್ಲ. ಶಿರಸ್ಸಿನಲ್ಲಿ ಉಂಟಾಗುವ ವಿಚಾರಲ್ಲಿ ಬದಲಾವಣೆ ಕಂಡರೂ, ಮಾನವಜಾತಿಯ ಹೃದಯದ ಅನುಭವದಲ್ಲಿ ವ್ಯತ್ಯಾಸ ಕಂಡು ಬರುತ್ತಿಲ್ಲ ಎಂಬುದನ್ನು ಲೋಕದ ಅನುಭಾವಿಗಳ ಮಾತುಗಳನ್ನು ವಿಮರ್ಶಿಸುವುದರಿಂದ ನಾವುಗಳು ಮನಗಾಣಬಹುದು. 'ಅನುಭವಿಯ ವೇದವೇ ವೇದ' ಎಂದು ಹೇಳಿದ ಸರ್ವಜ್ಞಮೂರ್ತಿಯು ಶಿವಶರಣರ ಮನಸ್ಸಿನ ಈ ಉಜ್ವಲ ಭಾವನೆಗಳನ್ನು ಚೆನ್ನಾಗಿಯೇ ಚಿತ್ರಿಸಿರುತ್ತಾನೆ.

ವಚನ ಶಾಸ್ತ್ರದಲ್ಲಿ, ಶರಣರು, ವಿಶ್ವಪ್ರೇಮದಿಂದ ಉದಾತ್ತ ತತ್ವಗಳನ್ನು ಹೇಳಿರುತ್ತಾರೆ. "ದೇವನೊಬ್ಬ ನಾಮ ಹಲವು, ದಯೆಯೇ ಧರ್ಮದ ಮೂಲ, ಸತ್ಯವ ನುಡಿವುದೇ ದೇವಲೋಕ, ಮಿಥ್ಯೆಯ ನುಡಿವುದೇ ಮರ್ತ್ಯಲೋಕ, ಪುರುಷಂಗೆ ಸ್ತ್ರೀ ಮಾಯೆ, ಸ್ತ್ರೀಗೆ ಪುರುಷ ಮಾಯೆ, ತಾ ಭಕ್ತನಾದರೆ ಜಂಗಮದ ಗುಣವನು ಅರಸುವುದದೇಕೆ ? ಬೈದವರೆನ್ನ ಬಂಧುಗಳೆಂಬೆನು, ತಮಗೊಂದು ಬಟ್ಟೆ, ಶಾಸ್ತ್ರಕೊಂದು ಬಟ್ಟೆಯೇ ? ಭಾವವಿಲ್ಲದ ಭಕ್ತಿ ಉಂಟೆ ? ಅಯ್ಯಾ ಎಂದೊಡೆ ಸ್ವರ್ಗ, ಎಲ್ಲವೋ ಎಂದೊಡೆ ನರಕ, ಹುತ್ತವ ಬಡಿದೊಡೆ ಹಾವು ಸಾವುದೆ ? ನಂಬಿ ಕೊಂಡರೆ ಪ್ರಸಾದ, ನಂಬದಿದ್ದರೆ ವಿಷ, [illegible] ಇತ್ಯಾದಿ ಮಾತುಗಳು

ವಚನಕಾರರ ಉದಾತ್ತತೆಗೆ ನಿದರ್ಶನವಾಗಿವೆ. ಎಲ್ಲ ವಚನಕಾರರ ಗ್ರಂಥಗಳನ್ನು ಓದಿದರೂ ಈ ಮುಂದೆ ಹೇಳುವ ಅವರ ತಾತ್ವಿಕ ತೀರ್ಮಾನಗಳು ನಮ್ಮ ಕಣ್ಣುಗಳ ಮುಂದೆ ನಿಲ್ಲುತ್ತವೆ.

೧. ದೇವರು ಒಬ್ಬ, ಅವನಿಗೆ ಅನಂತವಾದ ನಾಮ

೨. ಅಹಿಂಸಾ ಧರ್ಮವೇ ಧರ್ಮದ ಮೂಲ

೩. ಪವಿತ್ರ ಭಾವನೆಯಿಂದ ಕೆಲಸ ಮಾಡುವುದೇ ಪ್ರಗತಿಯ ಹಾದಿ

೪. ಧರ್ಮದ ದೃಷ್ಟಿಯಲ್ಲಿ ಸ್ತ್ರೀ ಪುರುಷರು ಸಮಾನರು

೫. ಜಾತಿಭೇದಗಳು ಜನತೆಯ ಉನ್ನತಿಗೆ ಕಂಟಕ

೬. ಸಮಾಜದಲ್ಲಿ ಅಸ್ಪೃಶ್ಯತೆ ಇರಬಾರದು

೭. ತತ್ವಗಳು ಅನುಭವದ ಒರೆಗಲ್ಲಿಗೆ ನಿಲ್ಲಬೇಕು

೮. ಮನುಷ್ಯನು ಸದಾ ಅಂತರಂಗ ಬಹಿರಂಗ ಶುದ್ಧನಾಗಿ ವರ್ತಿಸಬೇಕು

೯. ಶರಣರು ಎಲ್ಲ ಪ್ರಾಣಿಗಳ ಹಿತಸಾಧನೆಗಾಗಿಯೂ ಶ್ರಮಿಸಬೇಕು

೧೦. ಪ್ರಪಂಚವನ್ನು ಅಸತ್ಯವೆಂದು, ದೇಹವು ನಶ್ವರವೆಂದು ಉಪೇಕ್ಷಿಸಬಾರದು

ಮೇಲೆ ಕಂಡ ಈ ತೀರ್ಮಾನಗಳನ್ನು ಹೇಳಿದ ವಚನಕಾರರ ದೃಷ್ಟಿ ಸಕಲ ಜೀವಾವಳಿಯ ಲೇಸನೇ ಬಯಸುವುದು ಆಗಿತ್ತೆಂದು "ಸಕಲ ಜೀವಾವಳಿಗೆ ಲೇಸನು ಬಯಸುವ ಕೂಡಲಸಂಗನ ಶರಣರು" ಎಂಬ ಶ್ರೀ ಬಸವೇಶ್ವರನ ಒಂದು ಮಾತಿನಿಂದ ಅರಿತುಕೊಳ್ಳಬಹುದು. ಈ ಹತ್ತು ಸಿದ್ಧಾಂತಗಳನ್ನು ಬೈಬಲ್ಲಿನ ಹತ್ತು ಉಪದೇಶಗಳಿಗೆ ಹೋಲಿಸಬಹುದು. ನಮ್ಮ ವಚನಕಾರರು ಕವಿಗಳೂ ಉಪದೇಶಕರೂ ಆಗಿದ್ದರು.

ಇನ್ನು ವಚನಗಳಲ್ಲಿರುವ ಸಾಹಿತ್ಯಾಂಶವನ್ನು ಕುರಿತು ನಾವು ಆಲೋಚಿಸೋಣ. ವಚನಕಾರರು ಧರ್ಮ ಪ್ರಸಾರಕರಾಗಿ ಸಮಾಜ

ಸುಧಾರಣೆಗಾಗಿ ಹೊರಟುದರಿಂದ ಅವರ ಭಾಷೆ ಮೃದು ಮಧುರವಾಗಿ, ಹಿತಮಿತವಾಗಿ, ಸವಿಕಟ್ಟಾಗಿ, ಜನಗಳ ಮನಸ್ಸಿಗೆ ಹಿಡಿಯುವಂತೆ ಇರಬೇಕಾದುದು ಅವಶ್ಯವೂ ಅನಿವಾರ್ಯವೂ ಆಗಿತ್ತು.

೧. ತನುವೆಂಬ ಏರಿಗೆ ಮನವೆಂಬ ಕಟ್ಟೆ, ಆಚಾರವೆಂಬ ಸೋಪಾನ, ಪರಮಾನಂದವೆಂಬ ಜಲವ ತುಂಬಿ, ಕೆರೆಯ ಕಟ್ಟಬಲ್ಲವರ ನಾನಾರನೂ ಕಾಣೆ. ನಾ ಕಟ್ಟಿದ ಕೆರೆ ಸ್ಥಿರವಾಯಿತ್ತು ಗುಹೇಶ್ವರ.

೨. ತನುವ ತೋಂಟವ ಮಾಡಿ, ಮನವ ಗುದ್ದಲಿ ಮಾಡಿ, ಅಗಿದು ಕಳೆದೆನಯ್ಯಾ ಭ್ರಾಂತಿಯ ಬೇರ, ಒಡೆದು ಸಂಸಾರದ ಹೆಂಟೆಯ, ಬಗೆದು ಬಿತ್ತಿದೆನಯ್ಯಾ ಬ್ರಹ್ಮ ಬೀಜವ, ಅಖಂಡ ಮಂಡಲವೆಂಬ ಬಾವಿ, ಪವನವೇ ರಾಟಾಳ ಸುಷುಮ್ನದಿಂದುದಕವತಿದ್ದಿ. ಬಸವಗಳೈವರು ಹಸಗೆಡಿಸಿಹವೆಂದು ಸಮತೆ ಸೈರಣೆ ಎಂಬ ಬೇಲಿಯನಿಕ್ಕಿ, ಆವಾಗಳು ಈ ತೋಂಟದಲ್ಲಿ ಜಾಗರವಿದ್ದು ಸಸಿಯ ಸಲಹಿದೆನು ಕಾಣಾ ಗುಹೇಶ್ವರ.

೩. ಹಿಡಿವ ಕೈಯ ಮೇಲೆ ಕತ್ತಲೆಯಯ್ಯಾ. ನೋಡುವ ಕಂಗಳ ಮೇಲೆ ಕತ್ತಲೆಯಯ್ಯಾ, ನೆನೆವ ಮನದ ಮೇಲೆ ಕತ್ತಲೆಯಯ್ಯಾ, ಕತ್ತಲೆಯಯ್ಯಾ ಗುಹೇಶ್ವರನೆಂಬುದು ಅತ್ತಲೆಯಯ್ಯಾ,

೪. ಸಕಲ ಭುವನಂಗಳಿಗೆ ತಂದೆ, ಸಕಲದೇವಾದಿ ದೇವರ್ಕಳಿಗೆ ತಂದೆ, ಭವಭವದಲ್ಲಿ ನೀನೆನ್ನ ತಂದೆ, ಗುಹೇಶ್ವರ ಲಿಂಗ ನಿರಾಳದಲ್ಲಿ ನೀನೆನ್ನ ತಂದೆ. ಎಂಬ ಶ್ರೀ ಪ್ರಭುದೇವರ ವಚನಗಳಲ್ಲಿಯೂ,

೧. ಮೇಲಾಗಲೊಲ್ಲೆನು ಕೀಳಾಗಲೊಲ್ಲದೆ, ಕೀಳಿಂಗಲ್ಲದೆ ಹಯನು ಕರೆವುದೇ? ಮೇಲಾಗಿ ನರಕದಲೋಲಾಡಲಾರೆನು, ನಿಮ್ಮ ಶರಣರ ಪಾದಕ್ಕೆ ಕೀಳಾಗಿರಿಸು ಮಹಾದಾನಿ ಕೂಡಲ ಸಂಗಮದೇವ.

೨. ಹಾರುವ ಹಾರುವನೆಂಬ ನಾನು, ಹಾರುವ ಹಾರುವನಪ್ಪೆ, ನಾನು ಸದ್ಭಕ್ತರೆನ್ನವರೆನ್ನವರೆಂದು ಹಾರುವೆ, ಹಾರುವೆ ನಾನು ಶರಣರು

ಎನ್ನುವರೆನ್ನವರೆಂದು ಕೂಡಲ ಸಂಗನ ಶರಣರು ಒಕ್ಕುದನಿಕ್ಕಿ ಸಲಹ
ರೆಂದು.

೩. ಹಾಲತೊರೆಗೆ ಬೆಲ್ಲದಂತಹ ಕೆಸರು, ಸಕ್ಕರೆಯಂತಹ ಮಳ
ತವರಾಜದಂತಹ ನೆರೆತೆರೆಗಳು, ಇಂತಪ್ಪ ಆದ್ಯರ ವಚನವಿರಲು,
ಬಾವಿಯತೋಡಿ ಉಪ್ಪನೀರನುಂಬುವನ ವಿಧಿಯಂತೆ ಆಯಿತೆನ್ನ
ಕೂಡಲ ಸಂಗಮದೇವ.

೪. ಚಕೋರಂಗೆ ಚಂದ್ರಮನ ಬೆಳಗಿನ ಚಿಂತೆ, ಅಂಬುಜಕ್ಕೆ ಭಾ
ವಿನ ಉದಯದ ಚಿಂತೆ, ಭ್ರಮರಂಗಳಿಗೆ ಪರಿಮಳದ ಬಂಡುಂಬ ಚಿಂ
ಎನಗೆ ನಮ್ಮ ಕೂಡಲ ಸಂಗಮದೇವರ ನೆನೆವಚಿಂತೆ.

೫. ಹರಿವ ಹಾವಿಂಗಂಜೆ, ಉರಿವ ನಾಲಗೆಗಂಜೆ, ಸುರಗಿಯ ಮೊ
ಗಂಜೆ, ಒಂದಕ್ಕಂಜುವೆ, ಒಂದಕ್ಕಳುಕುವೆ, ಪರಸ್ತ್ರೀ–ಪರಧನವೆಂಬ ಜೂ
ಗಂಜುವೆ, ಮುನ್ನಂಜದ ರಾವಣನೇವಿಧಿಗೊಳಗಾದ ? ಅಂಜುವೆನಯ
ಕೂಡಲ ಸಂಗಮದೇವ.

೬. ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ, ಇ
ಸಲ್ಲುವವರು ಅಲ್ಲಿಯೂ ಸಲ್ಲುವರಯ್ಯಾ, ಇಲ್ಲಿ ಸಲ್ಲದವರು ಅಲ್ಲಿಯೂ ಸ
ರಯ್ಯಾ ಕೂಡಲ ಸಂಗಮದೇವಯ್ಯಾ.

೭. ಸಂಸಾರವೆಂಬುದೊಂದು ಗಾಳಿಯ ಸೊಡರು, ಸಿರಿಯೆಂ
ದೊಂದು ಸಂತೆಯ ಮಂದಿ ಕಂಡಯ್ಯಾ, ಇದನೆಚ್ಚಿ ಕೆಡಬೇಡ ಸಿರಿಯೆಂಬು
ಮರೆಯದೆ ಪೂಜಿಸು ನಮ್ಮ ಕೂಡಲ ಸಂಗಮದೇವನ.

೮. ಜೋಳವಾಳಿಯುವ ನಾನಲ್ಲವಯ್ಯಾ, ವೇಳೆಯಾಳಿಯ ನಾನ
ವಯ್ಯಾ, ಹಾಳುಗೆಟ್ಟೋಡುವ ಆಳು ನಾನಲ್ಲವಯ್ಯಾ, ಕೇಳು ಕೂಡ
ಸಂಗಮದೇವಯ್ಯಾ ಮರಣವೇ ಮಹಾನವಮಿ.

ಈ ಮೊದಲಾದ ಶ್ರೀ ಬಸವೇಶ್ವರನ ವಚನಗಳಲ್ಲಿಯೂ,

೯. ಬೆಟ್ಟದ ಮೇಲೊಂದು ಮನೆಯಮಾಡಿ ಮೃಗಂಗಳಿಗಂಜಿದೊಡೆಂತಯ್ಯಾ, ಸಮುದ್ರದ ದಡದಲ್ಲಿ ಮನೆಯಮಾಡಿ ನೆರೆತೆರೆಗಳಿಗಂಜಿದೊಡೆಂತಯ್ಯಾ, ಸಂತೆಯೊಳಗೊಂದು ಮನೆಯಮಾಡಿ ಶಬ್ದ ಜಾಲಕೆ ನಾಚಿದೊಡೆಂತಯ್ಯಾ, ಚೆನ್ನಮಲ್ಲಿಕಾರ್ಜುನಯ್ಯಾ ಸಂಸಾರದಲ್ಲಿ ಹುಟ್ಟಿದ ಬಳಿಕ ಸ್ತುತಿ ನಿಂದೆಗಳಿಗೆ ಅಂಜಬಾರದು ಅಳುಕಬಾರದು ಸಮಾಧಾನಿಯಾಗಿರಬೇಕು.

೧೦. ಅರಸಿ ತೊಳಲಿದರಿಲ್ಲ, ಬಯಸಿಹೊಕ್ಕರಿಲ್ಲ, ತಪಸ್ಸು ಮಾಡಿದರಿಲ್ಲ. ಅದು ತನ್ನ ಬಹುಕಾಲಕ್ಕಲ್ಲದೆ ಸಾಧ್ಯವಾಗದು; ಶಿವನೊಲಿದಲ್ಲದೆ ಕೈಗೂಡದು, ಚೆನ್ನಮಲ್ಲಿಕಾರ್ಜುನನಿಗೊಲಿದೆನಾಗಿ ನಾನು ಸಂಗನಬಸವಣ್ಣನ ಶ್ರೀ ಪಾದವ ಕಂಡು ಬದುಕಿದೆನು.

ಎಂಬ ಮಹಾದೇವಿಯಕ್ಕನವರ ವಚನಗಳಲ್ಲಿಯೂ,

೧. ಸಿರಿಯನಿತ್ತೊಡೆ ಒಲ್ಲೆ, ಕರಿಯನಿತ್ತೊಡೆ ಒಲ್ಲೆ, ಹಿರಿದಪ್ಪರಾಜ್ಯವನಿತ್ತೊಡೆ ಒಲ್ಲೆ, ನಿಮ್ಮ ಶರಣರ ಸೂಳ್ನುಡಿಯನ್ನೊಂದರಗಳಿಗೆ ಇತ್ತರೆ ನಿಮ್ಮನಿತ್ತೆ ಕಾಣಾ ರಾಮನಾಥಾ.

೨. ಕಡೆಗೀಲಿಲ್ಲದ ಬಂಡಿ ಹೊಡೆಗೆಡೆವುದ ಮಾಂಬುದೆ? ಕಡೆಗೀಲು ಬಂಡಿಗಾಧಾರ ಕಡುದರ್ಪವೇರಿದ ಒಡಲೆಂಬ ಬಂಡಿಗೆ ಮೃಡ ಶರಣರ ನುಡಿಗಡಣವೇ ಕಡೆಗೀಲು ಕಾಣಾ ರಾಮನಾಥಾ.

ಎಂಬ ದೇವರ ದಾಸಿಮಯ್ಯನವರ ವಚನಗಳಲ್ಲಿಯೂ,

ವಚನಕಾರರ ಸಾಹಿತ್ಯ ಕೌಶಲ್ಯವನ್ನು ನಾವು ಸುಲಭವಾಗಿ ಕಾಣಬಹುದು. ಕಾವ್ಯಗಳಲ್ಲಿ ಕಾಣುವ, ರಸ, ಭಾವ, ಅರ್ಥ, ಶಬ್ದ, ಅಲಂಕಾರ ಮೊದಲಾದ ಸ್ವಾರಸ್ಯಗಳನ್ನೂ ಕವಿ ಚಮತ್ಕಾರಗಳನ್ನೂ ನಾವು ಈ ವಚನಗಳಲ್ಲಿಯೂ ಕಾಣಬಹುದು. ವಚನಗಳಲ್ಲಿ ಉತ್ತಮ ಭಾವಗಳಿವೆ, ಶ್ರೇಷ್ಠ ನಿರೂಪಣೆ ಇದೆ, ಅರ್ಥಾಲಂಕಾರ, ಶಬ್ದಾಲಂಕಾರಗಳಿವೆ, ಉಪಮೆ, ದೃಷ್ಟಾಂತ ಮೊದಲಾದ ಅಲಂಕಾರಗಳು ಹದವರಿತು ಬಂದಿವೆ. ಒಟ್ಟಿನಲ್ಲಿ ಸಾಹಿತ್ಯದಲ್ಲಿ ಕಾಣುವ ಶ್ರೇಷ್ಠ ಕಾವ್ಯಾನಂದವನ್ನೂ ನಾವು ಈ ಶಿವಶರಣರ

ವಚನಗಳಲ್ಲಿಯೂ ಅನುಭವಿಸಬಹುದು. ಇವುಗಳನ್ನು ಓದಿ ಆನಂದಿ ಬಹುದು. ಅಲ್ಲದೆ ಜೀವನಕ್ಕೆ ಪ್ರಯೋಜನವನ್ನೂ ಪಡೆಯಬಹುದು.

ವಚನ ಸಾಹಿತ್ಯವನ್ನು ಕುರಿತಾದ ಈ ಪ್ರಬಂಧದಲ್ಲಿ ನಾವು ಶರಣ ಪದ ಪ್ರಯೋಗದ ವಿಷಯವಾಗಿ ಕೆಲವು ಸಂಗತಿಗಳನ್ನು ತಿಳಿಯಬೇಕು. ಜೈನ, ಬೌದ್ಧ, ವೈದಿಕ ಗ್ರಂಥಗಳಲ್ಲಿ ಇರುವಂತೆಯೇ ಶಿವಶರಣರ ವಚನಗಳಲ್ಲಿಯೂ ಕೆಲವು ಪಾರಿಭಾಷಿಕ ಶಬ್ದಗಳ (Technical words) ಪ್ರಯೋಗಗಳನ್ನು ನಾವು ಕಾಣಬಹುದು. ಉದಾಹರಣೆಗಾಗಿ ಇಲ್ಲಿ ಕೆಲವು ಶಬ್ದಗಳನ್ನು ಓದುಗರ ಅವಗಾಹನೆಗಾಗಿ ನಿರೂಪಿಸಿದೆ.

ಅಂಗ–ಜೀವ. ಲಿಂಗ–ಶಿವ. ವಿರಕ್ತ–ಸಂನ್ಯಾಸಿ. ಕಂತೆ–ದೇಹ. ಶಿವದಾನ–ಮಜ್ಜಿಗೆ. ಅಗ್ಗವಣಿ–ಪೂಜಾರ್ಹವಾದ ನೀರು. ನಿರ್ಬಯಲು–ಆಕಾಶಕ್ಕಿಂತಲೂ ಸೂಕ್ಷ್ಮವಾದ ತತ್ವ. ಜಂಗಮ–ಜಗತ್ತಿನ ಸೇವೆಗೆ ತನ್ನ ಜೀವನವನ್ನು ಮೀಸಲು ಮಾಡಿದ ಲೋಕಸಂಚಾರಿ–ಅತಿಥಿ. ಶೂನ್ಯ–ಶಿವ ಬ್ರಹ್ಮ. ಎಡೆಮಾಡು–ಊಟಕ್ಕೆ ಬಡಿಸು, ಕ್ರೀ-ಮಾಟ–ಕ್ರಿಯೆ. ಬಯಲಾಗು-ಲಿಂಗೈಕ್ಯನಾಗು-ಸತ್ತುಹೋಗು. ಶಕ್ತಿ-ಪಾರ್ವತಿ. ಲಿಂಗೋದ್ಭವ–ದೇವರ ಕೃಪೆಯಿಂದ ಹುಟ್ಟಿದವ. ಸ್ಥಲ–ಶಿವ. ಶಿತಾಳ–ನೀರು ಇತ್ಯಾದಿ ಶಬ್ದಗಳೇ ಅಲ್ಲದೆ, ಅಷ್ಟಾವರಣ, ಪಂಚಾಚಾರ, ಷಟ್ಸ್ಥಲ, ಶರಣಾರ್ಥಿ, ಶಿವದೀಕ್ಷೆ, ಶಿವಯೋಗ, ದಾಸೋಹ, ಕರಣಹಸಿಗೆ, ತೀರ್ಥ ಪ್ರಸಾದ ಮೊದಲಾದ ಸಿದ್ಧಾಂತ ಬೋಧಕ ಶಬ್ದಗಳನ್ನು ವಚನಕಾರರು ಪ್ರಯೋಗಿಸಿರುತ್ತಾರೆ. ಈ ಶಬ್ದಾರ್ಥಗಳನ್ನು ತಿಳಿಯದೆ ನಾವು ವಚನ ಸಾಹಿತ್ಯವನ್ನು ಓದಲು ಹೋದರೆ ವಚನಗಳ ಸ್ವಾರಸ್ಯವನ್ನು ಶರಣರ ಭಾವಗಳನ್ನು ತಿಳಿಯುವುದು ಕಷ್ಟವಾಗುತ್ತದೆ.

ವಚನ ಸಾಹಿತ್ಯದ ಸ್ವಾರಸ್ಯವನ್ನು ತಿಳಿಯಬಯಸುವವರು ಬಸವೇಶ್ವರ, ದಾಸಿಮಯ್ಯ, ಅಕ್ಕಮಹಾದೇವಿ, ಪ್ರಭುದೇವರು, ಮೊದಲಾದವರ ವಚನಗಳನ್ನೂ, ಶೂನ್ಯ ಸಂಪಾದನೆ, ಗಣಭಾಷಿತ ರತ್ನಮಾಲೆ, ಲಿಂಗಲೀಲಾ ವಿಲಾಸ ಮೊದಲಾದ ವಚನಗಳ ಸಂಗ್ರಹ ಗ್ರಂಥಗಳನ್ನೂ ಅಗತ್ಯವಾಗಿ

ಓದಬೇಕು. ಶೂನ್ಯ ಸಂಪಾದನೆಯು ಸಂವಾದ ರೂಪದಲ್ಲಿದ್ದು ವಚನಕಾರರ ಭಗವದ್ಗೀತೆ ಎಂಬಂತೆ ಪ್ರಖ್ಯಾತವಾಗಿದೆ. A.

ವಚನಕಾರರಿಗೆ ಕೆಲಮಟ್ಟಿಗೆ ವೇದಾಗಮಗಳು ಸ್ಫೂರ್ತಿಯನ್ನು ಕೊಟ್ಟಿವೆ ನಿಜ, ಆದರೆ ಅವರು ಕಣ್ಣುಮುಚ್ಚಿಕೊಂಡು ಆ ಹಳೆಮಾತುಗಳನ್ನು ನಂಬಿ ಕುಳಿತುಕೊಂಡಿಲ್ಲ. ಧೈರ್ಯವಾಗಿ ಮುಂದೆ ನುಗ್ಗಿ ಅನುಭವದ ಹಾದಿಯಲ್ಲಿ ಸತ್ಯದ ಬೆಳಕನ್ನು ಕಂಡು ನಡೆದಿದ್ದಾರೆ. ಆ ಬೆಳಕನ್ನು ಕತ್ತಲೆಯಲ್ಲಿ ತೊಳಲುವ ನಾಡಿನ ಜನರಿಗೆ ವಚನಗಳ ಮೂಲಕ ತಮ್ಮ ಬೆಳಕನ್ನು ಒದಗಿಸಿ ಕೊಟ್ಟಿದ್ದಾರೆ. ವಿಶೇಷವಾಗಿ ವಚನಕಾರರಿಗೆ ತಮಿಳಿನ ತೇವಾರಗಳು ಎಂದರೆ ೬೩ ಮಂದಿ ಪುರಾತನರ ಅನುಭವೋಕ್ತಿಗಳು ಮಾರ್ಗದರ್ಶಕವಾಗಿದ್ದುವೆಂದು ಕಂಡುಬರುತ್ತದೆ.

ಆದ್ಯರ ವಚನ ಪರುಷ ಕಂಡಯ್ಯ, ಆದ್ಯರ ಅರುವತ್ತು ವಚನಕ್ಕೆ ಡಣಾಯಕರ ಇಪ್ಪತ್ತುವಚನ ಸಮ, ಇಂತಪ್ಪ ಆದ್ಯರ ವಚನ ಭಂಡಾರ, ಶರಣರ ಸೊಳ್ನುಡಿ ಮೊದಲಾದ ವಚನ ಪ್ರಯೋಗಗಳು ತಮಿಳಿನ ತಿರುವಾಚಕಂ, ತೇವಾರಗಳನ್ನೇ ನಿರ್ದೇಶಿಸುತ್ತವೆ ಎಂದು ನಮಗೆ ಕಂಡುಬರುತ್ತದೆ.

ನೀತಿ ಗ್ರಂಥಕಾರರಾದ ತಮಿಳಿನ ತಿರುವಳ್ಳುವರ್, ಕನ್ನಡದ ಸರ್ವಜ್ಞಮೂರ್ತಿ, ತೆಲುಗಿನ ವೇಮಣ್ಣ ಮೊದಲಾದವರೂ, ಕವಿ ಸೋಮನಾದಿ ಕನ್ನಡ ಶತಕಗ್ರಂಥಗಳ ಕರ್ತೃಗಳೂ ಬಹುಮಟ್ಟಿಗೆ ವಚನ ಸಾಹಿತ್ಯದ ಪ್ರಭಾವಕ್ಕೊಳಗಾದವರೇ ಆಗಿದ್ದಾರೆ. ಹರಿಹರ, ರಾಘವಾಂಕ, ಚಾಮರಸಾದಿ ಮಹಾಕವಿಗಳ ಕಾವ್ಯಗಳಲ್ಲಿಯೂ ವಚನಕಾರರ ಪ್ರಭಾವ ಕಂಡುಬರುತ್ತದೆ. ಶಿಲಾಶಾಸನಗಳಲ್ಲಿಯೂ ವಚನಗಳು ಉದಾಹೃತವಾಗಿವೆ. ಈ ಎಲ್ಲ ಕಾರಣದಿಂದ ನಮ್ಮ ಕನ್ನಡ ವಾಙ್ಮಯದಲ್ಲಿ ವಚನ ಸಾಹಿತ್ಯಕ್ಕೆ ಒಂದು ಉನ್ನತ ಸ್ಥಾನ ಏರ್ಪಟ್ಟಿದೆ.

---

A. ಇತ್ತೀಚಿನ ವಿದ್ವಾಂಸರ ಸಂಗ್ರಹಗಳು, ವಚನ ಶಾಸ್ತ್ರಸಾರ, (ರಾವ್ ಬಹದ್ದೂರ್ ಹಳಕಟ್ಟಿ) ವಚನ ಶಾಸ್ತ್ರ ರಹಸ್ಯ (ಶ್ರೀ ಆರ್. ಆರ್. ದಿವಾಕರ್) ವಚನ ಧರ್ಮಸಾರ (ಶ್ರೀ ಎಂ. ಆರ್. ಶ್ರೀನಿವಾಸಮೂರ್ತಿ) ಮೊದಲಾದವರ ಗ್ರಂಥಗಳನ್ನು ಸಾಧಕರು ಓದುವುದು ಅಗತ್ಯ.

ಆಧುನಿಕ ಕನ್ನಡ ಸಾಹಿತಿಗಳನೇಕರ ಮೇಲೆ, ವಚನಕಾರರ ಪ್ರಭಾ ಬಿದ್ದುದನ್ನು ನಾವು ಕಾಣುತ್ತೇವೆ. ಅಂತರಾತ್ಮನಿಗೆ, ರಂಗಯ್ಯ ವಚನಗ ಇತ್ಯಾದಿಗಳನ್ನು ಇದಕ್ಕೆ ಉದಾಹರಣೆಯಾಗಿ ಕೊಡಬಹುದು. ಕಾಲಜ್ಞಾ ವಚನಗಳಲ್ಲಿ ಐತಿಹಾಸಿಕ ವಿಷಯುಗಳು ತುಂಬಿವೆ. ಬೆಡಗಿನ ವಚನಗ ವೇದಾಂತ ವಿಷಯುಗಳಿವೆ. ವಚನಶಾಸ್ತ್ರವು ಇತಿಹಾಸ ಸಂಶೋಧಕ ನಾಟಕ ಕರ್ತೃಗಳು, ಹಾಡುಗಳನ್ನು ಕಟ್ಟುವವರು, ಸಮಾಜ ಸುಧಾರಕ ಅಧ್ಯಾತ್ಮ ಸಾಧಕರು, ಲೋಕಾನುಭವವನ್ನು ಬಯಸುವವರು ಇವರಿಗೆ ಉಪಯುಕ್ತವಾಗಿವೆ. ಆದ್ದರಿಂದಲೇ ಇದು **ಕನ್ನಡದ ನಂದನವನ** ಎಂ ಕರೆಯಬಹುದು.

ಈ ವಚನಕಾರರ ಚರಿತ್ರೆ ವಿಚಿತ್ರವಾಗಿದೆ. ಇವರಲ್ಲಿ ಪ್ರಭುದೇ ತೋಂಟದಾರ್ಯ, ಘನಲಿಂಗಿಯಂತಹ ತತ್ವಜ್ಞಾನಿಗಳಿದ್ದಾರೆ. ಬಸವ, ಚೆ ಬಸವ, ಸಿದ್ಧರಾಮರಂತಹ ಮಹಾಪುರುಷರಿದ್ದಾರೆ. ದಾಸಿಮಯ್ಯ ಅಜಗಣ್ಣ, ಅಕ್ಕಮಹಾದೇವಿಯರಂತಹ ಅನುಭವಿಗಳಿದ್ದಾರೆ. ರೇಮ್ಮ ರೇಚವ್ವೆ, ಮಹಾದೇವಮ್ಮನವರಂತಹ ಗೃಹಣಿಯರಿದ್ದಾರೆ. ತುರುಗಾ ರಾಮಣ್ಣ, ಕಕ್ಕಯ್ಯ, ಮಾಚಯ್ಯಗಳಂತಹ ಕಾಯಕ ನಿಷ್ಠರಿದ್ದಾರೆ. ಇ ನಲ್ಲಿ ಎಲ್ಲ ವೃತ್ತಿಯುವರಿದ್ದಾರೆ, ಎಲ್ಲ ರೀತಿಯುವರಿದ್ದಾರೆ. ಆದುದರಿ ಎಲ್ಲರ ವಚನಗಳು ಒಂದೇ ಮಟ್ಟದವುಗಳಲ್ಲ. ಇವುಗಳಲ್ಲಿ ಸಾಹಿತ್ಯದ ದೃಷ್ಟಿ ಯಿಂದ ಉತ್ತಮ, ಮಧ್ಯಮ, ಸಾಮಾನ್ಯವರ್ಗದ ವಚನಗಳುಂಟು. ಆದ ಎಲ್ಲರ ಗಮ್ಯಸ್ಥಾನ ಒಂದೇ. ಎಲ್ಲರ ಧೋರಣ ಒಂದೇ ಎಂಬುದು ಮಾತ್ರ ನಿಶ್ಚಯವಾಗಿದೆ.

ವಚನ ಶಾಸ್ತ್ರದಲ್ಲಿ ಒಬ್ಬೊಬ್ಬರು ಒಂದೊಂದು ವಿಷಯದಲ್ಲಿ ಗಣ್ಯ ಪಡೆದಿದ್ದಾರೆ. ಬಸವನು ಭಕ್ತಿಗೂ, ಚೆನ್ನಬಸವನು ಜ್ಞಾನಕ್ಕೂ, ಪ್ರಭು ದೇವನು ವೈರಾಗ್ಯಕ್ಕೂ, ಸಿದ್ಧರಾಮನು ಶಿವಯೋಗಕ್ಕೂ, ಮಡಿವಾಳ ವೀರನಿಷ್ಠೆಗೂ ಪ್ರಸಿದ್ಧರಾಗಿದ್ದಾರೆ. ದಾಸಿಮಯ್ಯನ ಹಿತಮಿತರೀತಿ, ತೋಂಟ ದಾರ್ಯನ ಸಿದ್ಧಾಂತನಿಷ್ಠೆ, ಹುಟ್ಟನಿಂದ ಹೆಣ್ಣಾಗಿ ಭಾವದಿಂದ ಗಂಡಾದ ಅಕ್ಕ ಮಹಾದೇವಿ, ಜನ್ಮತಃ ಪುರುಷನಾಗಿ ಸಾಧಕ ಸ್ಥಿತಿಯಲ್ಲಿ ಶರಣವೇಣ್ಣ

ವರ್ಣಿಸಿದ ಘನಲಿಂಗಿದೇವ ಇವರ ವಚನಗಳ ಸ್ವಾರಸ್ಯ ಇವು ವಚನ ಸಾಹಿತ್ಯಾಭ್ಯಾಸಿಗಳ ಮನಸ್ಸನ್ನು ಸೂರೆಗೊಳ್ಳುತ್ತವೆ. ಪ್ರತಿಯೊಬ್ಬ ವಚನ ಕಾರನಿಗೂ ಒಂದೊಂದು ಅಂಕಿತವಿದೆ. ಇದರಿಂದ ಈ ವಚನ ಇಂಥವರದು ಎಂದು ಥಟ್ಟನೆ ಹೇಳಬಹುದು. ಅಲ್ಲದೆ ಆ ಅಂಕಿತವು ಕವಿಯ ಸ್ಥಳ ಮೊದಲಾದುವನ್ನು ತಿಳಿಯಲು ಸಹಾಯಮಾಡುತ್ತದೆ. ಶ್ರೀ ಪುರಂದರಾದಿ ಹರಿದಾಸರಲ್ಲಿಯೂ ಈ ಅಂಕಿತದ ಪದ್ಧತಿ ರೂಢವಾಗಿದೆ. ಹಲವು ಕನ್ನಡ ಕವಿಗಳೂ ತಮತಮಗೆ ಪ್ರಿಯವಾದ ಅಂಕಿತಗಳನ್ನು ಸ್ವೀಕರಿಸಿದ್ದಾರೆ.

ಶರಣರ ವಚನಗಳನ್ನು ಹಾಡುಗಬ್ಬದಂತೆ ವಿವಿಧ ರಾಗತಾಳಗಳಿಂದ ಹಾಡುತ್ತಿದ್ದಂತೆ ತೋರುತ್ತದೆ. ಕೆಲವು ವಚನಗಳು ಹಾಡುಗಳಂತೆ ಸಂಗೀತಕ್ಕೆ ಹೊಂದಿಕೊಳ್ಳುತ್ತವೆ. ಈಗಲೂ ಕನ್ನಡ ನಾಡಿನಲ್ಲಿ ವಚನಗಳನ್ನು ಮಧುರವಾಗಿ ಹಾಡುವ ಗಾಯಕರನ್ನು ನಾವು ಕಾಣುತ್ತೇವೆ. ಹರಿಹರನ ಬಸವರಾಜದೇವರ ರಗಳೆ, ಪದ್ಮಣಾಂಕನ ಪದ್ಮರಾಜ ಪುರಾಣ ಮೊದಲಾದ ಕಾವ್ಯಗಳಲ್ಲಿ ವಚನಗಳನ್ನು ಶರಣರ ಗೀತೆಗಳು ಎಂದು ಕರೆದಿರುವುದು ಅರ್ಥಗರ್ಭಿತವಾಗಿದೆ.

ವಚನಶಾಸ್ತ್ರದ ಚರಿತ್ರೆ ೧೧ನೇ ಶತಕದಲ್ಲಿ ಪ್ರಾರಂಭವಾಗಿ, ೧೨ನೇ ಶತಮಾನದಲ್ಲಿ ಘನತೆಗೇರಿ, ೧೬ನೇ ಶತಕದವರೆಗೆ ಮುಂದುವರಿದಿದೆ. ವಿಜಯನಗರದ ಪ್ರೌಢ ದೇವರಾಯನ ಕಾಲದಲ್ಲಿ, ಜಕ್ಕಣಾರ್ಯ, ಲಕ್ಕಣಾಮಾತ್ಯ, ಕಲ್ಲುಮಠದ ಪ್ರಭುದೇವ, ವೀರಣ್ಣೊಡೆಯರು, ಗುಬ್ಬಿಯ ಮಲ್ಲಣ್ಣ ಮೊದಲಾದವರು ವಚನ ಶಾಸ್ತ್ರಕ್ಕೆ ಟೀಕೆಗಳನ್ನೂ ಭಾಷ್ಯಗಳನ್ನೂ ಬರೆದು ಹೆಚ್ಚಿನ ಸೇವೆ ಸಲ್ಲಿಸಿದ್ದಾರೆ. ಆದರೆ ವಚನ ಸಾಹಿತ್ಯದ ಸುಗ್ಗಿಯಕಾಲ ಕಲ್ಯಾಣದ ಅನುಭವ ಮಂಟಪದ ಕಾಲ. ಬಸವಣ್ಣನವರ ಮಹತ್ಕಾರ್ಯಗಳಲ್ಲಿ ಅನುಭವ ಮಂಟಪವೂ ಒಂದು. ಅದಕ್ಕೆ ಪ್ರಭುವು ಅಧ್ಯಕ್ಷ. ಚೆನ್ನಬಸವಣ್ಣ ಕಾರ್ಯದರ್ಶಿ, ಬಸವಣ್ಣ ಸ್ಥಾಪಕ ಎಂದು ಪ್ರಸಿದ್ಧವಿದೆ. ಅನುಭವ ಮಂಟಪದ ಸದಸ್ಯರಲ್ಲಿ ಮೋಳಿಗೆಯ ಮಾರಯ್ಯ, ಕಿನ್ನರಿ ಬ್ರಹ್ಮಯ್ಯ, ವಚನ ಭಂಡಾರಿ ಶಾಂತರಸ ಮೊದಲಾದವರೂ ಇದ್ದಾರೆ. ಆ ಮಂಟಪದಲ್ಲಿ ಪ್ರತಿಯೊಂದು ವಿಷಯಗಳನ್ನೂ ಚರ್ಚಿಸಿ ಶರಣರು ಹೇಗೆ ತೀರ್ಮಾನಕ್ಕೆ

ಬರುತ್ತಿದ್ದರೆಂಬುದನ್ನು ಶೂನ್ಯ ಸಂಪಾದನೆ ಗ್ರಂಥದಲ್ಲಿ ಕಾಣಬಹು ಈ ಮಂಟಪದ ಅಧ್ಯಕ್ಷರ ಗದ್ದುಗೆಗೆ 'ಶೂನ್ಯಪೀಠ' ಎಂದು ಹೆಸ ಅಲ್ಲಿನ ಚರ್ಚೆಯನ್ನೆಲ್ಲಾ ಭಂಡಾರಿ ಶಾಂತರಸನು ಬರೆವ ಹಾಗೂ ಬರೆಸು ವ್ಯವಸ್ಥಾಪಕನಾಗಿದ್ದನು. ಆದ್ದರಿಂದಲೆ 'ವಚನ ಭಂಡಾರಿ' ಎಂಬ ಬಿರುದ ಕಿನ್ನರಿ ಬ್ರಹ್ಮಯ್ಯನು ವಚನಗಳನ್ನು ವಿವಿಧರಾಗಾಲಾಪಗಳಿಂದ ಹಾ ಸಭಿಕರನ್ನು ಸಂತೋಷಗೊಳಿಸುತ್ತಿದ್ದನೆಂದು ತೋರುತ್ತದೆ.

ಅನುಭವ ಮಂಟಪವನ್ನು ಶರಣ ಸಾಹಿತ್ಯದ ತೌರುಮನೆ ಎ ಬಹುದು. ವಚನಶಾಸ್ತ್ರದ ವಿಚಾರ ತಿಳಿಯಲಾಶಿಸುವವರು, ಅನುಭ ಮಂಟಪದ ಮನೋಹರವಾದ, ಕುತೂಹಲಜನಕವಾದ ಚರಿತ್ರೆಯನ್ನ ತಿಳಿಯುವುದು ಅಗತ್ಯವಾಗಿದೆ.

ಶಿವಶರಣರ ಶ್ರೇಷ್ಠ ವಚನಗಳಿಗೆ ಸಮಾನವಾದ ಮಾತುಗಳು ಬ ಸಾಹಿತ್ಯದಲ್ಲಿ ಬಹಳವಾಗಿ ಸಿಗಲಾರವು. ಆದುದರಿಂದಲೇ ಪ್ರಭುದೇವ "ಮಾತೆಂಬುದು ಜ್ಯೋತಿರ್ಲಿಂಗ" ಎಂದು ಹೇಳಿದ್ದಾರೆ. ಈ ವಚ ಜ್ಯೋತಿಯು "ಮರ್ತ್ಯಲೋಕದವರ ಮನದ ಮೈಲಿಗೆಯ ತೊಳೆಯಲೆಂದ ಗೀತಾಮಾತೆಂಬ ಜ್ಯೋತಿಯ ಬೆಳಗಿ ಕೊಟ್ಟರು" ಎಂಬ ಚೆನ್ನಬಸವಣ್ಣನ ಮಾತಿನಂತೆ ಲೋಕದ ಜನರ ಉನ್ನತಿಗಾಗಿ ಈ ವಚನಶಾಸ್ತ್ರ ಜ್ಯೋ ಹತ್ತಿ ಉರಿಯುತ್ತಿದೆ. ಜಗದ ತಮಂಧವನ್ನು ಈ ವಚನಶಾಸ್ತ್ರ ನಂದ ದೀಪ ಓಡಿಸುತ್ತಿದೆ.

ಈ ವಚನ ಸಾಹಿತ್ಯದಲ್ಲಿ ಮುಖ್ಯವಾಗಿ ವಿಶ್ವಧರ್ಮದ ಮಾತುಗಳ ಬಂದಿದ್ದರೂ ವೀರಶೈವ ಮತಪ್ರಕ್ರಿಯೆಗಳಾದ ಅಷ್ಟಾವರಣ, ಪಂಚಾಚಾ ಮತ್ತು ಷಟ್ಸ್ಥಲಗಳ ವಿಷಯವಾಗಿ ಬಹಳ ಸಂಗತಿಗಳು ನಿರೂಪಿತವಾಗಿವೆ ಅಷ್ಟಾವರಣವು ಕ್ರಿಯಾಪ್ರಧಾನವಾಗಿಯೂ, ಪಂಚಾಚಾರವು ನೀತಿ ಪ್ರಧಾ ವಾಗಿಯೂ ಷಟ್ಸ್ಥಲವು ಜ್ಞಾನ ಪ್ರಧಾನವಾಗಿಯೂ ಇವೆ. ಲಿಂಗಧಾರಣ ಹಾಗೂ ಶಿವದೀಕ್ಷೆಗಳ ವಿಷಯಗಳೂ ವಚನಗಳಲ್ಲಿವೆ. ವೀರಶೈವ ಧರ್ಮದಲ್ಲಿ ಷಟ್ಸ್ಥಲಗಳು ಪ್ರಾಮುಖ್ಯವಾದುವು. ಇವುಗಳಲ್ಲಿ ದ್ವೈತಾದ್ವೈತಗಳ

ಸಮನ್ವಯವಿದೆ. ಈ ಷಟ್ಸ್ಥಲಗಳ ಆಚರಣೆಯಲ್ಲಿ ಮುಂದೆ ಹೇಳುವ ೧೨ ಮಂದಿ ಮಹಾತ್ಮರು ಪ್ರಸಿದ್ಧರೆನಿಸಿದ್ದಾರೆ.

೧. ಭಕ್ತಿಸ್ಥಲ–ಬಸವೇಶ್ವರ, ಜಕ್ಕಣಾರ್ಯ,

೨. ಮಹೇಶ್ವರಸ್ಥಲ–ಮಡಿವಳ ಮಾಚಯ್ಯ, ಕಿನ್ನರಿ ಬ್ರಹ್ಮಯ್ಯ,

೩. ಪ್ರಸಾದಿಸ್ಥಲ–ಚೆನ್ನಬಸವಣ್ಣ, ಘಟ್ಟವಾಳಯ್ಯ.

೪. ಪ್ರಾಣಲಿಂಗಿಸ್ಥಲ–ಸಿದ್ಧರಾಮೇಶ್ವರ, ನೀಲಾಂಬಿಕೆ.

೫. ಶರಣಸ್ಥಲ–ಅಲ್ಲಮಪ್ರಭು, ಅಕ್ಕಮಾದೇವಿ.

೬. ಐಕ್ಯಸ್ಥಲ–ಅಜಗಣ್ಣ, ಅನಿಮಿಷಯ್ಯ

ಈ ಮೇಲೆ ಕಂಡ ಸಿದ್ಧರಲ್ಲದೆ ದೇವರ ದಾಸಿಮಯ್ಯ, ಮುಕ್ತಾಯಕ್ಕ, ತೋಂಟದ ಸಿದ್ಧಲಿಂಗ, ಸ್ವತಂತ್ರ ಸಿದ್ಧಲಿಂಗ, ಘನಲಿಂಗಿದೇವ ಮೊದಲಾದ ವರಿಗೂ ವಚನ ಸಾಹಿತ್ಯದಲ್ಲಿ ಅಗ್ರ ಪೂಜೆಯಿದೆ. ಹಾಗೂ ಪೂರ್ಣ ಸಿದ್ಧಿಯಿದೆ.

ಪ್ರಪಂಚದಲ್ಲಿಯೇ ಪ್ರಖ್ಯಾತರಾದ ಸಾಕ್ರಟೀಸ್, ಪ್ಲೇಟೋ, ಅರಿಸ್ಟಾಟಲ್, ಯೇಸುಕ್ರಿಸ್ತ, ಬುದ್ಧದೇವ, ಶ್ರೀಕೃಷ್ಣ, ಕಾಁಪ್ಯೂಷಿಯಸ್, ಮಹಾವೀರ,ಪರಮಹಂಸ, ಟಾಲ್‌ಸ್ಟಾಯ್, ರಮಣ ಮಹರ್ಷಿ,ಅರವಿಂದಘೋಷ್, ಮಹಾತ್ಮಗಾಂಧಿ ಮೊದಲಾದವರ ಉದಾತ್ತವಾದ ಉದ್ಗಾರಗಳಿಗೆ ಸಮ ಸಮವಾದ ಮಾತುಗಳನ್ನು ನಾವು ಶರಣರ ವಚನಗಳಲ್ಲಿ ಕಾಣಬಹುದು. ಅದು ಕಾರಣವೇ ಅವು ಸಾಹಿತ್ಯದಲ್ಲಿ ಶ್ರೇಷ್ಠ ವರ್ಗಕ್ಕೆ ಸೇರಿದುವೆಂಬುದು. ಕನ್ನಡನಾಡಿನ ಕೆಲವೆಡೆಗಳಲ್ಲಿ ಈ ವಚನ ಗ್ರಂಥಗಳನ್ನು ಗುಡಿಗಳಲ್ಲಿಟ್ಟು ಪೂಜಿಸುವವರ ಉದ್ದೇಶ ಈ ಹಿರಿಮೆಯ ದೆಸೆಯಿಂದಲೇ ಎಂದು ಕಾಣುತ್ತದೆ. A. ವಚನಗಳ ಬಹು ಭಾಗವು ಇನ್ನೂ ತಾಳೆಯೋಲೆಯ ಸೆರೆಯಲ್ಲಿರುವುದೂ, ಶ್ರೀ ಬಸವೇಶ್ವರಾದಿ ಮಹಾತ್ಮರ ವಚನಗಳು ಪರಿಶುದ್ಧವಾಗಿ,

A. ಬಾಗೇವಾಡಿ, ಕೊಡೇಕಲ್ಲುಗಳಲ್ಲಿ ವಚನ ಗ್ರಂಥಗಳನ್ನು ಗುಡಿಗಳಲ್ಲಿಟ್ಟು ದೇವರಂತೆ ಪೂಜಿಸುವ ರೂಢಿಯಿದೆ.

ಸಂಪೂರ್ಣವಾಗಿ ಪ್ರಕಟವಾಗಿರುವುದೂ ಕನ್ನಡ ನಾಡಿನ ದೌರ್ಭಾಗ್ಯವಲ್ಲ ಮತ್ತೇನು ? ಇದುವರೆಗೆ ಅಲ್ಪ ಸ್ವಲ್ಪ ಮಟ್ಟಿಗೆ ವಚನಗಳು ಪ್ರಕಾಶ ಬಂದುದೂ, ಇಂಗ್ಲಿಷ್, ಹಿಂದಿ, ಮರಾಠಿ, ತೆಲುಗು ಮೊದಲಾದ ಭಾ ಗಳಲ್ಲಿ ಕೆಲವು ವಚನಗಳು ಭಾಷಾಂತರವಾಗಿರುವುದೂ ಇದ್ದುದ ಸಮಾಧಾನಕರವಾಗಿದೆ.

ವಚನ ಶಾಸ್ತ್ರದ ಮಹತ್ವಕ್ಕೆ ಈ ಮುಂದೆ ಹೇಳುವ ಶ್ರೀ ಚೆ ಬಸವೇಶ್ವರ ದೇವರ ಸುಂದರ ವಚನವು ಕೈಗನ್ನಡಿಯಂತಿದೆ.

"ನಮ್ಮ ಆದ್ಯರ ವಚನ ಜ್ಞಾನದ ನೆಲೆಯ ತೆಗೆದಿರಿಸಿತ್ತು, ನಮ್ಮ ಆದ್ಯರ ವಚನ ಮದಮತ್ಸರಾದಿ ಅರಿಷಡ್ವರ್ಗ, ಸಪ್ತವ್ಯಸನ, ದಶವಾಯು ಗಳಿಚ್ಛೆಗೆ ಹರಿವ ಮನವ ಸ್ವಸ್ಥವಾಗಿ ನಿಲಿಸಿತ್ತು, ನಮ್ಮ ಆದ್ಯರ ವಚ ಅಂಗೇಂದ್ರಿಯಂಗಳ ಲಿಂಗೇಂದ್ರಿಯಂಗಳೆನಿಸಿತ್ತು, ನಮ್ಮ ಆದ್ಯರ ವಚ ನೂರೊಂದು ಸ್ಥಲವ ಮೀರಿದ ಮಹದಲ್ಲಿ ನೆಲೆಸಿತ್ತು, ಇಂತಪ್ಪ ಆದ್ಯ ವಚನ ಭಂಡಾರವು ನಮ್ಮ ಪ್ರಭುದೇವರು ಮುಖ್ಯರಾದ ೭೭೦ ಅಮ ಗಣಂಗಳು, ಅಸಂಖ್ಯಾತ ಪುರಾತನರು, ಪ್ರಮಥ ಗಣಂಗಳು ಕೇಳಿ ಹೇ ಕೊಂಡಾಡಿದ ಕಾರಣ ನಮ್ಮ ಕೂಡಲ ಚೆನ್ನಸಂಗಯ್ಯನಲ್ಲಿ ಸರ್ವಸುಖ ಸೂರೆಗೊಂಡು ಸ್ವಯಲಿಂಗವಾದರು. ಇಂತಪ್ಪ ಪುರಾತನರ ವಚನಂಗ ಎರಡಿಲ್ಲದೆ, ತನು ಮನ ಧನವ ಎರಡಿಲ್ಲದೆ ಸಮರ್ಪಿಸುವ ಭಕ್ತರ ಭೃ ನಾನು ಆಳಿನಾಳಯ್ಯ ನಾನು".

ವೀರಶೈವ ಸಾಹಿತ್ಯ ಮತ್ತು ಇತಿಹಾಸ (ಭಾಗ-೧)

ಕನ್ನಡ ನಾಡಿನ ಪುಣ್ಯದ ಪುತ್ಥಳಿ



ಬಸವೇಶ್ವರರ ಧರ್ಮಪತ್ನಿ ಹಾಗೂ ವಚನಕಾರ್ತಿ

ಶ್ರೀ ನೀಲಾಂಬಿಕಾ ದೇವಿಯವರು

# ೩. ಸಮಾಜ ಮತ್ತು ಸಿದ್ಧಾಂತ

## ದ್ರಾವಿಡದೇಶ ಮತ್ತು ವೀರಶೈವ ಧರ್ಮ

A. ತಮಿಳು ನಾಡಿಗೂ, ವೀರಶೈವ ಧರ್ಮಕ್ಕೂ ಹಲವು ಶತಮಾನಗಳಿಂದ ನಿಕಟವಾದ ಸಂಬಂಧವುಂಟೆಂದು ಲಿಂಗವಂತರ ಮತಚರಿತ್ರೆಯಿಂದ ತಿಳಿದು ಬಂದಿದೆ. ಶೈವಧರ್ಮಕ್ಕೆ ತಮಿಳುನಾಡು ಉಗಮ ಸ್ಥಾನವಾದರೆ, ಕನ್ನಡ ನಾಡು ವೀರಶೈವ ಧರ್ಮಕ್ಕೆ ಮಾತೃಸ್ಥಾನವಾಗಿರುವುದು ಇಲ್ಲಿ ನಾವು ತಿಳಿದಿರಬೇಕಾದ ವಿಚಾರ. ಶಿವಭಕ್ತಿಯ ಪುತ್ತಳಿಯಂತಿದ್ದ ಅರುವತ್ತು ಮೂರು ಮಂದಿ ಪುರಾತನರ ನಿವಾಸಸ್ಥಾನವಾದ ತಮಿಳುನಾಡು ಪುಣ್ಯಭೂಮಿಯೆಂದು ಹೇಳುವುದರಲ್ಲಿ ಸಂಶಯವೇನು ? ವಿಸ್ತಾರವೂ ಮಹೋನ್ನತವೂ ಆದ ದೇವಾಲಯಗಳಿಂದಲೂ, ಕಾವೇರಿ, ಪಾಲರ್, ಪೆನ್ನಾರ್ ವೈಘೈ ಮೊದಲಾದ ಪುಣ್ಯನದಿಗಳಿಂದಲೂ, ಚೋಳ, ಪಾಂಡ್ಯ, ಚೇರ ಮೊದಲಾದ ಪ್ರಾಚೀನ ರಾಜಮನೆತನಗಳಿಂದಲೂ, ಕಂಚಿ, ಕಾಳಹಸ್ತಿ, ಚಿದಂಬರ, ರಾಮೇಶ್ವರ, ಮಧುರೆ, ಶ್ರೀರಂಗ, ಪಳನಿ ಮೊದಲಾದ ಪುಣ್ಯಕ್ಷೇತ್ರಗಳಿಂದಲೂ, ಶ್ರೀಮಾಣಿಕ್ಯವಾಚಕರ್, ಅಪ್ಪರ್, ಸುಂದರ್, ತಿರುವಳ್ಳುವರ್, ಅವ್ವೆಯಾರ್, ಮಂಗಯಕ್ಕರಸಿ ಮೊದಲಾದ ತತ್ವಜ್ಞಾನಿಗಳಿಂದಲೂ ಕೂಡಿದ ತಮಿಳುನಾಡು ಪುಣ್ಯದ ಬೀಡೆಂಬುದರಲ್ಲಿ ಸಂಶಯವೇನು ?

ವೀರಶೈವಮತದ ಚರಿತ್ರೆಯನ್ನು ತಿಳಿದವರಿಗೆ ಮಾತ್ರ ವೀರಶೈವ ಧರ್ಮಕ್ಕೂ ದ್ರಾವಿಡದೇಶಕ್ಕೂ ಇರುವ ಸಂಬಂಧವು ತಿಳಿದುಬರುತ್ತದೆ. ತಮಿಳುನಾಡಿನಲ್ಲಿ ಒಂದು ಕಾಲದಲ್ಲಿ ವೀರಶೈವ ಜನಾಂಗವು ವಿಪುಲವಾಗಿ

---

A. ತಾ॥ ೩-೭-೪೧ನೆಯ ದಿನ ಮದರಾಸು ಪ್ರಾಂತದ ವೆಲ್ಲೂರಿನಲ್ಲಿ ನಡೆದ ದಕ್ಷಿಣ ಭಾರತ ವೀರಶೈವ ಸಿದ್ಧಾಂತ ಮಹಾಸಭೆಯ ೧೧ನೆಯ ಅಧಿವೇಶನದ ಅಧ್ಯಕ್ಷಸ್ಥಾನದಿಂದ ನಿರೂಪಿಸಿದ ಭಾಷಣದ ಸಂಗ್ರಹ.

ನೆಲಸಿತ್ತೆಂಬುದಕ್ಕೆ ಮದರಾಸು, ಕಂಚಿ, ಕುಂಭಕೋಣಂ, ತಿರುವಣ್ಣಾ
ಚಿದಂಬರಂ, ತಿರುಚನಾಪಳ್ಳಿ, ಮಧುರೆ, ಬೊಮ್ಮನ ಪಾಳೆಯಂ ಮೊದ
ಕಡೆಗಳಲ್ಲಿ ಇರುವ ಸಮಾಜದ ದೊಡ್ಡದೊಡ್ಡ ಮಠಗಳು ನಿದರ್ಶನವಾ
ದಕ್ಷಿಣ ದೇಶದಲ್ಲಿ ಕುಂಭಕೋಣಂನಲ್ಲಿರುವ ಶ್ರೀ ಪೆರಿಯಮಠವು ಹ
ಶತಮಾನಗಳಿಂದ ಪ್ರಸಿದ್ಧವಾಗಿದೆ. ೧೧.ನೆಯ ಶತಕದಲ್ಲಿ ಆಚಾರ್ಯ
ರೇವಣಸಿದ್ಧನೂ, ೧೬ನೆಯ ಶತಮಾನದ ಮಧ್ಯಭಾಗದಲ್ಲಿ ಶ್ರೀ ತೋ
ಸಿದ್ಧಲಿಂಗೇಶ್ವರನೂ ತಮಿಳುನಾಡಿನಲ್ಲಿ ಸಂಚರಿಸಿ ವೀರಶೈವ ಧ
ಪ್ರಸಾರ ಮಾಡಿದರೆಂಬುದಕ್ಕೆ ಐತಿಹಾಸಿಕ ನಿದರ್ಶನಗಳಿವೆ. ವೀರಶೈವ
ಚರಿತ್ರೆಯಲ್ಲಿ ಸುಪ್ರಸಿದ್ಧನಾದ ಆಚಾರ್ಯ ರೇವಣಸಿದ್ಧನು ಕಂಚ
ರಾಜೇಂದ್ರ ಚೋಳನನ್ನು ತನ್ನ ಶಿಷ್ಯನನ್ನಾಗಿ ಮಾಡಿಕೊಂಡಿದ್ದನೆಂ
ತನ್ಮೂಲಕವೇ ಆತನು ತನ್ನ ಪ್ರಭಾವವನ್ನು ದಕ್ಷಿಣ ದೇಶದಲ್ಲಿ ಸಿಂಹ
ವರೆಗೆ A. ವಿಸ್ತರಿಸಿದನೆಂದೂ ನಾವು ಆ ಮಹಾತ್ಮನ ಸಂಬಂಧ
ಪುರಾಣಗಳಿಂದ ತಿಳಿಯಬಹುದಾಗಿದೆ. ಶ್ರೀ ರೇಣುಕಾಚಾರ್ಯನು ಹ
ಕಾಲದಲ್ಲಿಯೇ ಅಗಸ್ತ್ಯನೆಂಬ ಶೈವಬ್ರಾಹ್ಮಣ ಮುನಿಗೆ ಶಿವದೀ
ಪೂರ್ವಕ ಲಿಂಗಧಾರಣವನ್ನು ಮಾಡಿ ವೀರಶೈವ ಸಿದ್ಧಾಂತವನ್ನು ಉಪ
ಸಿದನೆಂಬುದಕ್ಕೆ ರೇಣುಕಾಗಸ್ತ್ಯ ಸಂವಾದರೂಪವಾದ 'ಸಿದ್ಧಾಂತ ಶಿ
ಮಣಿ' ಎಂಬ ಗ್ರಂಥವು ನಿದರ್ಶನವಾಗಿದೆ. ಶ್ರೀ ರೇವಣಸಿದ್ಧನು ರಾಜೇ
ಚೋಳ ಮಹಾರಾಜನನ್ನು B. ಶಿವಭಕ್ತನನ್ನಾಗಿ ಮಾರ್ಪಡಿಸಿದನೆಂಬು
'ಚೋಳ-ರೇಣುಕ ಸಂವಾದ' ಎಂಬ ಗ್ರಂಥವು ನಿದರ್ಶನವಾಗಿದೆ.

ದ್ರಾವಿಡ ನಾಡಿನಲ್ಲಿ ಹಲವು ಪ್ರಾಚೀನ ವೀರಶೈವ ಕವಿಗಳು
ಹೋಗಿರುವರೆಂಬುದು ಈ ಸಮಯದಲ್ಲಿ ನಾವೆಲ್ಲರೂ ಸ್ಮರಿಸಬೇ
ವಿಚಾರ. ಕಂಚಿಯ ಶಂಕರಾರಾಧ್ಯನು (ಸು. ೧೫ನೇ ಶತಮಾನ)
ಶೈವ ಮತೋದ್ಧಾರಕನಾದ ಶ್ರೀ ಬಸವೇಶ್ವರನ ಚರಿತ್ರೆಯನ್ನು ಸಂಸ್ಕೃ

A. ಸಿಂಹಳ ದ್ವೀಪದ ಜಾಪ್ನಾದಲ್ಲಿ ವೀರಶೈವರಿದ್ದಾರೆ. ಅಲ್ಲಿ 'ರೇಣುಕಾಶ್ರ
ಎಂಬ ಮಠವಿದೆ. ಅದಕ್ಕೆ ಈಗ ಶ್ರೀ ಕೈಲಾಸ ದೇಶಿಕರು ಅಧ್ಯಕ್ಷರು.
B. ರಾಜೇಂದ್ರ ಚೋಳನ ಕಾಲ ಸುಮಾರು ಕ್ರಿ. ಶ. ೧೦೧೨-೧೦೪೪.

ಭಾಷೆಯಲ್ಲಿ "ಬಸವೇಶ ವಿಜಯಂ" ಎಂಬ ಹೆಸರಿನಿಂದ ಬರೆದು ಮಹೋಪಕಾರ ಮಾಡಿದನು. ಓರ್ವ ಪ್ರಾಚೀನ ವೀರಶೈವ ಕವಿಯು (?) ತಮಿಳಿನಲ್ಲಿ ಬಸವ ಪುರಾಣವನ್ನು ಭಾಷಾಂತರಿಸಿ ಮಹೋಪಕಾರ ಮಾಡಿದನು. ತಮಿಳು ಸಾಹಿತ್ಯದಲ್ಲಿ ಸುಪ್ರಸಿದ್ಧರಾದ ಶ್ರೀ ಶಿವಪ್ರಕಾಶ ಸ್ವಾಮಿಗಳು C. ಕನ್ನಡದ ಪ್ರಭುಲಿಂಗ ಲೀಲೆ ಮತ್ತು ವಿವೇಕ ಚಿಂತಾಮಣಿಗಳನ್ನೂ ಸಿದ್ಧಾಂತ ಶಿಖಾಮಣಿಯನ್ನೂ ತಮಿಳಿಗೆ ಭಾಷಾಂತರಿಸಿ ಲಿಂಗವಂತರ ವಾಙ್ಮಯವನ್ನು ಉದ್ಧಾರಮಾಡಿದರು. ಹಲವು ವೀರಶೈವ ಕವಿಗಳು ಕನ್ನಡ ಮತ್ತು ತೆಲುಗು ಸಾಹಿತ್ಯಗಳಂತೆ ತಮಿಳಿಗೂ ಸೇವೆಯನ್ನು ಸಲ್ಲಿಸಿದರೆಂಬುದು ನಮ್ಮೆಲರಿಗೂ ಹೆಮ್ಮೆಯ ವಿಷಯ. ಶ್ರೀ ರೇಣುಕಾಚಾರ್ಯ ನಾಮಕ ರೇವಣಸಿದ್ಧನು ಕಂಚಿಯನ್ನು ಕೇಂದ್ರವನ್ನಾಗಿ ಮಾಡಿಕೊಂಡು ಧರ್ಮಪ್ರಸಾರ ಕಾರ್ಯಗಳನ್ನು ಮಾಡಿದನೆಂದು ರೇವಣಸಿದ್ಧ ಪುರಾಣಗಳು ಹೇಳುತ್ತವೆ. ಅದಕ್ಕೆ ಸಾಕ್ಷಿಯಾಗಿ ಕಂಚಿಯಲ್ಲಿರುವ ರೇವಣಸಿದ್ಧ ದೇವಾಲಯ ಮತ್ತು ಶ್ರೀ ವೀರಭದ್ರ ದೇವರಿರುವ ಕುಲ್ಲುಮಠ ಇವುಗಳು ನಿದರ್ಶನವಾಗಿವೆ. ರೇಣುಕಾಚಾರ್ಯನು ಲಂಕಾದ್ವೀಪದಲ್ಲಿ ಲಿಂಗಾಯತ ಧರ್ಮಪ್ರಚಾರ ಮಾಡಿದನೆಂಬುದಕ್ಕೆ ಇಂದಿಗೂ ಲಂಕಾದ್ವೀಪದ ಜಾಪ್ನಾ ದಲ್ಲಿರುವ ಲಿಂಗಾಯತರು ಸಾಕ್ಷಿಯೆನಿಸಿದ್ದಾರೆ. ಕುಂಭಕೋಣಂ ಪೆರಿಯಮಠದಲ್ಲಿ ೭ ನೆಯ ಶತಮಾನದಲ್ಲಿ ಮಹಾಕವಿ 'ವಟ್ಟಕೂತ್ತರ್' ಎಂಬ ವಿದ್ವಾಂಸರೊಬ್ಬರಿದ್ದರೆಂದೂ ಅವರು ವೀರಶೈವ ಮತೀಯರೆಂದೂ ತಮಿಳು ವಿದ್ವಾಂಸರು ಹೇಳುತ್ತಾರೆ. D. ತಮಿಳು ನಾಡಿನಷ್ಟು ಹೆಚ್ಚಿಲ್ಲವಾದರೂ, ಅದರ ನೆರೆನಾಡಾದ ಕೇರಳದಲ್ಲಿಯೂ ವೀರಶೈವಧರ್ಮವು ಪ್ರಚಾರವಾಗಿತ್ತೆಂಬುದಕ್ಕೆ ಈಗಲೂ ಅಲ್ಲಿ ನೆಲೆಸಿರುವ ಹಲವು ಮಂದಿ ವೀರಶೈವರು ಸಾಕ್ಷಿಯೆನಿಸಿದ್ದಾರೆ. ಹೀಗೆಯೇ ನಾವು ಆಲೋಚಿಸುತ್ತಾ ಹೋದರೆ ದಕ್ಷಿಣ ಭಾರತಕ್ಕೂ ವೀರಶೈವ ಸಿದ್ಧಾಂತಕ್ಕೂ ಇರುವ ಬಾಂಧವ್ಯವು ಇನ್ನೂ ಹೆಚ್ಚುಹೆಚ್ಚಾಗಿ ತಿಳಿದುಬರುವುದರಲ್ಲಿ ಸಂಶಯವಿಲ್ಲ.

---

C. ಶ್ರೀ ಶಿವಪ್ರಕಾಶ ಸ್ವಾಮಿಗಳು ತಮಿಳಿನಲ್ಲಿ ೩೩ ಗ್ರಂಥಗಳನ್ನು ಬರೆದಿರುವರೆಂದು ತಿಳಿದುಬಂದಿದೆ. ಇವರ ಪ್ರಭುಲಿಂಗಲೀಲೆ ಪ್ರಖ್ಯಾತ ಕಾವ್ಯವಾಗಿದೆ.

D. ೬೩ ಮಂದಿ ಪುರಾತನರಲ್ಲಿ ಒಬ್ಬರಾದ ಮೂರ್ಖ ನಾಯನಾರ್ ಈ ಪೆರಿಯ ಮಠಕ್ಕೆ ಸಂಬಂಧಪಟ್ಟ ಮಹಾಭಕ್ತರೆಂದು ತಿಳಿದುಬಂದಿದೆ.

## ವೀರಶೈವ ಸಿದ್ಧಾಂತ ಸ್ವರೂಪ

ಇನ್ನು ಮುಂದೆ ನಾವು ವೀರಶೈವ ಸಿದ್ಧಾಂತ ಸ್ವರೂಪವನ್ನು ಕು ಕೆಲವು ಮಾತುಗಳನ್ನು ಹೇಳಲಿಚ್ಛಿಸುತ್ತೇವೆ. ಈ ಸಭೆಗೆ 'ವೀರ ಸಿದ್ಧಾಂತ ಮಹಾಸಭೆ' ಎಂದು ಹೆಸರಿಟ್ಟಿರುವುದರಿಂದ ಈ ಸಭೆಗೆ ವರೂ, ಇದರ ಕಾರ್ಯಗಳಲ್ಲಿ ಆಸಕ್ತರಾದವರೂ ವೀರಶೈವ ಸಿದ್ಧಾ ಲಕ್ಷಣಗಳನ್ನು ಚೆನ್ನಾಗಿ ತಿಳಿಯುವುದೂ ಅದನ್ನು ಆಚರಿಸುವುದೂ ಅತ್ಯ ವೆಂದು ನಾವು ಹೇಳಬೇಕಾಗಿಲ್ಲವಷ್ಟೆ.

ಭರತಖಂಡದಲ್ಲಿ ಸುಪ್ರಸಿದ್ಧಗಳಾದ ದರ್ಶನಗಳಲ್ಲಿ ವೀರಶೈವ ಸಿ ತವು ಪರಿಗಣಿತವಾಗಿದೆ. ಪ್ರಾಚೀನರಾದ ವೀರಶೈವ ವಿದ್ವಾಂಸರು ದರ್ಶನದ ಬಗೆಗೆ ಸಂಸ್ಕೃತ, ಕನ್ನಡ, ತೆಲುಗು ಮತ್ತು ತಮಿಳು ಮೊ ಲಾದ ಭಾಷೆಯಲ್ಲಿ ಹಲವು ಮಹತ್ವದ ಗ್ರಂಥಗಳನ್ನು ಬರೆದಿದ್ದಾ ಆಚಾರ್ಯ ನೀಲಕಂಠ, ಶ್ರೀಪತಿ ಪಂಡಿತ, ಶಿವಾಚಾರ್ಯ ಶಿವಯೋ ನೀಲಕಂಠಾಚಾರ್ಯ, ನಂದಿಕೇಶ್ವರ ಶಿವಾಚಾರ್ಯ, ಆಚಾರ್ಯ ಸ್ವಪ್ರ ನಂದ, ಕಲ್ಯಾಣದ ಮಾಯಿದೇವ, ಸೋಸಲೆ ರೇವಣಾರಾಧ್ಯ, ನಿಟ್ಟೂ ನಂಜಣಾಚಾರ್ಯ, ಗುಬ್ಬಿಯ ಮಲ್ಲಣಾಚಾರ್ಯ, ಪಾಲ್ಕುರಿಕೆಯ ಸೋ ನಾಥ, ಶಿವಪ್ರಕಾಶಸ್ವಾಮಿ, ಮೌನಪ್ಪಪಂಡಿತ, ಷಡಕ್ಷರ ಮಂತ್ರಿ ಮೊ ಲಾದ ಪ್ರಾಚೀನ ವೀರಶೈವ ವಿದ್ವಾಂಸರು ಈ ಸಿದ್ಧಾಂತಕ್ಕೆ ಮಾಡಿದ ಉ ಕಾರವೂ, ಈ ಸಿದ್ಧಾಂತ ಪ್ರಚಾರಕ್ಕಾಗಿ ಮಾಡಿದ ಮಹತ್ ಕಾರ್ ಗಳೂ ಸ್ಮರಣಾರ್ಹವಾದವುಗಳು.

ಹಿಂದೂ ಧರ್ಮದಲ್ಲಿ ಸಿದ್ಧಾಂತ ಮತ, ವೇದಾಂತ ಮತ ಎಂ ಮತಗಳು ಎರಡು ವಿಧವಾಗಿವೆ. ವೀರಶೈವ ಮತವು ಸಿದ್ಧಾಂತ ಭಾಗ ಸೇರಿದುದಾಗಿದೆ. ವೀರಶೈವ ಸಿಂದ್ಧಾಂತವು ಈ ಮುಂದೆ ಹೇಳುವ ಲಕ್ಷ ಗಳಿಂದ ಕೂಡಿದೆ. ಸಿದ್ಧಾಂತ ಮತಗಳಲ್ಲಿ ವೈದಿಕ, ತಾಂತ್ರಿಕ, ವೈದಿ ತಾಂತ್ರಿಕ, ತಾಂತ್ರಿಕ ವೈದಿಕ ಎಂಬ ನಾಲ್ಕು ವಿಭಾಗಗಳುಂಟು. ಶೈವರು ತಂತ್ರ (ಆಗಮ)ಗಳಿಗೆ ಪ್ರಾಮುಖ್ಯತೆ ಕೊಡುವುದರಿಂದ

ವೇದದ ಜ್ಞಾನ ಕಾಂಡವನ್ನು ಮಾತ್ರ ಒಪ್ಪುವುದರಿಂದಲೂ ಇವರು ತಾಂತ್ರಿಕ ವೈದಿಕರು.

೧. ವೀರಶೈವ ಸಿದ್ಧಾಂತದಲ್ಲಿ ಶಿವ–ಶಕ್ತಿ ಎಂಬ ಎರಡು ಮೂಲ ತತ್ವಗಳು ಸೃಷ್ಟಿಯ ಬುನಾದಿಯಾಗಿವೆ. ಇವು ತೋರಿಕೆಗೆ ಎರಡರಂತೆ ಕಂಡರೂ ಅವಿನಾಭಾವದಿಂದ ಶಬ್ದಾರ್ಥಗಳಂತೆ, ರತ್ನಕಾಂತಿಗಳಂತೆ ಒಂದಾಗಿವೆ. ಆದ್ದರಿಂದಲೇ ಶಕ್ತಿವಿಶಿಷ್ಟನಾದ ಶಿವನನ್ನು ತಿಳಿಯುವ ಮತ ವಾದುದರಿಂದ ಈ ಮತಕ್ಕೆ "ಶಕ್ತಿವಿಶಿಷ್ಟಾದ್ವೈತ" ಎಂದು ಹೆಸರಾಗಿದೆ. ವೀರಶೈವ ದರ್ಶನದ ಮೂಲಭೂತವಾದ ಶಿವ–ಶಕ್ತಿಗಳು, ಆಧುನಿಕ ವೈಜ್ಞಾನಿಕರು ಹೇಳುವ (Matter and Energy) ಎಂಬ ಸೃಷ್ಟಿಯ ಮೂಲ ತತ್ವಗಳಿಗೆ ಸಮಾನವೆಂದು ನಾವು ತಿಳಿಯುಬಹುದಾಗಿದೆ.

೨. ವೀರಶೈವ ಸಿದ್ಧಾಂತದಲ್ಲಿ ಜೀವನಿಗೆ ಸಾಧಕಾವಸ್ಥೆಯಲ್ಲಿ ದ್ವೈತವೂ, ಸಿದ್ಧಾವಸ್ಥೆಯಲ್ಲಿ ಅದ್ವೈತವೂ, ಪರಿಗ್ರಹಿಸಲ್ಪಟ್ಟಿದೆ. ಆದುದ ರಿಂದಲೇ ಈ ಮತಕ್ಕೆ 'ದ್ವೈತಾದ್ವೈತ' ಮತ್ತು 'ಶಿವಾದ್ವೈತ' ಎಂಬ ಹೆಸರುಗಳು ವೀರಶೈವ ಗ್ರಂಥಗಳಲ್ಲಿ ರೂಢಿಗೆ ಬಂದಿವೆ.

೩. ವೀರಶೈವ ದರ್ಶನವು ಜೀವಿಗಳಲ್ಲಿ ಸ್ತ್ರೀ–ಪುರುಷ ಭೇದವನ್ನು ಕಲ್ಪಿಸುವುದಿಲ್ಲವಾದುದರಿಂದ, ಈ ಧರ್ಮದಲ್ಲಿ ಸ್ತ್ರೀ–ಪುರುಷರಿಬ್ಬರೂ ಮೋಕ್ಷಾಧಿಕಾರಿಗಳಾಗಿದ್ದಾರೆ. ಮತ್ತೆ ಕೆಲವು ವೈದಿಕಾವೈದಿಕ ದರ್ಶನ ಗಳಲ್ಲಿ ಸ್ತ್ರೀಯರಿಗೆ ಮೋಕ್ಷಾಧಿಕಾರವಿಲ್ಲವೆಂಬುದು ಇಲ್ಲಿ ನಾವು ನೆನಪಿಡತಕ್ಕ ವಿಚಾರ. ಆದರೆ ಬೌದ್ಧರು ಸ್ತ್ರೀಯರಿಗೂ ಮೋಕ್ಷಾಧಿಕಾರ ಒಪ್ಪಿದ್ದಾರೆ.

೪. ವೀರಶೈವ ದರ್ಶನದ ಪ್ರಕಾರ ಜೀವಿಯು ಜನ್ಮತಃ ಪ್ರಾಪ್ತವಾದ ತನ್ನ ಕುಲಜಾತಿಗಳಿಗೆ ಸಿಕ್ಕಿ ನರಳುವ ಅವಶ್ಯಕತೆಯಿಲ್ಲ. ಅವನು ಶಿವ ಸಂಸ್ಕಾರದಿಂದ ಪುನೀತನಾಗಿ ಉತ್ತಮನೆನಿಸಬಹುದು. ಹಾಗೂ ಮೋಕ್ಷ ವನ್ನು ಸಂಪಾದಿಸಬಹುದು. ಆದುದರಿಂದಲೇ ಇದು ಆಗಮ ಪ್ರಧಾನ ವಾದ ಅತಿವರ್ಣಾಶ್ರಮ ಧರ್ಮವಾಗಿದೆ. 'ವರ್ಣಾನಾಂ ಕಿಂ ಪ್ರಯೋಜನಂ' ಎಂದು ಬಸವಣ್ಣನವರು ಹೇಳಿದ್ದಾರೆ.

೫. ವೀರಶೈವ ಧರ್ಮದಲ್ಲಿ ಕ್ರಿಯೆ ಮತ್ತು ಜ್ಞಾನ ಇವೆರಡೂ ಸಮಾನ ಪ್ರಧಾನವಾದುವುಗಳು. ಮತ್ತೆ ಕೆಲವು ಮತಗಳು ಕರ್ಮಕ್ಕೆ ಅಥವಾ ಜ್ಞಾನಕ್ಕೆ ಮಾತ್ರ ಪ್ರಾಮುಖ್ಯತೆ ಕೊಟ್ಟಿವೆ. ಇಲ್ಲಿ ಎರಡೂ ಮುಖ್ಯ

೬. ಯಜ್ಞಯಾಗಗಳ ನಿಮಿತ್ತವಾಗಿಯಾಗಲಿ ಮತ್ತಾವ ಕಾರಣ ದಿಂದಾಗಲಿ ಪ್ರಾಣಿ ಹಿಂಸೆಯು ಈ ಧರ್ಮದಲ್ಲಿ ನಿಷೇಧವಾದದು. ಆದ ಕಾರಣ ವೀರಶೈವ ದರ್ಶನವು ಅಹಿಂಸಾಮಯವಾದುದು. ಶ್ರೀ ಬಸವೇಶ್ವರನು 'ದಯೆಯೇ ಧರ್ಮದ ಮೂಲವು' ಎಂದು ಹೇಳಿದ್ದಾನೆ.

೭. ವೀರಶೈವ ಧರ್ಮವು ಕೇವಲ ಮೂರ್ತಿಪೂಜೆಯನ್ನು ಪುರಸ್ಕ ಸುವುದೂ ಇಲ್ಲ. ಅದನ್ನು ಸಂಪೂರ್ಣವಾಗಿ ತಿರಸ್ಕರಿಸುವುದೂ ಇಲ್ಲ. ವೀರ ಶೈವರಿಗೆ ಪೂಜ್ಯವಾದ ಲಿಂಗವು ದೇವರ ನಿರಾಕಾರ ಭಾವನೆಯ ಒಂದು ಹೆಗ್ಗುರುತು. ದೇವಾಲಯಗಳಿಗೂ, ತೀರ್ಥಕ್ಷೇತ್ರಗಳಿಗೂ ಲಿಂಗವಂತನು ಶ್ರಮಿಸುವ ಕಾರಣವಿಲ್ಲ. ಅವನಿಗೆ ದೇಹವೇ ದೇವಾಲಯ. ಆತ್ಮನೇ ದೇವರು. ಗುರು-ಜಂಗಮ ತೀರ್ಥವೇ ಮಹಾತೀರ್ಥ. ಲಿಂಗಪೂಜೆಯೇ ಆತನ ಯಜ್ಞ, ಯಾಗ.

೮. ವೀರಶೈವರಿಗೆ ಪೂರ್ವಜನ್ಮವುಂಟು, ಆದರೆ ಪುನರ್ಜನ್ಮವಿಲ್ಲ 'ಏಕೇನ ಜನ್ಮನಾ ಮುಕ್ತಿಃ' ಎಂಬ ಆಗಮವಾಕ್ಯವು ಇದಕ್ಕೆ ಪ್ರಮಾಣ ವಾಗಿದೆ. E.

೯. ವೀರಶೈವ ದರ್ಶನವು ಸೃಷ್ಟಿಕರ್ತನೊಬ್ಬನುಂಟೆಂದು ನಂಬು ತ್ತದೆ. ಆತನು ಸಗುಣ, ನಿರ್ಗುಣರೂಪನೆಂದು ನಂಬುತ್ತದೆ. ಆದುದ ರಿಂದ ಇದು ಆಸ್ತಿಕ ಮತವಾಗಿದೆ. ಪ್ರಪಂಚ ರೂಪವಾದ ಕಾರ್ಯಕ್ಕೆ ಕಾರಣ ರೂಪನಾದ ಪರಮೇಶ್ವರನು ಇರಲೇಬೇಕೆಂಬುದು ವೀರಶೈವರ ನಂಬಿಕೆ. ದೇವನೊಬ್ಬ ನಾಮ ಹಲವು ಎಂದು ಬಸವಣ್ಣ ಹೇಳಿದ್ದಾನೆ.

E. ಶಿವದೀಕ್ಷೆಯಲ್ಲಿ ಜೀವನ, ಅಣವ, ಮಾಯಾ, ಕಾರ್ಮಿಕ ಮಲಗಳು ನಾಶ ವಾಗುತ್ತವೆ. ತ್ರಿವಿಧ ದಾಸೋಹದಿಂದ ಜೀವನ ಹುಟ್ಟಿನ ಬೀಜವನ್ನು ಸುಟ್ಟ ವೀರಶೈವನಿಗೆ ಮತ್ತೆ ಜನ್ಮವಿಲ್ಲವೆಂಬ ಭಾವನೆ.

೧೦. ವೀರಶೈವ ಮತವು ತನ್ನದೇ ಆದ ಅಪ್ರಾಕೃತ ಸೃಷ್ಟಿಯನ್ನು ಹೇಳಿದೆ. ಅದಕ್ಕೆ ಶಿವಸೃಷ್ಟಿಯೆಂದು ಹೆಸರು. ಆದ್ದರಿಂದಲೇ ಇದು ಅತಿ ವರ್ಣಾಶ್ರಮ ಧರ್ಮವಾಗಿದೆ ಹಾಗೂ ಅಪ್ರಾಕೃತ ಧರ್ಮವೆನಿಸಿದೆ.

೧೧. ವೀರಶೈವಮತವು ವೇದ ಮತ್ತು ಆಗಮಗಳೆರಡನ್ನೂ ನಂಬುವ ತಾಂತ್ರಿಕ–ವೈದಿಕ ಮತವಾಗಿದೆ. ವೇದವು ಶಿವನ ಉಸಿರು, ಆಗಮವು ಶಿವನ ಮಾತುಗಳು ಎರಡೂ ಶಿವೋಕ್ತವಾದವುಗಳು ಎಂಬುದವರ ಭಾವನೆ.

೧೨. ವೀರಶೈವ ಮತವು ಅನುಭವ ಪ್ರಧಾನವಾದರೂ ಧರ್ಮಶ್ರದ್ಧೆಯನ್ನು ಅಲ್ಲಗಳೆದಿಲ್ಲ. ಶಬ್ದಪ್ರಮಾಣವನ್ನು ತಿರಸ್ಕರಿಸಿಲ್ಲ. ಆದುದರಿಂದ ಅದು ಕರ್ಮ–ಜ್ಞಾನಗಳೆರಡಕ್ಕೂ ಪ್ರಧಾನವೆನಿಸಲು ಕಾರಣವಾಗಿದೆ. 'ಕ್ರಿಯಾಜ್ಞಾನ ಸಮಾಯುಕ್ತಂ ವೀರಶೈವಸ್ಯ ಲಕ್ಷಣಂ' ಎಂಬ ವಾಕ್ಯ ಇದಕ್ಕೆ ಪ್ರಮಾಣ ಕ್ರಿಯೆ. ಮನುಷ್ಯನ ಕಾಲು, ಜ್ಞಾನ ಕಣ್ಣು, ನರನಿಗೆ ಎರಡೂ ಬೇಕು. ಕುರುಡನ ಕಾಲು, ಕುಂಟನ ಕಣ್ಣು ಎರಡೂ ಸೇರಿದರೆ ಕಾರ್ಯವಾಗುತ್ತಿದೆ.

೧೩. ವೀರಶೈವ ದರ್ಶನವು ಉಪನಿಷತ್ತಿನ ತತ್ವಜ್ಞಾನ, ಬೌದ್ಧರ ಸಮಾನ ತತ್ವ, ಜೈನರ ಅಹಿಂಸಾಧರ್ಮ, ದ್ರಾವಿಡರ ಭಕ್ತಿಮಾರ್ಗ ಇವೆಲ್ಲವುಗಳ ಸಾರಸರ್ವಸ್ವವಾದ್ದರಿಂದ ಇದು ಪರಿಪೂರ್ಣ ಧರ್ಮವೆನಿಸಿದೆ.

೧೪. ವೀರಶೈವ ದರ್ಶನದಲ್ಲಿ ಜೀವಿಯು ಸಾಧಕಾವಸ್ಥೆಯಲ್ಲಿಯೂ ಸಿದ್ಧಾವಸ್ಥೆಯಲ್ಲಿಯೂ ಪಂಚಸೂತಕಗಳಿಗೆ ಬದ್ಧನಲ್ಲ. F.

೧೫. ವೀರಶೈವ ದರ್ಶನವು ಯಾವುದಾದರೊಂದು ವ್ಯಕ್ತಿಯಿಂದ ಒಂದೇ ಒಂದು ಕಾಲದಲ್ಲಿ ನಿರೂಪಿತವಾದುದಲ್ಲ. ಅದು ದಾರ್ಶನಿಕರಾದ

---

F. ಕೆಲವು ಶ್ರುತಿಯುಗಳಲ್ಲಿ ಸೂತಕ ಕಾಲದಲ್ಲಿ ದೇವರ ಪೂಜೆಯು ಸ್ಮೃತಿ ವಾಕ್ಯಗಳಂತೆ ನಿಷೇಧಿಸಲ್ಪಟ್ಟಿದೆ. ವೀರಶೈವರಿಗೆ ಪ್ರತಿದಿನವೂ ಶಿವಪೂಜೆಯು ಅನಿವಾರ್ಯವಾದ ವ್ರತವಾದುದರಿಂದಲೂ, ದೇಹಸಂಬಂಧವಾದ ಸೂತಕಕ್ಕಾಗಿ, ಜೀವ ಸಂಬಂಧವಾದ ಪೂಜಾದಿಗಳನ್ನು ನಿಲ್ಲಿಸುವುದು ಯುಕ್ತವಲ್ಲವಾದುದರಿಂದಲೂ; ಸೂತಕಗಳು ಲಿಂಗವಂತರಲ್ಲಿ ತಾತ್ವಿಕ ದೃಷ್ಟಿಯಿಂದ ನಿರಾಕರಿಸಲ್ಪಟ್ಟಿವೆ. ಶಾಸ್ತ್ರಗಳಲ್ಲಿ ಸಾಮಾನ್ಯ ಸೂತ್ರಗಳನ್ನು ವಿಶೇಷ ಸೂತ್ರಗಳು ಬಾಧಿಸುತ್ತವೆಯಷ್ಟೆ ?

ಹಲವರ ಅನುಭವ, ತಪಸ್ಸು, ಪ್ರತಿಭೆ ಮತ್ತು ಪಾಂಡಿತ್ಯ ಇವುಗಳ ಫಲವಾ ಈಗಿನ ರೂಪದಲ್ಲಿ ಹೊರಬಿದ್ದಿದೆ. ಆದ್ದರಿಂದ ಇದು ಪರಿಪೂರ್ಣ ಧ ವಾಗಿದೆ. ಪಂಚಾಚಾರ್ಯರಿಂದ ಅಂದರೆ ಪಂಚರ ತೀರ್ಮಾನ ಅಂದರೆ ಪ್ರಾ ರಾದ ಹಲವು ಹಿರಿಯರ ತೀರ್ಮಾನವಲ್ಲವೆ? ಹಲವರಿಂದ ಈ ಮತ ಯಿತು ಎಂಬ ಈ ಭಾವನೆಯೇ ಇಲ್ಲಿ ಇದೆ. ವೀರಶೈವವು ವ್ಯಕ್ತಿ ಮೂಲವ

೧೬. ವೀರಶೈವ ದರ್ಶನವು ಶಿವದೀಕ್ಷಾ ಪ್ರಧಾನವಾದುದರಿಂದ ಜ ಪ್ರಧಾನವಾದ ವರ್ಣಾಶ್ರಮಗಳನ್ನು ಅಂಗೀಕರಿಸುವುದಿಲ್ಲ. ಆದ್ದರಿ ಇದು ಅತಿ ವರ್ಣಾಶ್ರಮ ಧರ್ಮವೆನಿಸಿದೆ. ಇದನ್ನೇ ಊರ್ಧ್ವಸೃಷ್ಟಿ ಶಿವಸೃಷ್ಟಿ, ಅಪ್ರಾಕೃತ ಸೃಷ್ಟಿ ಎಂದು ಹೇಳಿದ್ದಾರೆ.

೧೭. ವೀರಶೈವ ಧರ್ಮವು ಜಗತ್ತಿನ ಜನರನ್ನು, ಭವಿ,ಭಕ್ತ, ಎಂ ಎರಡು ಭಾಗವಾಗಿ ತಿಳಿಯುತ್ತದೆ. ಬದ್ಧಜೀವಿಗಳು ಭವಿಗಳು, ಸಿದ್ಧಜೀ ಗಳು ಭಕ್ತರು ಎಂಬುದು ಅವರ ನಂಬಿಕೆ.

೧೮. ವೀರಶೈವ ದರ್ಶನವು ಅಹಿಂಸೆ ಮತ್ತು ಪವಿತ್ರತೆಗ ಪ್ರಾಮುಖ್ಯತೆಯನ್ನು ಕೊಟ್ಟದೆಯಾದ್ದರಿಂದ ಮದ್ಯಮಾಂಸಗಳ ನಿಷೇಧಿಸಿದೆ. ಇದೊಂದು ಪರಿಶುದ್ಧವಾದ ಸಂಸ್ಕೃತಿಯೆನಿಸಿದೆ.

೧೯. ವೀರಶೈವ ಧರ್ಮವು, ವೇದದ ಜ್ಞಾನಕಾಂಡ, ಶಿವಾಗ ಗಳು, ಶಿವಶರಣರ ವಚನಗಳು, ಪೂರ್ವಾಚಾರ್ಯರ ಗ್ರಂಥಗಳು ಇವನ್ನೆ ಪ್ರಮಾಣಾರ್ಹವೆಂದು ನಂಬುತ್ತದೆ.

೨೦. ವೀರಶೈವ ಧರ್ಮವು ಆರ್ಯದ್ರಾವಿಡ ಸಂಸ್ಕೃತಿಗಳ ಸಮ್ಮಿಶ್ರ ರೂಪವಾಗಿದೆ. ಜೈನರ ಅಹಿಂಸೆ, ಬೌದ್ಧರ ಅನುಕಂಪ, ಭಾಗವತರ ಭ ಮಾರ್ಗಗಳಿಗೂ ಇಲ್ಲಿ ಆಶ್ರಯವಿದೆ.

## ಸಾಧನ ಮಾರ್ಗಗಳು

ಪ್ರತಿಯೊಂದು ಮತದಲ್ಲಿಯೂ ತತ್ವಜ್ಞಾನ ಮತ್ತು ಸಾಧನಮಾ ಎಂಬ ಎರಡು ವಿಧಾನಗಳಿರುತ್ತವೆ. ವೀರಶೈವ ಮತದಲ್ಲಿಯೂ ಇದ

ಅನುಗಣವಾಗಿಯೇ ಇದೆ. ವೀರಶೈವಮತದಲ್ಲಿ ಅಷ್ಟಾವರಣವು ಕ್ರಿಯಾಪ್ರಧಾನವಾಗಿಯೂ, ಪಂಚಾಚಾರಗಳು ನೀತಿಪ್ರಧಾನವಾಗಿಯೂ, ಷಟ್‌ಸ್ಥಲಗಳು ಜ್ಞಾನ ಪ್ರಧಾನವಾಗಿಯೂ ಇವೆ. G ಶ್ರೀ ಗುರುವಿನ ಅನುಗ್ರಹದಿಂದ ಲಿಂಗಧಾರಣಯುಕ್ತನೂ, ಶಿವದೀಕ್ಷಾಸಂಪನ್ನನೂ ಆದ ಸಾಧಕನು, ಮೇಲೆ ಹೇಳಿದ ಮೂರು ಸಾಧನ ಮಾರ್ಗಗಳನ್ನು ಅನುಸರಿಸಿ ನಡೆದರೆ ಅವನು ಐಹಿಕಾಮುಷ್ಮಿಕ ಫಲಗಳನ್ನು ಪಡೆಯಬಹುದೆಂದು ಲಿಂಗವಂತರ ಸಿದ್ಧಾಂತವು ಹೇಳುತ್ತದೆ. ಶ್ರೀ ಗುರುವಿನ ಅನುಗ್ರಹರೂಪವಾದ ಯೋಗ್ಯತಾಪತ್ರವನ್ನು ಪಡೆದ ಸಾಧಕನು, ಶಿವದೀಕ್ಷಾ ಸರೋವರದಲ್ಲಿ ಮಿಂದು ಪುನೀತನಾಗಿ, ಅಷ್ಟಾವರಣವೆಂಬ ಕೋಟೆಯಲ್ಲಿ ಸುರಕ್ಷಿತನಾಗಿ, ಪಂಚಾಚಾರಗಳೆಂಬ ನೀತಿಪಥದಲ್ಲಿ ನಡೆದು, ಷಟ್‌ಸ್ಥಲಗಳೆಂಬ ಸೋಪಾನಗಳನ್ನು ಹತ್ತಿ, ಲಿಂಗಾಂಗ ಸಾಮರಸ್ಯರೂಪವಾದ ಮೋಕ್ಷವನ್ನು ಪಡೆದು–ಶಿಖಿಕರ್ಪೂರನ್ಯಾಯದಂತೆ–ಅಂತಹ ಜೀವನು — ಪರಬ್ರಹ್ಮನೊಡನೆ ಬೆರೆತು ಸುಖಿಸಬಹುದೆಂದು ಈ ಸಿದ್ಧಾಂತವು ನಿರೂಪಿಸುತ್ತದೆ.

## ವೀರಶೈವ ಮತದ ವೈಶಿಷ್ಟ್ಯ

ಇದುವರೆಗೆ ನಾವು ಹೇಳಿದ ವೀರಶೈವ ಸಿದ್ಧಾಂತ–ಸ್ವರೂಪವನ್ನು ತಿಳಿದವರಿಗೆ ಈ ಮತದ ವೈಶಿಷ್ಟ್ಯವೆಂಬುದು ಸ್ಪಷ್ಟವಾಗುವಂತಿದೆ. ವೀರಶೈವ ಮತವು ಮತ್ತಾವ ಮತಗಳಿಗೂ ವಿರೋಧಿಯಾದುದಲ್ಲ. 'ವೀರಶೈವ' ಎಂಬ ಶಬ್ದಕ್ಕೆ "ಶಿವ–ಜೀವ–ಐಕ್ಯರೂಪವಾದ ಮೋಕ್ಷಮಾರ್ಗದಲ್ಲಿ ಗಮಿಸತಕ್ಕವನು" ಎಂದು ಸಿದ್ಧಾಂತ ಶಿಖಾಮಣಿ, ಕ್ರಿಯಾಸಾರ ಮೊದ

---

G ಅಷ್ಟಾವರಣ: ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ಭಸ್ಮ, ರುದ್ರಾಕ್ಷ, ಮಂತ್ರ.

ಪಂಚಾಚಾರಗಳು: ಶಿವಾಚಾರ, ಲಿಂಗಾಚಾರ, ಗಣಾಚಾರ, ಭೃತ್ಯಾಚಾರ, ಸದಾಚಾರ.

ಷಟ್‌ಸ್ಥಲಗಳು: ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ.

 

ಲಾದ ಪ್ರಾಚೀನ ಗ್ರಂಥಗಳಲ್ಲಿ ಅರ್ಥವು ಹೇಳಲ್ಪಟ್ಟಿದೆ. ಅದು ಕಾ
ಈ ಮತವು ಕ್ರಿಯೆ, ಜ್ಞಾನ, ಭಕ್ತಿ ಎಂಬ ಮೂರನ್ನೂ ಸಾಧನೆಗೆ
ಗುಣವಾಗಿ ಅಳವಡಿಸಿಕೊಂಡಿದೆ. ವೀರಶೈವ ಧರ್ಮದಲ್ಲಿ 'ಭಕ್ತಿಯು
ಪಂಚಮ ಪುರುಷಾರ್ಥವೆನಿಸಿದೆ. ಚತುರ್ವಿಧ ಪುರುಷಾರ್ಥಗ
ಧರ್ಮ–ಅರ್ಥ–ಕಾಮ–ಮೋಕ್ಷ ಎಂಬ ನಾಲ್ಕರ ಜತೆಗೆ, ವೀರಶೈವ
ನವು ಭಕ್ತಿಯನ್ನೂ ಕೂಡಿಸಿ ಪಂಚಪುರುಷಾರ್ಥಗಳನ್ನು ಹೇಳುತ್ತ
ಮತ್ತೆ ಕೆಲವು ಮತೀಯರು ೨೫ ಮೂಲತತ್ವಗಳನ್ನು ಹೇಳುವ
ಎಲ್ಲರಿಗೂ ತಿಳಿದವಿಷಯವಾಗಿದೆ. ವೀರಶೈವದಲ್ಲಿ ೩೬ ಮೂಲ ತತ್ವಗ

ಸ್ತ್ರೀ–ಪುರುಷರಿಗೆ ಸಮಾನವಾದ ಮೋಕ್ಷಾಧಿಕಾರವಿರುವು
ಚತುರ್ವರ್ಣದವರು ಒಂದೇ ಜನ್ಮದಲ್ಲಿ ಮೋಕ್ಷವನ್ನು ಪಡೆಯುವ ಧಾರ್ಮಿ
ಸೌಲಭ್ಯವನ್ನು ಕಲ್ಪಿಸುವುದು, ವೇದೋಕ್ತಗಳಾದರೂ ಯಜ್ಞ ಯಾ
ಗಳಲ್ಲಾಗುವ ಪ್ರಾಣಿಹಿಂಸೆಯನ್ನು ಎಲ್ಲಪ್ರಕಾರದಿಂದಲೂ ಸರ್ವಪ್ರಯ
ಗಳಿಂದಲೂ ನಿಷೇಧಿಸುವುದು, ಜಗತ್ತು ಕರ್ಮಪ್ರಧಾನವಾದುದರಿಂ
ಸತ್‌ಕರ್ಮಗಳು ಜಗತ್ತಿನ ಉನ್ನತಿಗೆ ಕಾರಣವಾಗಿರುವುದರಿಂದ, ಜನ
ಮಾಡುವ ಉದ್ಯೋಗಗಳಲ್ಲಿ ತರ ತಮ ಭಾವವನ್ನು ಗಮನಿಸದೆ ಆ ಉದ್ಯೋ
ಗಳನ್ನು "ಕಾಯಕವೇ ಕೈಲಾಸ" (Duty is God) ಎಂಬ ಭಾ
ಯಿಂದ ಆಚರಿಸುವುದು, ಜಗತ್ತು, ಹಲವು ವೇದಾಂತಿಗಳು ಹೇಳುವ
ದುಃಖವೆಂದು ಭಾವಿಸದೆ, ಸುಖರೂಪವೆಂದೂ ಲೋಕದ ಆಗುಹೋಗುಗ
ಶಿವನಲೀಲೆಯೆಂದೂ ತಿಳಿಯುವುದು. ಭಗವಂತನ ಮಹಿಮೆಯು ಸ್ಥಾ
ವಸ್ತುಗಳಿಗಿಂತ ಜಂಗಮ ಪ್ರಾಣಿಗಳಲ್ಲಿ ವಿಶೇಷವಾಗಿದೆಯೆಂದು ಭಾ
ಲಿಂಗ–ಜಂಗಮ ಸಂಯೋಗವನ್ನು ಕಲ್ಪಿಸುವುದು, ಲಿಂಗಮುಖ ಜಂಗ
ವೆಂದು ಭಾವಿಸುವುದು, ಕೇವಲ ಶಬ್ದಪ್ರಮಾಣಕ್ಕಾಗಲಿ, ಶುದ್ಧ ತ
ಕ್ಕಾಗಲಿ, ಪ್ರಾಧಾನ್ಯವನ್ನು ಕೊಡದೆ ಅನುಭಾವ ಮತ್ತು ವೇದಶಾ
ಇವೆರಡಕ್ಕೂ ಸಾಮಂಜಸ್ಯವನ್ನು ಕಲ್ಪಿಸುವುದು ಇತ್ಯಾದಿ ವಿಷಯಗ
ವೀರಶೈವಮತದ ವೈಶಿಷ್ಟ್ಯಗಳೆಂದು ನಾವು ತಿಳಿಯಬಹುದಾಗಿದೆ.

## ವೀರಶೈವ ವಿಭೂತಿಗಳು

ಹಿಂದೂ ಧರ್ಮಕ್ಕೆ ಹೇಗೆ ಒಬ್ಬ ಮೂಲಪುರುಷನಿಲ್ಲವೋ, ಜೈನ ಧರ್ಮವು ಹೇಗೆ ಒಂದು ವ್ಯಕ್ತಿಯಿಂದ ಆಗಿಲ್ಲವೋ ಹಾಗೆಯೇ ವೀರಶೈವ ಧರ್ಮವು ಯಾವನೊಬ್ಬ ವಿಭೂತಿಯಿಂದಲೂ ಒಂದು ದಿನ ನಿರ್ಮಾಣವಾದುದಲ್ಲ. H ಹಲವರು ತಿಳಿದಿರುವಂತೆ ಶ್ರೀ ಬಸವೇಶ್ವರನು ಈ ಮತದ ಸ್ಥಾಪಕನೆಂದು ಭಾವಿಸುವುದಾಗಲಿ, ಭಿನ್ನಕಾಲೀನರಾದ ಶ್ರೀ ಪಂಚಾಚಾರ್ಯರು ಈ ಮತವನ್ನು ಒಟ್ಟುಗೂಡಿ ನಿರ್ಮಿಸಿದರೆಂಬುದಾಗಲಿ

---

H ವೀರಶೈವಮತದ ಮೂಲಪುರುಷರು ಯಾರೆಂಬುದು ಇದುವರೆಗೆ ಚರಿತ್ರೆಯಿಂದ ಸಿದ್ಧವಾಗಿಲ್ಲ. ಶೈವಧರ್ಮವು ವೇದಪೂರ್ವವೆಂಬುದು ಹರಪ್ಪ ಮೊಹೆಂಜದಾರೋ ಸಂಶೋಧನೆಗಳಿಂದಲೂ ಈಜಿಪ್ಟ್ ದೇಶದ ಚರಿತ್ರೆ ಯಿಂದಲೂ ತಿಳಿದು ಬಂದಿದೆ. ಆದಕಾರಣ ಶೈವ ಭೇದವಾದ ವೀರಶೈವದ ಚರಿತ್ರೆಯೂ ಅಷ್ಟೇ ಹಿಂದೆ ಹೋಗುವುದು ಅನಿವಾರ್ಯವಾಗಿದೆ. ಪ್ರಮಾಣ ಗಳಿಲ್ಲದೆ ಚರಿತ್ರೆಯು ಸಿದ್ಧಗೊಳ್ಳುವುದಿಲ್ಲ. ಮತ್ತೆ ಕೆಲವರು ಹೇಳುವಂತೆ ಶಿವನೇ ಈ ಮತದ ಸ್ಥಾಪಕನೆಂದು ಹೇಳುವುದಾದರೂ ಯುಕ್ತಿಪೂರ್ವಕ ವಾದುದಲ್ಲ. ವೇದವು ಅಪೌರುಷೇಯವೆಂದು ಹೇಳುವಲ್ಲಿ ಯಾವ ಅರ್ಥ ವುಂಟೋ ಅದೇ ಅರ್ಥವು 'ಶಿವನು ವೀರಶೈವ ಮತದ ಸ್ಥಾಪಕನು' ಎಂದು ಹೇಳುವುದರಲ್ಲಿಯೂ ಉಂಟು. ಶ್ರೀ ಪಂಚಾಚಾರ್ಯರಾಗಲಿ, ಶ್ರೀ ಬಸ ವೇಶ್ವರನಾಗಲಿ ವೀರಶೈವ ಮತದ ಸ್ಥಾಪಕರೆಂದು ವಾದಿಸುವುದು ಕೇವಲ ಶ್ರದ್ಧಾಪ್ರಧಾನವಾದ ಭಾವುಕಗುಣದಿಂದ ಕೂಡಿದ–ಇತಿಹಾಸದಿಂದ ಸಿದ್ಧ ವಾಗದ ಕೇವಲ ಧಾರ್ಮಿಕನಂಬಿಕೆಯು ಮಾತ್ರ. ವೀರಶೈವ ಮತವು ಪಂಚಾಚಾರ್ಯರಿಗಿಂತಲೂ, ಬಸವೇಶ್ವರನಿಗಿಂತಲೂ ಪೂರ್ವದ್ದೆಂದು ಪ್ರಾಜ್ಞರ ಅಭಿಪ್ರಾಯ. ಈ ಅಭಿಪ್ರಾಯವನ್ನು ನಾವು ಹಲವೆಡೆಗಳಲ್ಲಿ ಹೇಳಿದಂತೆ ಇಲ್ಲಿಯೂ ಹೇಳಲಿಚ್ಛಿಸುತ್ತೇವೆ. ಈ ವಿಷಯವು ಹಲವರಿಗೆ ಅಪ್ರಿಯವಾದರೂ ಇದು–ಸತ್ಯಪೂರ್ಣವಾದುದೆಂದು ನಾವು ನಂಬಿರುವುದ ರಿಂದ ಇದು ನಮಗೆ ಪ್ರಿಯವಾದ ವಿಷಯವಾಗಿದೆ. 'ಅಪ್ರಿಯಮಪಿ ಸತ್ಯಂ ಬ್ರೂಯಾತ್' ಎಂಬುದು ನಮ್ಮ ಸಿದ್ಧಾಂತ.

ವೀರಶೈವ ಪ್ರಾಚೀನ ಗ್ರಂಥಗಳನ್ನು ಓದಿದವರಿಗೆ ಪಂಚಾಚಾ
ರಾಗಲಿ, ಬಸವಾದಿ ಪ್ರಥಮರಾಗಲಿ ಸಮಾನವಾದ ಪೂಜ್ಯತೆಗೆ ಅರ್ಹ
ತಿಳಿದುಬರುತ್ತದೆ. ಈಗ ಹಲವರು ವಾದಿಸುತ್ತಿರುವಂತೆ 'ಆಚಾರ್ಯರು ಹೆ
ಪ್ರಮಥರು ಕಡಿಮೆ, ಪ್ರಮಥರು ಹೆಚ್ಚು ಆಚಾರ್ಯರು ಕಡಿಮೆ' ಎ
ಭಾವನೆಯು ಭ್ರಮಾತ್ಮಕವಾದುದು; ಅವಿಚಾರ ರಮಣೀಯವಾದು
ಶ್ರೀ ತೋಂಟದ ಸಿದ್ಧೇಶ್ವರನು ಹೇಳುವಂತೆ–ಚಿನ್ನದ ಘಟ್ಟಿಯೊಂದು ಹ
ಆಭರಣಗಳಾದಂತೆ–ಸಚ್ಚಿದಾನಂದ ಸ್ವರೂಪನಾದ ಶಿವನ ಚೈತನ್ಯವೇ ರೇ
ಕಾದಿ ಆಚಾರ್ಯರಾಗಿಯೂ, ಬಸವಾದಿ ಪ್ರಮಥರಾಗಿಯೂ, ಹರಿಹ
ಕವಿಗಳಾಗಿಯೂ ಅವತರಿಸಿ ವೀರಶೈವ ಧರ್ಮವನ್ನು ಉದ್ಧಾರಮ
ತೆಂದು ಭಾವಿಸುವುದು ನ್ಯಾಯವೂ ಸುಸಂಸ್ಕೃತವೂ ಆದ ಭಾವನೆಯೆ
ನಾವು ತಿಳಿಯುತ್ತೇವೆ. ಈ ಅರ್ಥವನ್ನು ಶ್ರೀ ನಿಜಗುಣ ಶಿವಯೋಗಿ
ಪುರಾತನರ ತ್ರಿವಿಧಿಯಲ್ಲಿ "ಮಿಸುನಿತೊಡವೆನಿಸಿ ಬಹುವೆಸರುದಳೆದು
ಎಂದು ಹೇಳಿದ್ದಾನೆ. ಈ ಕಾರಣಗಳಿಂದ ನಿಜವಾದ ವೀರಶೈವನಾದ
ಪ್ರಾಚೀನರಾದ ಆಚಾರ್ಯರನ್ನೂ, ಪ್ರಮಥರನ್ನೂ, ವಿಭೂತಿಗಳನ್ನು
ಸಮಾನವಾದ ಭಕ್ತಿ ಗೌರವಗಳಿಂದ ಕಂಡು ಅವರು ಉಪದೇಶಿಸಿದಂತೆ–ನಡೆ
ತಾನು ಧನ್ಯನಾಗುವುದು ಯುಕ್ತವೆಂದು ತಿಳಿಯುತ್ತಾನೆ. ನಮ್ಮ ಹಿರಿಯ
ಹೀಗೆ ನಡೆದಿರುವರೆಂಬುದಕ್ಕೆ ಕಂಗೊಳಿಸುತ್ತಿರುವ ಅಸಂಖ್ಯಾತ ಪ
ಗ್ರಂಥಗಳೇ ಆಧಾರವಾಗಿವೆ.

## ನಮ್ಮ ಪ್ರಾಚೀನ ಸಂಪತ್ತು

ಪ್ರಾಚೀನ ಶತಮಾನಗಳಲ್ಲಿ ವೀರಶೈವಮತವು ವಿಶಾಲ ಭಾರತ

I ವೀರಶೈವ ಧರ್ಮದ ಪ್ರಾಚೀನತೆಯನ್ನು ಸಿದ್ಧ ಮಾಡಲು ಇನ್ನೂ
ಹೆಚ್ಚಿನ ಸಂಶೋಧನೆ ನಡೆಯಬೇಕಾಗಿದೆ. ೨೮ ಶಿವಾಗಮಗಳು ಮೊದಲು ಪ್ರ
ಟವಾಗಬೇಕು. ಇದಕ್ಕಾಗಿ 'ಅಖಿಲ ಭಾರತ ವೀರಶೈವ ಸಂಶೋಧನಾಲಯ
ಏರ್ಪಡುವುದು ಕೂಡ ಅಗತ್ಯವಾಗಿದೆ. ಪ್ರಾಚೀನ ಗ್ರಂಥಗಳೂ ಶಾಸನಗಳೂ
ಪ್ರಕಟವಾದಲ್ಲದೆ ಚರಿತ್ರೆಯು ನಿರ್ಣಯವಾಗುವುದು ಹೇಗೆ?

ತನ್ನ ಸುಪ್ರಭೆಯನ್ನು ಬೀರಲು ಹಲವು ಕಾರಣಗಳಿದ್ದುವು. ಅಂದು ಕರ್ಣಾಟಕಾಂಧ್ರದೇಶಗಳಲ್ಲಿ ಹಲವು ವೀರಶೈವ ರಾಜಮನೆತನಗಳು ತಲೆಯೆತ್ತಿದ್ದವು. ಕೆಳದಿ, ಬಿಳಗಿ, ಸ್ವಾದಿ, ಕೊಡಗು, ಬಿಜ್ಜಾವರ, ಕಿತ್ತೂರು ಮೊದಲಾದ ರಾಜ್ಯಗಳು ಲಿಂಗವಂತ ಅರಸರಿಂದ ಕಂಗೊಳಿಸುತ್ತಿದ್ದವು. ಆಂಧ್ರದೇಶದ 'ಓರುಂಗಲ್ಲು' ಎಂಬಲ್ಲಿ ವೀರಶೈವರಿಂದ ಒಂದು ದೊಡ್ಡ ಸಾಮ್ರಾಜ್ಯ (ಕಾಕತೀಯ)ವೇ ಸ್ಥಾಪನೆಯಾಗಿ ವೀರಶೈವ ಧರ್ಮಕ್ಕೆ ಹೆಚ್ಚಿನ ಮನ್ನಣೆ ಪ್ರಾಪ್ತವಾಯಿತು. ವಿಜಯನಗರದಲ್ಲಿ ಪ್ರೌಢದೇವಾರಾಯ ಮೊದಲಾದವರು ವೀರಶೈವ ಧರ್ಮವನ್ನು ಸ್ವೀಕರಿಸಿದುದು ಪ್ರಸಿದ್ಧ ವಿಷಯವೇ ಆಗಿದೆ.

ಕಾಲಚುರ್ಯರು, ಬಲ್ಲಾಳರು, ವಿಜಯನಗರದವರು ಎಂಬೀ ಅರಸರ ಕಾಲದಲ್ಲಿ ವೀರಶೈವ ರಾಜಕಾರಣಪಟುಗಳು ಪ್ರಮುಖವಾದ ಸ್ಥಾನಗಳನ್ನು ಆಕ್ರಮಿಸಿದ್ದರು. ಬಸವೇಶ್ವರನು ಬಿಜ್ಜಳನ ಮಂತ್ರಿಯಾಗಿದ್ದುದೂ, ಗೌರಪ ಢಣಾಯಕ,ಕೆರೆಯ ಪದ್ಮರಸರು ಬಲ್ಲಾಳರಲ್ಲಿ ಮಂತ್ರಿಗಳಾಗಿದ್ದುದೂ, ಬಸವಯ್ಯ ದಂಡನಾಯಕನು ಬಲ್ಲಾಳ ರಾಜ್ಯದಲ್ಲಿಯೂ, ಕೇಶಿರಾಜ ದಂಡನಾಯಕನು ಚಾಳುಕ್ಯರಾಜ್ಯದಲ್ಲಿಯೂ, ಲಕ್ಕಣಾಮಾತ್ಯ ಮತ್ತು ಜಕ್ಕಣಾರ್ಯರು ವಿಜಯನಗರದ ಅರಸರಲ್ಲಿಯೂಪ್ರಮುಖ ಸೈನ್ಯಾಧಿಪತಿಗಳಾಗಿದ್ದುದೂ ಇಲ್ಲಿ ನಾವು ನೆನಪಿಡತಕ್ಕಸಂಗತಿ. ದಕ್ಷಿಣ ಹಿಂದೂಸ್ಥಾನದ ಸಾಮ್ರಾಟನಾಗಿದ್ದ ಪ್ರೌಢದೇವರಾಯ ವೀರಶೈವದೀಕ್ಷೆಯನ್ನು ಸ್ವೀಕರಿಸಿದನೆಂದು ಚರಿತ್ರೆಯಿಂದ ತಿಳಿದುಬಂದಿದೆ. ಈತನ ಆಶ್ರಯದಲ್ಲಿ ವೀರಶೈವ ಧರ್ಮವು ಬಹಳವಾಗಿ ತಲೆ ಎತ್ತಿನಿಂತಿತು. ಕೆಳದಿಯ ಅರಸರು ವೀರಶೈವರ ಉದ್ಧಾರಕ್ಕೆ ಬಹಳವಾಗಿ ಹೆಣಗಾಡಿದರು. ಈ ಬಗೆಯಾಗಿ ಪ್ರಾಚೀನ ಕಾಲದಲ್ಲಿ ವೀರಶೈವ ರಾಜಕಾರಣಪಟುಗಳು ತಲೆಯೆತ್ತಿ ಈ ಧರ್ಮಕ್ಕೆ ನಾನಾಮುಖವಾಗಿ ಸಹಾಯ ಮಾಡಿರುವುದರಿಂದಲೇ ಈ ಸಂಸ್ಕೃತಿಯು ಮುಂದೆ ಬಂದು ತುಂಬ ವಿಖ್ಯಾತಿಯನ್ನು ಪಡೆಯಿತು. 'ನಿರಾಶ್ರಯಾ ನಶೋಭಂತೇ ಪಂಡಿತಾ ವನಿತಾ ಲತಾಃ' ಎಂಬ ಮಾತು ಇಲ್ಲಿ ಸ್ಮರಣಾರ್ಹವಾಗಿವೆ. ಒಟ್ಟಿನಲ್ಲಿ ವೀರಶೈವ ಸಮಾಜವು ಉತ್ತಮ ಸಂಸ್ಕೃತಿಯಿಂದ ಕೂಡಿದೆ; ಸಿದ್ಧಾಂತವು ಉಜ್ವಲವಾಗಿದೆ; ಸಾಹಿತ್ಯವು ಪ್ರಭಾವಪೂರ್ಣವಾಗಿದೆ ಎಂದು ನಾವು ಧೈರ್ಯವಾಗಿ ಹೇಳಬಹುದು.

# ವೀರಶೈವರ ಕೆಲವು ಪಾರಿಭಾಷಿಕ ಶಬ್ದಗಳು

ಅರುಹಿನ ಕುರುಹು–ಇಷ್ಟಲಿಂಗ

ಅನಿಮಿಷ ದೇವ–ಪ್ರಭುದೇವರ ಗುರು, [ಇವನ ಸ್ಥಲ ಪಟ್ಟದ ಕಲ್ಲ ಇವನ ತಪೋಭೂಮಿ ಅನಿಮಿಷಯ್ಯನ ಕೊಪ್ಪಲು, ಶಿವಮೊ ಜಿಲ್ಲೆಯಲ್ಲಿದೆ]

ಅರಿತರೆ ಶರಣ ಮರೆತರೆ ಮಾನವ–ತಿಳಿವಿನ ನಡೆಯಿದ್ದರೆ ಶರಣನಾಗುವ ಅಜ್ಞಾನದ ನಡೆಯಿದ್ದರೆ ಮಾನವನೆನಿಸುವನು

ಆಗಮಗಳು–ಕಾಮಿಕಾದಿ ವಾತುಲ ಪರ್ಯಂತ ೨೮ ಶಿವಾಗಮಗಳು

ಆತ್ಮತ್ರಯ–ಜೀವಾತ್ಮ, ಪರಮಾತ್ಮ, ಅಂತರಾತ್ಮ

ಆಯತ–ಕಾಯವು ಸಕಲಲಿಂಗವಾಗುವುದು

ಅಂಗೈಲಿ ಲಿಂಗ, ಮುಂಗೈಲಿ ಜೋಳಿಗೆ, ಹ್ಯಾಂಗೆ ಅನ್ನೋದೇಕಪ್ಪ–ಲಿಂಗಧಾರಿಯಾದವನಿಗೆ ಭಿಕ್ಷೆ ಹಕ್ಕು ಇರುವುದರಿಂದ ಕೊರತೆಯೇಕೆ ಎಂಬ ಭಾವ

ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರು–ಈ ಲೋಕದಲ್ಲಿ ಅರ್ಹರಾದವ ಪರಲೋಕದಲ್ಲಿಯೂ ಯೋಗ್ಯರೆನಿಸುವರು

ಉದ್ಧರಣೆಗಳು–ವೀರಶೈವ ತತ್ವಗಳನ್ನು ತಿಳಿವ ಸಾಧನಗಳು

ಕುಮಾರ–ಸ್ಕಂದ, ಷಣ್ಮುಖ, ಆರ್ಮೊಗ, ಸೇನಾನಿ

ಕೈಲಾಸ ಸಮಾರಾಧನೆ–ಶರಣರು ಸತ್ತ ೧೧ ದಿನಕ್ಕೆ ಮಾಡುವ ತಿಥಿ.

ಕೈಘಟ್ಟಿ–ವಿಭೂತಿ. (ತಿರುನೀರು–ಇದು ತಮಿಳುನಾಡು ವೀರಶೈವರಲ್ಲಿ ಬಳ ಯಲ್ಲಿರುವ ಶಬ್ದ).

ಕ್ರಿಯೆಬಟ್ಟಲು–ಶರಣರು ಲಿಂಗೋದಕ ಸ್ವೀಕರಿಸುವ ಪಾತ್ರೆ

ಕಾಯಕವೇ ಕೈಲಾಸ–ಕೆಲಸ ಮಾಡುವವನೇ ಶಿವಕೃಪೆಗೆ ಪಾತ್ರನು

ಕಾಂಡತ್ರಯ–ಭಕ್ತಿ, ಜ್ಞಾನ, ಕರ್ಮ ಕಾಂಡಗಳು

ಗಣಾಚಾರ–ಲಿಂಗವಂತರ ನಡೆವಳಿಕೆಗಳು

ಗದ್ದಿಗೆ–ಶರಣರ ಅಥವಾ ಶಿವಯೋಗಿಗಳ ಸಮಾಧಿ

ಗಣತಿಂಥಿಣಿ–ಶರಣರ ಗುಂಪು

ಗಣಾರಾಧನೆ–ಗಣಪರ್ವ–ಜಂಗಮರ ತೃಪ್ತಿಗಾಗಿ ಮಾಡುವ ಭೋಜನಕೂಟ

ಚರ–ಜಂಗಮ [ಚರಮೂರ್ತಿ ಪಟ್ಟ.]

ಜೈನ ಬಿಟ್ಟು ಜಂಗಮನಾದ–ಜೈನಧರ್ಮದಿಂದ ಶಿವಧರ್ಮಕ್ಕೆ ಬಂದವ

ಜಂಗಮವಾಡಿ–ಕಾಶಿ,ರಾಮೇಶ್ವರ,ಪ್ರಯಾಗಗಳಲ್ಲಿರುವ ಜಂಗಮರ ಮಠಗಳು

ಜೈನ ಬಣಜಿಗ–ವೀರಶೈವ ಧರ್ಮ ಸ್ವೀಕರಿಸಿದ ಜೈನವ್ಯಾಪಾರಿ

ತೋರಗದ್ದಿಗೆ–ಶರಣರ ಹೆಸರಿನಲ್ಲಿ ಏರ್ಪಡಿಸಿದ ಗದ್ದುಗೆಗಳು

ತ್ರಿಪುಂಡ್ರ–ಮೂರೆಳೆ ವಿಭೂತಿ

ದುಡ್ಡಿಗೊಬ್ಬ ಅಯ್ಯ, ಮುದ್ದೆಗೊಂದು ಲಿಂಗ–ಲಿಂಗಧಾರಣಕ್ಕೆ ಹಾದಿ ಸುಲಭವಾಗಿದೆ ಎಂದು ಇದರ ಅರ್ಥ

ದೇಹಾರ–ನೈವೇದ್ಯ

ಧೂಪಾರ್ತಿ–ಸಾಂಬ್ರಾಣಿ ಮೊದಲಾದ ಸುಗಂಧ ದ್ರವ್ಯ ಹಾಕುವ ಬೆಂಕಿಯ ಕೆಂಡವನ್ನಿಡುವ ಪಾತ್ರೆ

ಧೂಪದ ಕೊಡ–ಲಿಂಗಾರ್ಚನೆಗೆ ಸುಗಂಧವನ್ನು ಒದಗಿಸುವ ವಸ್ತುವಿಶೇಷ

ನಂದಿಕೇಶ್ವರ–ಕೈಲಾಸದ ಪ್ರಮಥ,ಅನಿಮಿಷಯ್ಯನ ಗುರು ಮತ್ತು

[ಪಟ್ಟದ ಕಲ್ಲು–ಬಾದಾಮಿ ಮಧ್ಯದ ಒಂದು ಊರು.]

ನಾಯನಾರ್–ತಮಿಳು ನಾಡಿನ ಶರಣರು

ಪವಾಡ–ಮಹಿಮೆ,ದೃಷ್ಟ

ಪರ–ಪರಮಾತ್ಮನು ಎಲ್ಲಕ್ಕೂ ದೊಡ್ಡವನು

ಪಂಚ ಸಮಯ–ಮುರುಘ, ಕುಮಾರ, ಕಂಪಿನ, ಸಂಪಾದನೆ, ಚೀಲಾಳ ಎಂಬ ವಿರಕ್ತರ ಐದು ಭೇದಗಳು

ಪ್ರಸಾದದ ಬಟ್ಟಲು–ಶರಣರು ಊಟ ಮಾಡುವ ತಟ್ಟೆ

ಪಂಚವರ್ಣ–ವೀರಶೈವರ ಒಂದು ಗೋತ್ರದ ಹೆಸರು

ಪಡ್ಡಿವಡಿ–ಒಂದು ಗೋತ್ರದ ಹೆಸರು

ಪಟ್ಟದ ದೇವರು–ಮಠಾಧಿಪತಿ, ಉಪಾಚಾರ್ಯರು

ಪಾದಪೂಜೆ–ಲಿಂಗವಂತರು ಗುರುಪಾದವನ್ನು ಪೂಜಿಸುವ ಕಟ್ಟಳೆ.

ಪ್ರಸಾದಿ–ಲಿಂಗಾರ್ಪಿತವಾದುದನ್ನು ಮಾತ್ರ ಸೇವಿಸುವವನು

ಬುದ್ಧಿಅವರು–ಸ್ವಾಮಿಗಳು, ಪೂಜಾರ್ಹರು
ಬುಡಕಟ್ಟು–ಮನೆತನ, ವಂಶ
ಭೃತ್ಯಾಚಾರ–ಎನಗಿಂತ ಕಿರಿಯರಿಲ್ಲ ಎಂಬ ಭಾವನೆ
ಮಳಿಬಗೆ–ಒಂದು ಗೋತ್ರದ ಹೆಸರು
ಮುರುಘರು–ತಮಿಳು ನಾಡಿನ ಓರ್ವ ಶಿವಶರಣರು
ಮರಣವೇ ಮಹಾನವಮಿ–ಮರಣವನ್ನು ಹಬ್ಬದಂತೆ ತಿಳಿಯುವುದು.
ಮಹಲಿಂಗ ಕಪನಿ–ವಿರಕ್ತರು ಹಾಕಿಕೊಳ್ಳುವ ಕಾವಿಯ ನಿಲುವಂಗಿ.
ಮಸಿಯೂಟ–ಮದುವೆ ಕಾಲದಲ್ಲಿನ ಬೀಗರ ಊಟ
ಮುತ್ತಿನ ಕಂತೆ–ಒಂದು ಗೋತ್ರದ ಹೆಸರು
ಲಿಂಗಾಯತ–ಲಿಂಗವಂತ, ಲಿಂಗಭಕ್ತ
ಲಿಂಗಾಯತ್ತ–ಒಂದು ದೀಕ್ಷಾಸಂಸ್ಕಾರ
ಲಿಂಗಾರ್ಪಿತ–ಶಿವನಿಗೆ ನೈವೇದ್ಯ ಮಾಡಿದುದು
ಲಿಂಗಭೋಗೋಪಭೋಗಿ–ವೀರಶೈವ, ಶರಣ, ಸರ್ವಾಂಗ ಲಿಂಗಿ
ಲಿಂಗಮುಖಜಂಗಮ–ಲಿಂಗದತೃಪ್ತಿ ಜಂಗಮನ ತೃಪ್ತಿಯಿಂದ
ಲಿಂಗದ ಅಡಿ ಸೇರು ಶಿಟ್ಟ ಸಹವಾಸ ಸೇರು–ಪರದಲ್ಲಿ ಶಿವನ ಪಾದ, ಇಹ
ಜ್ಞಾಣರ ಸಹವಾಸ ಮುಖ್ಯ
ಲಿಂಗ ಬಿಟ್ಟು ಮಂಗನಾದ–ಲಿಂಗಧಾರಣ ಬಿಟ್ಟು ಅವಿವೇಕಿಯಾದ ಎಂ
ಅರ್ಥ
ವೀರಶೈವ–ಲಿಂಗವಂತ, ಲಿಂಗಾಯತ
ವೃಷಭಮುಖ–ಒಬ್ಬ ಪ್ರಥಮನ ಹೆಸರು
ವಾರದ ಕಟ್ಟಲೆ–ಜಂಗಮರು ವಾರಕ್ಕೊಂದು ಸಲ ಭಕ್ತರ ಮನೆಗೆ ಊಟ
ಹೋಗಿಬರುವ ಪದ್ಧತಿ
ಶಿವಾಚಾರ–ಶಿವಸಂಬಂಧವಾದ ನಡೆವಳಿಕೆಗಳು
ಶಿವಯೋಗಿ–ಶಿವಸಂಬಂಧವಾದ ಯೋಗನಿಷ್ಠನು
ಶಿವೋಹಂ–ನಾನೇ ಶಿವನೆಂಬ ಭಾವ
ಶರಣಸತಿ ಲಿಂಗಪತಿ–ಶರಣನು ಹೆಣ್ಣು, ಶಿವನು ಗಂಡು ಎಂಬ ಭಾವನೆ
ಶರಣನ ಗುಟ್ಟು ಮರಣದಲ್ಲಿ–ಶಿವಭಕ್ತನ ನಿಷ್ಠೆ ಅವನ ಮರಣದಲ್ಲಿ ತಿಳಿವು

ಶೈವಭೇದಗಳು–ವೀರಶೈವ, ಪಾಶುಪತ, ಕಳಾಮುಖ, ಲಾಕುಳ, ಕಾಶ್ಮೀರ, ದ್ರಾವಿಡ ಶೈವಗಳು ಎಂಬ ಏಳು ಭಾಗಗಳು

ಷಟ್‌ಶಕ್ತಿಗಳು–ಕ್ರಿಯಾ, ಜ್ಞಾನ, ಇಚ್ಛಾ, ಆದಿ, ಪರಾಜಿತ್ ಎಂಬ ಆರು ಶಕ್ತಿಗಳು

ಸಪ್ತಶೈವರು–ಸಾಮಾನ್ಯ, ಮಹಾ, ಅನು, ಅವಾಂತರ, ಅಂತ್ಯ, ಪ್ರವರ, ಆದಿಶೈವ ಇವುಗಳು ಏಳು ಭೇದಗಳು

ಸನ್ನಿಹಿತ–ಪ್ರಾಣವು ಸಕಲ ನಿಃಕಲ ಲಿಂಗವಾಗುವಿಕೆ

ಸ್ವಯ–ತನ್ನ ತಾನರಿವುದು

ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ–ಪಂಚಭೂತಗಳ ವಸ್ತುಗಳಿಗೆ ನಾಶವಿದೆ–ಆತ್ಮ ತತ್ವಕ್ಕೆ ಅಳಿವಿಲ್ಲ ಎಂದು ತಾತ್ಪರ್ಯ

ಸಾವಿರ ಕುಲಾಚಾರ ಸೇರಿ–ಒಂದು ಶಿವಾಚಾರ–ಹಲವಾರು ಕುಲದವರು ಶಿವದೀಕ್ಷೆಯಿಂದ ಶುದ್ಧರಾಗಿ ಲಿಂಗವಂತರಾದರು

ಹಾವಿಗೆ–ಗುರುಗಳ ಪಾದರಕ್ಷೆ (ಮರದಿಂದ ಮಾಡಿದವು)

ಅಗ್ಗಣಿ-ಅಗ್ಘವಣಿ-ಅರ್ಘ್ಯಮಣಿ-ಪೂಜಾರ್ಹವಾದ ನೀರು, ಮಡಿಯಿಂದ ಶಿವಪೂಜೆಗಾಗಿ ಸಿದ್ಧಪಡಿಸಿದ ನೀರು

ಅಂಗ–ಶುದ್ಧ ಜೀವ (ಅಂಗ ಅಂದರೆ ದೇಹ, ವಸ್ತುವಿನ ಒಂದು ಭಾಗ ಎಂಬ ಅರ್ಥಗಳು ಅನ್ಯತ್ರ ಉಂಟು)

ಅಂಗಸ್ಥಲಗಳು–ವೀರಶೈವರ ೧೦೧ಸ್ಥಲಗಳಲ್ಲಿ ಪಿಂಡಾದಿಯಾದ ೪೪ ಸ್ಥಲಗಳು

ಶಿವಾನುಭಾವ–ಜೀವನಿಗೆ ಶಿವಸಂಬಂಧವಾಗಿ ಉಂಟಾಗುವ ತಿಳಿವಳಿಕೆ (ಶಿವಸ್ಯ ಅನುಭಾವಃ ಶಿವಾನುಭಾವಃ)

ಅರ್ಪಣ–ಊಟ, ಪ್ರಸಾದ ಸ್ವೀಕಾರ

ಅನುಗ್ರಹ–ಗುರುಗಳ ಉಪದೇಶ (ಕೃಪೆ ಎಂಬರ್ಥ ಅನ್ಯತ್ರವಿದೆ)

ಅಡ್ಡಣಿಗೆ–ಊಟದ ತಟ್ಟೆಗೆ ನೆರವಾಗಿ ಇಟ್ಟುಕೊಳ್ಳುವ ಸಾಧನ. ತೆವಟಣಿಗೆ, ಕಾಲುಮಣೆ

ಅಪ್ರಾಕೃತ–ವೀರಶೈವ ದೀಕ್ಷೆ ಪಡೆದವ, ಶಿವಸೃಷ್ಟಿಗೆ ಒಳಪಟ್ಟವ

ಅಕ್ಕಿಪಡಿ–ಜಂಗಮರು ಶಿವರಾತ್ರಿ, ಸೋಮವಾರಗಳಲ್ಲಿ ಭಕ್ತರಿಂದ ಕೈಗೊಳ್ಳುವ ಧನಧಾನ್ಯಗಳು

ಅಷ್ಟಾವರಣ–ಎಂಟು ಆವರಣಗಳು(ಗುರು,ಲಿಂಗ, ಜಂಗಮ, ಪಾದೋದಕ, ಪ್ರಸಾದ, ಭಸ್ಮ, ರುದ್ರಾಕ್ಷ, ಮಂತ್ರ)

ಅನುಭವಮಂಟಪ–ಕಲ್ಯಾಣದಲ್ಲಿ ಬಸವಣ್ಣನು ಸ್ಥಾಪಿಸಿದ ಶಿವಾನುಭವ ಮಂಟಪ

ಅರುವತ್ತುಮೂವರು–ತಮಿಳು ನಾಡಿನ ೬೩ ಮಂದಿ ಪುರಾತನರು, ಪೆರಿಯ ಪುರಾಣದಲ್ಲಿ ಅಭಿವರ್ಣಿತರು, ಬಸವಾದಿಗಳಿಗೂ ಪೂಜ್ಯರು

ಅಮರ ಗಣಂಗಳು–ಜನನ ಮರಣಾತೀತರು, ಕೈಲಾಸದ ಪ್ರಮಥರು, ಇವರ ಸಂಖ್ಯೆ ೭೭೦

ಅರುವತ್ತು ನಾಲ್ಕು ಶೀಲಗಳು – ವೀರಶೈವರಲ್ಲಿ ಬಳಕೆಯಲ್ಲಿರುವ ೬೪ ಧಾರ್ಮಿಕ ಕಟ್ಟಲೆಗಳು

ಅವಸ್ಥೆಗಳು–ಜಾಗ್ರತ್, ಸ್ವಪ್ನ, ಸುಷುಪ್ತಿ, ತುರ್ಯ, ತುರ್ಯಾತೀತ ಎಂಬ ಐದು ಅವಸ್ಥೆಗಳು

ಆದ್ಯರು–ತಮಿಳುನಾಡಿನ ಶಿವಶರಣರು,ಅರುವತ್ತು ಮೂವರು ಪುರಾತನರು

ಆರಾಧ್ಯರು–ಪೂಜ್ಯರು, ಜಂಗಮರು (ಆರಾಧಿತುಂ ಯೋಗ್ಯಃ ಆರಾಧ್ಯಃ)

ಆಧಾರದ ಪೆಟ್ಟಿಗೆ–ಲಿಂಗಪೂಜಾದ್ರವ್ಯಗಳನ್ನು ಇಡುವ ಪವಿತ್ರ ಪೆಟ್ಟಿಗೆ

ಆರೋಗಣೆ–ಊಟ,ಭೋಜನ, ಪ್ರಸಾದ ಸ್ವೀಕಾರ

ಇಷ್ಟಲಿಂಗ–ವೀರಶೈವರು ತಮ್ಮ ಎದೆಯಮೇಲೆ ಧರಿಸಿಕೊಂಡು ದಿನವೂ ಪೂಜಿಸುವ ಪೂಜ್ಯವಸ್ತು

ಉಪದೇಶ–ಗುರುವು ಶಿಷ್ಯನ ಕಿವಿಯಲ್ಲಿ ಮಂತ್ರವನ್ನು ಹೇಳುವುದು

ಹುದುಗ ಪಾವಡ–ಕರಡಿಗೆಯಲ್ಲಿ ಇಷ್ಟಲಿಂಗವನ್ನು ಮುಚ್ಚಿಡುವ ಮಡಿಯ ವಸ್ತ್ರ

ಒಂಭತ್ತು ಪಣ–ವೀರಶೈವರ ಗುರುತ್ವ ಒಪ್ಪದ ಕುಲಾಚಾರದವರು

ಎಡೆಮಾಡು–ಊಟಕ್ಕೆಬಡಿಸು, ದೇವರಿಗೆ ನೈವೇದ್ಯ ಮಾಡು

ಏಕಾದಶ ರುದ್ರರು– ವೀರಶೈವರಿಗೆ ಪೂಜ್ಯರಾದ ೧೧ ಮಂದಿ ರುದ್ರರು

ಏಕೋತ್ತರ ಶತಸ್ಥಲಗಳು–೧೦೧ ಸ್ಥಳಗಳು

ಕಂತೆ–ದೇಹ, ಇಷ್ಟಲಿಂಗದ ಮೇಲೆ ಧರಿಸುವ ಚಿದ್ರಸ (ಕಂತೆ ಒಗೆದ- ದೇಹಬಿಟ್ಟ) (ಕಂತೆಭಿಕ್ಷ: ಕಂತೆಗೆ ತಕ್ಕ ಬೊಂತೆ) (ಇಲ್ಲಿ ಸಾದೆಪೆಂಡಿ,

ಕಂಕುಳಲ್ಲಿ ಹಾಕುವ ಕಿರಿಜೋಳಿಗೆ ಎಂಬ ಅರ್ಥವಿಲ್ಲ)

ಕೈಲಾಸವಸ್ತ್ರ–ಸಮಾಧಿಯಲ್ಲಿ ಶವದ ಮೇಲೆ ಹಾಕುವ ನೂತನ ವಸ್ತ್ರ

ಕ್ರಿಯಾಸಮಾಧಿ–ಶಿವಯೋಗಿಗಳಿಗೂ ಶರಣರಿಗೂ ಮಾಡುವ ವಿಶೇಷ ರೀತಿಯ ಆಗಮೋಕ್ತ ಶಿವಸಮಾಧಿ

ಕೈವಲ್ಯ–ಮೋಕ್ಷ, ಶವವನ್ನು ಕೊಂಡಯ್ಯುವ ಚಟ್ಟ

ಕ್ರಿಯಾಮೂರ್ತಿ–ಶರಣರು ಪಾದಪೂಜೆಗಾಗಿ ನಿಶ್ಚಯಿಸಿ ಕೊಂಡಿರುವ ಗುರುಗಳು

ಕ್ರೀ–ಕ್ರಿಯೆ-ಕರ್ಮ

ಕರಡಿಮೇಳ (ಕರಡಿಮಜಲು)–ವೀರಶೈವರ ವಿಶಿಷ್ಟವಾದ ಮಂಗಲ ವಾದ್ಯ

ಕೊಂಡ ಹಾರುವುದು–ವೀರಭದ್ರನ ಜಾತ್ರೆಯಲ್ಲಿ ದೇವಾಲಯದ ಮುಂದಿನ ಅಗ್ನಿ ಕುಂಡವನ್ನು ಭಕ್ತಿ ಶ್ರದ್ಧೆಯಿಂದ ಬರಿಕಾಲಿನಲ್ಲಿ ಹಾಯುವುದು

ಕರಡಿಗೆ, ಚೌಕ, ಲಿಂಗದಕಾಯಿ ಅಥವಾ– ನಾಗವತ್ತಿಗೆ–ಇಷ್ಟಲಿಂಗವನ್ನು ಇಡುವ ಭರಣಿ,

[ಇದನ್ನು ಚಿನ್ನ, ಬೆಳ್ಳಿ, ಅಥವಾ ಗಂಧದ ಮರದಲ್ಲಿ ಮಾಡಿರುತ್ತಾರೆ.]

[ಗಾದೆ–ಕರಡಿಗೆ ಬಿಟ್ಟು ಶಿವಪೂಜೆಗೆ ಹೋದಂತೆ]

ಕದಳಿಯವನ– ಶ್ರೀ ಶೈಲದಲ್ಲಿರುವ ತಪಸ್ಸಿಗೆ ಅರ್ಹವಾಗಿರುವ ಗುಪ್ತಸ್ಥಳ. [ಇಲ್ಲಿ ಅಕ್ಕಮಹಾದೇವಿ, ಪ್ರಭುದೇವರು, ಶಿವದೇವರು ತಪಸ್ಸುಮಾಡಿ ಮುಕ್ತರಾದರು]ಕಾಯಕವೇ ಕೈಲಾಸ–ಕೆಲಸವೇ ದೇವರು–ಶಿವಾರ್ಪಿತವಾಗಿ ಮಾಡುವ ಕಾರ್ಯ– (ಗಾದೆ–ಕೈಕೆಸರು ಬಾಯಿ ಮೊಸರು)

ಕ್ರಿಯಾಭಸಿತ–ಗುರುವಿನಿಂದ ಸಂಸ್ಕರಿಸಲ್ಪಟ್ಟ ಪವಿತ್ರ ಭಸ್ಮ

ಕರಣಹಸಿಗೆ–ಮನುಷ್ಯನಮನಸ್ಸಿನ ಮತ್ತು ದೇಹದ ವ್ಯಾಪಾರ ತಿಳಿಸುವ ಶಾಸ್ತ್ರಗ್ರಂಥ

ಕಾಲಜ್ಞಾನ–ಶರಣರ ಭವಿಷ್ಯ ಕಥನ

ಕಂಬಿ ಅಥವಾ ಕಾವಡಿ–ಶಿವರಾತ್ರಿ–ಯುಗಾದಿಗಳ ಕಾಲದಲ್ಲಿ ಶ್ರೀ ಶೈಲಕ್ಕೆ ಜಂಗಮರು ಕೊಂಡೊಯ್ಯುವ ಧಾರ್ಮಿಕ ಅಡ್ಡೆಗಳು

ಖಂಡಿತಮಾಡು– ಊಟದ ಬಟ್ಟಲಲ್ಲಿನ ಪ್ರಸಾದವನ್ನು ಬಿಡದಂತೆ ಸೇವಿಸುವುದು [ಇದನ್ನು ಪ್ರಸಾದಿಗಳು ಮಾಡುತ್ತಾರೆ.]

ಗದ್ದಿಗೆ ಥಾವಳಿ–ಶಿವಪೂಜೆಗಾಗಿ ಹಾಕುವ ಚಿಕ್ಕದಾದ ಬಿಳಿಕಂಬಳಿ
ಗಂಟೆಬಟ್ಟಲು–ಚಲವಾದಿಯು ಲಿಂಗವಂತರ ಉತ್ಸವಗಳಲ್ಲಿ, [ಶುಭಶೋಭ
 ಗಳಲ್ಲಿ] ಹೆಗಲಮೇಲಿಟ್ಟುಕೊಂಡು ಹೋಗುವ ಗಂಟೆ ಮತ್ತು ಬಟ್ಟ
ಗುರುತ್ರಯ–ಶಿಕ್ಷಾ, ದೀಕ್ಷಾ, ಮೋಕ್ಷ ಗುರುಗಳು
ಗುರುಕರುಣ–ಉಪದೇಶ, ಗುರುವಿನ ಕೃಪೆ
ಗುರುಪುತ್ರ–ಶಿಷ್ಯ, (ಹರಿದೇವಸುತ ರಾಘವಾಂಕ ಎಂಬುದನ್ನು ಗಮನಿ
 ಬಹುದು.)
ಘಟಚಕ್ರ–ದೇಹದ ಗುಟ್ಟುಗುರಿ ತಿಳಿಸುವ ಗ್ರಂಥ
ಘನಲಿಂಗ ಚಕ್ರವರ್ತಿಗಳು-ಆಚಾರ್ಯ ಪರಂಪರೆಯುಮಠಗಳಪಟ್ಟಾಧ್ಯಕ್ಷಸ್ವಾ
 ಗಳು
ಚಲವಾದಿ– ವೀರಶೈವರ ಸಭೆಗಳಲ್ಲಿ ಮುಂದೆ ಗಂಟೆ ಬಟ್ಟಲು ಹಿಡಿ
 ಹೋಗುವವ [ಈತನು ಬಹುತೇಕ ಹರಿಜನನಾಗಿರುವನು]
ಚಡಿಮರಿ–ಸಮಾಜದ ಕಾರ್ಯಕ್ರಮ ಏರ್ಪಡಿಸುವ ವ್ಯವಸ್ಥಾಪಕನು[ಮಠಪ
ಜಂಗಮ, ಜಂಗಮಲಿಂಗ–ಗುರು, ಅತಿಥಿ, ಜನನ ಮರಣ ಗೆದ್ದವನು
 ಲೋಕಸಂಚಾರಿ,ಜ್ಞಾನಬೋಧಕ(ಗಾದೆ–ಗುರುವಿನ ಗುರು ಜಂಗಮ
ಜಳಕ–ಸ್ನಾನ, ಮೀಯುವುದು
ಜವಳಕೊಡುವುದು–ಚೌಲಕರ್ಮ, [ಧರ್ಮಶ್ರದ್ಧೆ ವ್ಯಕ್ತಪಡಿಸುವುದು]
ಜಂಗು–ಜಂಗಮರು ಮೊಣಕಾಲಿಗೆ ಕಟ್ಟುವ ಒಂದು ಬಗೆಯ ಗೆಜ್ಜೆ
(ಇಲ್ಲಿ ಲೋಹಗಳಿಗೆ 'ಜಂಗು' ಹಿಡಿವುದು ಎಂಬ ಅರ್ಥವಿಲ್ಲ)
ಜಪಮಾಲೆ–ರುದ್ರಾಕ್ಷಿ ಸರ, ಶಿವಾಕ್ಷಿಮಾಲೆ
ಜಂಗಮಪ್ರಾಣಿ–ಬಸವೇಶ್ವರ (ಜಂಗಮರಲ್ಲಿ ಪ್ರಾಣ ಉಳ್ಳವನು)
ಜೋಳಿಗೆ–ಜಂಗಮರು ಭಿಕ್ಷೆಗಾಗಿ ಉಪಯೋಗಿಸುವ ಸಾಧನ
(ಗಾದೆ–ಗುರುಕೊಟ್ಟ ಜೋಳಿಗೆ ಅಂತ ಗೂಟಕ್ಕೆ ತಗುಲಿಸಿದರೆ ಅದರಲ್ಲಿ
 ಬಿಸಿ ಬಿಸಿ ಹೋಳಿಗೆ ಸಿಕ್ಕೀತೆ)
ತನುತ್ರಯ–ತ್ಯಾಗಾಂಗ, ಭೋಗಾಂಗ, ಯೋಗಾಂಗ
ತ್ರಿವಿಧಲಿಂಗ–ಇಷ್ಟಲಿಂಗ, ಪ್ರಾಣಲಿಂಗ; ಮತ್ತು ಭಾವಲಿಂಗ
ತವನಿಧಿ–ಅಕ್ಷಯ ಪಾತ್ರೆ (ದಾಸಿಮಯ್ಯನ ತವನಿಧಿ ಪುರಾಣದಲ್ಲಿ ಪ್ರಸಿದ್ಧ
 ವಾಗಿದೆ)

ತ್ಯಾಗಾಂಗ–ಸ್ಥೂಲದೇಹ, ಭೋಗಾಂಗ, ಸೂಕ್ಷ್ಮದೇಹ, ಯೋಗಾಂಗ, ಕಾರಣದೇಹ

ತ್ರಿವಿಧದಾಸೋಹ-ಗುರುವಿಗೆ ತನು, ಲಿಂಗಕ್ಕೆ ಮನ, ಜಂಗಮಕ್ಕೆ ಧನ ಅರ್ಪಿಸುವುದು

ದಶಾಂಗ–ಶಿವಪೂಜೆಯಲ್ಲಿ ಬಳಸುವ ಸುಗಂಧ ದ್ರವ್ಯ (ವಿಷಕ್ರಿಮಿಗಳನ್ನು ಪರಿಹರಿಸುವುದು)

ದೀಕ್ಷೆ–ವೀರಶೈವರ ಸಂಸ್ಕಾರ ವಿಶೇಷ

(ವೇಧಾ-ಕ್ರಿಯಾ-ಮನು ಇವು ತ್ರಿವಿಧ ದೀಕ್ಷೆಗಳು)

ದಾಸೋಹ–ಗುರು, ಲಿಂಗ, ಜಂಗಮರ ಸೇವೆ,ಅತಿಥಿ ಸತ್ಕಾರ,(ದಾಸೋಹಂ ಭಾವ)

ದ್ವಾದಶಾದಿತ್ಯರು–ಹನ್ನೆರಡು ಮಂದಿ ಸೂರ್ಯರು

ದೇಶದ ಶಿಟ್ಟರು-ಯಜಮಾನರು–ವೀರಶೈವಾನುಯಾಯಿ ೧೮ ಪಣಗಳ ಕುಲಗಳ ಮುಖಂಡರು

ನಿರಂಜನ ಮೂರ್ತಿ–ವಿರಕ್ತಸ್ವಾಮಿ,ಮಾಯೆಯನ್ನು ಗೆದ್ದವನು

ನಂದಿಉಂಗುರ–ಶಿವಭಕ್ತರು ಧರಿಸುವ ನಂದಿವಿಗ್ರಹದಿಂದ ಕೂಡಿದ ಉಂಗುರ

ಧೂಳೋದಕ–ಗುರು ಮನೆಗೆ ಬಂದಾಗ ಪಾದ ತೊಳೆದ ತೀರ್ಥ

ನಂದಿಧ್ವಜ–ವೀರಶೈವರ ಹೆಗ್ಗುರುತಾದ ನಂದಿಯ ವಿಗ್ರಹವುಳ್ಳಧ್ವಜವಿಶೇಷ

ನೂತನರು–ಶ್ರೀ ಬಸವಾದಿಗಳು ೧೨ನೇ ಶತಕದಿಂದ ಈಚಿನವರು

ನಿರ್ಬಯಲು–ಬಯಲಿಗೆ ಆಚೆ ಇರುವ ಸೂಕ್ಷ್ಮತತ್ವ

ಪ್ರಣವ–ಓಂಕಾರ, ವೇದದ ಮೊದಲಕ್ಷರ

ಪಕ್ವಾನ್ನ–ರಾಗಿಮುದ್ದೆ (ಪಕಾನ) (ವೀರಶೈವರಲ್ಲಿ ರೂಢಿಯಲ್ಲಿರುವ ಶಬ್ದ)

ಪಸಗಿಯುವನು– ಸಮಾಜ ಸೇವಾಕಾಯಕದವನು

ಪಂಡಿತತ್ರಯರು–ಮಲ್ಲಿಕಾರ್ಜುನ, ಮಂಚಣ್ಣ, ಶ್ರೀಪತಿ ಎಂಬ ಮೂವರು ಪ್ರಾಚೀನ ಪಂಡಿತರು

ಪಂಚಾಚಾರ್ಯರು–ರೇಣುಕ, ದಾರುಕ, ಏಕೋರಾಮ, ಮರುಳಸಿದ್ಧ, ವಿಶ್ವಾರಾಧ್ಯರು

ಪಾದೋದಕ–ಗುರುಪಾದ ತೀರ್ಥ, [ಅಷ್ಟಾವರಣದಲ್ಲಿ ನಾಲ್ಕನೆಯ ...
ಪಂಚಾಚಾರ–ಸದಾಚಾರ, ಶಿವಾಚಾರ, ಲಿಂಗಾಚಾರ, ಗಣಾ...
ಭೃತ್ಯಾಚಾರ
ಪಂಚಸೂತ್ರ–ಷಡ್ವಿಡಿ, ವೃಷ್ಟಿ, ಮುಕ್ತಾಗುಚ್ಛ, ಲಂಬನ, ಪಂಚವರ್ಣ
ಪಂಚಗೋತ್ರಗಳು–ವೀರ. ನಂದಿ, ಭೃಂಗಿ, ವೃಷಭ, ಸ್ಕಂದ ಗೋತ್ರ...
ಪಂಚೀಕರಣ–ಮಿಶ್ರಾರ್ಪಣ, ಷಟ್‌ಸ್ಥಲ, ಅಷ್ಟಾವರಣ, ಲಿಂ...
ಸಾಮರಸ್ಯ ಇವು ಸೇರಿದರೆ ಪಂಚೀಕರಣಗಳು
ಪಂಚವಿಂಶತಿ ತತ್ವಗಳು– ೨೫ ತತ್ವಗಳು
ಪಂಚವಿಂಶತಿ ಲೀಲೆಗಳು–ಶಿವನ ೨೫ ಲೀಲೆಗಳು
ಪ್ರಸಾದ–ಶೇಷ, ಗುರುಕರುಣ
ಪ್ರಸಾದತ್ರಯ–ಶುದ್ಧ, ಸಿದ್ಧ, ಪ್ರಸಿದ್ಧ
ಪರ್ವ–ಶರಣರನ್ನು ಕುರಿತಾದ ಉತ್ಸವಗಳು, ಪುಣ್ಯ ದಿನಗಳು
ಪರಿಯಾಣ (ಪರ್ಯಾಣ)–ಊಟದ ಬಟ್ಟಲು, ಗಂಗಳ
ಪ್ರಮಥರು–ಪೂಜ್ಯರು, ಪರಿಶುದ್ಧರು, ಕೈಲಾಸದಲ್ಲಿರುವವರು,[ಭವಮ...
ಒಳಗಾಗದವರು]
ಅನಾದಿ–ನಾದ ಬಿಂದು ಕಲೆಗಳ ಒಬ್ಬುಳಿಯಾದ-ಲಿಂಗ
ಅಚ್ಚಪ್ರಸಾದಿ–ಅಚ್ಚ, ಜಂಗಮ,ಸಮಯ ಈ ಮೂರೂ ಪ್ರಸಾದವನ್ನು...
ಜ್ಯೋತಿರ್ಲಿಂಗ–ಕಂಗಳ ಮಧ್ಯದ ಜ್ಯೋತಿ
[ಭಾರತದಲ್ಲಿ೧೨ಜ್ಯೋತಿರ್ಲಿಂಗಗಳುಂಟು. ಇವು ಸ್ಥಾವರ ಲಿಂಗ...
ಬಯಲು–ಶೂನ್ಯ, ಶಿವ, ಬ್ರಹ್ಮ, ಪೂರ್ಣ, ನಿರ್ಬಯಲು, ಸ್ಥಲ
ಲಿಂಗಸಂಗಿ–ತನುಗುಣ ನಾಸ್ತಿಯಾದವನು
ಲಿಂಗವೇದಿ–ಲಿಂಗದ ಮರ್ಮವನ್ನು ಬಲ್ಲವನು
ಶಬ್ದಕ್ರಿ–ಮಾತಿನಲ್ಲಿ ಉಳಿಯುವ ಕ್ರಿಯೆ
ಶಿವಕಳೆ-ವಿಭೂತಿ-ಭಸ್ಮ, [ಶಿವನಐಶ್ವರ್ಯ]
ಶರಣಸತಿ ಲಿಂಗಪತಿ–ಲಿಂಗನಿಷ್ಠೆಯಿಂದಿರುವವರು
ಶರಣವೆಣ್ಣು–ಶಿವನನ್ನೇ ಪತಿಯಾಗಿ ನಂಬಿರುವವರು

ಪುನರ್ಜಾತ–ಶಿವದೀಕ್ಷೆ ಹೊಂದಿದವನು, ಗುರು ಕೃಪೆ ಪಡೆದವನು
ಭಸಿತ–ವಿಭೂತಿ, ಭಸ್ಮ, [ಶಿವ ಸಂಬಂಧವಾದ ಐಶ್ವರ್ಯ]
ಭಕ್ತ–ಲಿಂಗಧಾರಿ, ಲಿಂಗವಂತ, ಶರಣ, ಲಿಂಗಭಕ್ತ
ಬಿನ್ನಹ–ಊಟಕ್ಕೆ ಹೇಳುವುದು (ವಿಜ್ಞಾಪನೆ ಎಂಬರ್ಥ ಬೇರೆಕಡೆ ಇದೆ)
ಭವಿ–ಲಿಂಗರಹಿತ, ಭವಮಾಲೆಗೆ ಒಳಗಾದವನು
ಬೊಂತೆ–ಕೌದಿ, ಹಚ್ಚಡ, [ಬೊಂತಲದೇವಿ–ಕೌದಿ ಹೊಲಿಯುವವಳು]
ಮಂತ್ರ–ಪಂಚಾಕ್ಷರೀ ಮಂತ್ರ (ಮನನಾತ್ ತ್ರಾಯತಿ ಇತಿ ಮಂತ್ರಃ)
ಮೃತ್ತಿಗೆ [ಮರ್ತಿಗೆ]–ಪ್ರಸಾದರೂಪವಾದ ಮಣ್ಣು
ಮಲತ್ರಯ–ಆಣವ, ಮಾಯಾ, ಕಾರ್ಮಿಕ ಎಂಬ ಮೂರು ಮಲಗಳು
ಮಾಯಾ ಕೋಲಾಹಲ–ಮಾಯೆಯನ್ನು ಗೆದ್ದವನು, [ಅಲ್ಲಮಪ್ರಭು]
ಮೂವತ್ತಾರು ತತ್ವಗಳು–ವೀರಶೈವರ ೩೬ ಮೂಲ ತತ್ವಗಳು
ಮಖಾರಿ–ಓರ್ವ ಪ್ರಮಥನ ಹೆಸರು, ವೀರಭದ್ರ
ಮಹಾಮನೆ–ಕಲ್ಯಾಣದಲ್ಲಿನ ಬಸವಣ್ಣನವರ ಮನೆ ಮತ್ತುಉಳವಿಯ ಮಹಾಮನೆ
ರುದ್ರಾಕ್ಷಿ–ಪವಿತ್ರವಾದ ಮಣಿ, ಅಷ್ಟಾವರಣದಲ್ಲಿ ಏಳನೆಯದು, ಶಿವನ ಕಣ್ಣಿನಿಂದ ಹುಟ್ಟಿದುದು, ಪಾಪಗಳನ್ನು ಓಡಿಸತಕ್ಕದು
ರುದ್ರಭೂಮಿ–ಸ್ಮಶಾನ, ಇಡುಗಾಡು[ಸುಡುಗಾಡು]
ಲಿಂಗೋದ್ಭವ–ಅಯೋನಿಜ, ಶಿವಕೃಪೆಯಿಂದ ಜನಿಸಿದವನು
ಲಿಂಗೈಕ್ಯ–ಮರಣಾನಂತರ ಶಿವನಲ್ಲಿ ಬೆರೆತವ, ಬಯಲಾದವನು
ಲಿಂಗದೇವರು–ಸಮಾಧಿಲಿಂಗ (ಶರಣರಸಮಾಧಿಗಳಮೇಲೆ ಸ್ಥಾಪಿಸುವಲಿಂಗ)
ಲಿಂಗ–ಶಿವ, ಬ್ರಹ್ಮ, ಸ್ಥಲ, ಪೂರ್ಣ
ಲಿಂಗಧಾರಣ-ಗುರುವು ಶಿಶುವಿಗೆ ಅಥವಾ ಶಿವಭಕ್ತನಿಗೆ ದೀಕ್ಷಾಪೂರ್ವಕ ಲಿಂಗಕಟ್ಟುವುದು, ಲಿಂಗಾಂಗಿಯನ್ನು ಮಾಡುವುದು
ಲಿಂಗಸಾರಾಯ–ಲಿಂಗತತ್ವವನ್ನು ಅರಿತವನು
ಲಿಂಗದಬೀರ–ವೀರಭದ್ರನ ಖಡ್ಗ ಹೇಳುವ ಕಾಯಕದವ, (ಪುರವಂತ)
ವ್ಯಾಸನ ತೋಳು–ವೀರಶೈವರು ನಂದಿ ಧ್ವಜಕ್ಕೆ ಕಟ್ಟುವ ಒಂದು ಬಿರುದು

ವಿಭೂತಿವೀಳೆಯ, ವಿಭೂತಿಪಟ್ಟ, [ವಿಭೂತಿವೀಳ್ಯ]–ಶರಣರು ಮತ್ತ
ಪುನ್ನಮಾಡಿಸಿಕೊಳ್ಳುವ ಒಂದು ಸಂಸ್ಕಾರ ವಿಶೇಷ

ವಿಭೂತಿ–ಭಸ್ಮ, ಅಷ್ಟಾವರಣದಲ್ಲಿ ಆರನೆಯದು [ಮಹಾಪುರುಷನ
ಅರ್ಥವೂ ಅನ್ಯತ್ರ ಉಂಟು.]

ಶಿವಪೂಜೆಗೆ ಬನ್ನಿ–ಲಿಂಗಾರ್ಚನೆಗೆ ಬನ್ನಿ, ಊಟಕ್ಕೆ ಬನ್ನಿ

ಶೂನ್ಯ–ಶಿವ,ಬ್ರಹ್ಮ, ಸ್ವಯಂಭು [ಇಲ್ಲಿ ಬೌದ್ಧರ ಏನೂಇಲ್ಲ ಎಂಬರ್ಥವಿ

ಶರಣ–ಶಿವನನ್ನು ಮರೆಹೊಕ್ಕವ [ಶರಣಸತಿ ಲಿಂಗಪತಿ ನ್ಯಾಯ]

ಶೂನ್ಯಪೀಠ–ಶಿವಧರ್ಮವನ್ನು ಬೋಧಿಸುವ ಪೀಠ

ಶೂನ್ಯಸಂಪಾದನೆ–ಶಿವಧರ್ಮ ತತ್ವಗಳನ್ನು ಆರ್ಜಿಸುವ [ದಾರಿ ತೋರು
ಗ್ರಂಥದ ಹೆಸರು

ಶಿವಾರ್ಪಿತ–ಊಟ, ಭೋಜನ ಮಾಡುವುದು

ಶಿವಧೋ–ಶಿವನನ್ನು ಮರೆ ಹೊಗುವ ಆರ್ತಧ್ವನಿ

ಸರಿಯಾದರು–ಸತ್ತುಹೋದರು. ಶಿವಪುರಕ್ಕೆ ಹೋದರು, ಬಯಲಾದ

ಸಮಯಾಚಾರಿ–ಮಠಾಚಾರ್ಯನಾದವನು

ಸಂಪುಟ–ಮಠಾಧಿಪತ್ಯ ಒಪ್ಪಿಕೊಳ್ಳುವ ಶಿಷ್ಯರ ಕರಾರು [ಕರಡಿ
ಸಂದೂಕ ಎಂಬ ಅರ್ಥವೂ ಇದೆ.]

ಶ್ರೀಮುಖ–ಗುರುಗಳು ಶಿಷ್ಯರಿಗೆ ಕಳಿಸುವ ನಿರೂಪ

ಷಡಕ್ಷರ ಮಂತ್ರ–ಓಂ ನಮಃ ಶಿವಾಯ

ಶಿವದಾರ–ಕರಡಿಗೆಗೆ ಕಟ್ಟುವದಾರ (೬೩ ಎಳೆಗಳಿಂದ ಕೂಡಿರುವುದು)

ಶಿವದಾನ [ಶಿವರಸ]–ಮಜ್ಜಿಗೆ [ದಾಸಯ್ಯ ಶಿವದಾನವ ನೀಡನೋಡಯ್ಯ
—ಬಸವೇಶ್ವರ ವಚನ

ಹರಬೀಜ–ಶಿವಭಕ್ತ, ಶಿವನ ಸಂತಾನ

ಹದಿನೆಂಟು ಪಣ–ವೀರಶೈವರ ಶಿವಾಚಾರ ಒಪ್ಪಿಕೊಳ್ಳುವ ಜನರ
ಕುಲಾಚಾರದ ಗುಂಪುಗಳು

ಷಡಧ್ವಗಳು–ಮಂತ್ರಾಧ್ವ, ಪದಾಧ್ವ,ವರ್ಣಾಧ್ವ, ಭುವನಾಧ್ವ,ತತ್ವಾಧ್ವ
ಕಲಾ

ಷಡ್ಲಿಂಗಗಳು–ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗ
ಷಟ್‌ಸ್ಥಲಗಳು–ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ
ಷಟ್‌ಚಕ್ರಗಳು–ಆಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧಿ, ಮತ್ತು ಆಜ್ಞಾಚಕ್ರಗಳು
ಸಕೀಲಗಳು–ಸ್ಥಲಗಳ ರಹಸ್ಯ ತಿಳಿಸತಕ್ಕವು
ನಿಃಕಲ–ಶೂನ್ಯತತ್ವ
ಪ್ರಸಾದ-ಕಾಯ-ಪವಿತ್ರವಾದ ದೇಹ
ಪಿಂಡ–ಬ್ರಹ್ಮಾಂಡದ ಬೀಜ
ಭವಮಾಲೆ–ಜನನ-ಮರಣ ಪ್ರವಾಹ
ಬಸವಭಾಷೆ–ಬಸವಣ್ಣನವರು ಮಾಡಿದ ೩೪ ಪ್ರತಿಜ್ಞೆಗಳು
ರುದ್ರಗಣರು–ಶಿವಾಂಶೀಭೂತರು
ಶಿವಾಧೀನ–ಕೈಲಾಸಕ್ಕೆ ಹೋಗುವುದು
ಶೀಲವಂತ–ಸತ್ಯವಂತನಾಗಿ ನಡೆಯುವವನು(೬೪ಆಚರಣೆ ಪಾಲಿಸುವವನು)
ಸೀತಾಳ–ನೀರು–(ಸೀತಾಳ ಪಾತಾಳದಲ್ಲಿದೆ-ರೂಢಿಯಮಾತು)
ಅಚ್ಚಪ್ರಸಾದಿ–ಅಚ್ಚ, ಜಂಗಮ, ಸಮಯ ಎಂಬ ಮೂರು ಪ್ರಸಾದಗಳುಳ್ಳವನು
ತ್ರಿಪುಟಗಳು–ಜ್ಞಾತೃ, ಜ್ಞಾನ, ಜ್ಞೇಯ
ಕರಸ್ಥಲ–ಗುರು, ಲಿಂಗ, ಜಂಗಮ, ಪ್ರಸಾದಿ ಸ್ಥಲಗಳಡಗಿದುದೇ ಕರಸ್ಥಲ
ಮಾಯೆ–ಮನದಮುಂದಣ ಆಶೆ, ಲೋಕದಲ್ಲಿ ಅಡಗಿರುವ ಭ್ರಾಂತಿ
ಶಿವಯೋಗ–ಹಠ, ಲಯ, ರಾಜ, ಮಂತ್ರಯೋಗಗಳಿಗೆ ಭಿನ್ನವಾದ ಶಿವಶರಣರು ಸಾಧಿಸಿದ ಶಿವಯೋಗಮಾರ್ಗ
ಅವಿಮುಕ್ತಕ್ಷೇತ್ರ–ಶರಣರ ಪುಣ್ಯ ಭೂಮಿ
ಅವಧಾನ–ಸದಾಎಚ್ಚರದಲ್ಲಿರುವುದು
ತ್ರಿಕೂಟ–ಶ್ರೀಶೈಲದ ಒಂದು ಬೆಟ್ಟ[ಅಕಾರ ಉಕಾರ ಮಕಾರಗಳ ಮರ್ಮ]
ಮಾಟಕೂಟ–ಕರ್ಮ, ಸೇವೆ, ದಾನ

ಶರಣಾರ್ಥಿ–ಶರಣರು ಒಬ್ಬರನ್ನೊಬ್ಬರು ಕಂಡಾಗ ಶಿವಭಾವದಿಂದ ಆಡು
ಗೌರವ ಸೂಚಕ ಮಾತು
ಶೂನ್ಯ ಸಿಂಹಾಸನ–ಅನುಭವ ಮಂಟಪದ ಅಧ್ಯಕ್ಷ ಸ್ಥಾನ
ಪ್ರಾಣಲಿಂಗ–ಹೃದಯದ ಮಧ್ಯದಲ್ಲಿರುವ ಪ್ರಾಣಶಕ್ತಿ
ತ್ರಿವಿಧಭಕ್ತಿ–ಗುರುಭಕ್ತಿ, ಜಂಗಮಭಕ್ತಿ, ಲಿಂಗಭಕ್ತಿ
ಶಿವ-ಶಕ್ತಿ–ಪಾರ್ವತೀ ಪರಮೇಶ್ವರರು,ಜಗತ್ತಿನ ಅನಾದಿ ಪ್ರಕೃತಿ-ಪುರುಷ
ಸೂಕ್ಷ್ಮತನು–ಮನ ಬುದ್ಧಿ ಅಹಂಕಾರಗಳಿಂದಾದುದು(ಯೋಗಾಂಗ)
ಸ್ಥೂಲತನು–ಪಂಚಭೂತ ಳಿಂದಾದುದು, (ತ್ಯಾಗಾಂಗ,)
ಸೃಷ್ಟಿ–ಶಿವನಲೀಲೆಯಿಂದಾದ ಪ್ರಪಂಚ. ಬ್ರಹ್ಮನೆಂಬ ಕಾರಣಕ್ಕೆ ಕಾ
ಸಂಕಲೆ–ಹೆಣ್ಣು, ಹೊನ್ನು, ಮಣ್ಣು ಆಶೆಗಳು
ಕದಳಿ–ಕಾಯ, ಗುಪ್ತವನ, ಬಾಳೆಯ ಗಿಡ
ಲಿಂಗಸಂಗಿ–ತನುಗುಣ ನಾಸ್ತಿಯಾದವನು
ಘನ–ಅವಿರಳವಸ್ತು, ಪರಶಿವ
ಚರ–ಜಂಗಮ [ಅಷ್ಟಾವರಣದಲ್ಲಿ ಮೂರನೆಯವನು]
ಭಕ್ತದೇಹಿಕ–ಶಿವ, (ಭಕ್ತನನ್ನೇ ದೇಹವಾಗುಳ್ಳವ)
ಭಿಕ್ಷ–ಅನ್ನ (ಭಿಕ್ಷಾಂದೇಹಿ)
ಸುಯಿದಾನ–ನೈವೇದ್ಯ ಪದಾರ್ಥಗಳು
ಸ್ವಯವಾಗು–ತನ್ನದಾಗು, ಸಮನಿಸು
ಸಾಯುಜ್ಯ–ಸಾಕ್ಷಾತ್ಕಾರ, ಮೋಕ್ಷ
ನಿರಾಳ–ಅಲುಗಾಡದ ಸ್ಥಿತಿ
ಶಕ್ತಿತ್ರಯ–ಕ್ರಿಯಾ, ಜ್ಞಾನ, ಇಚ್ಛಾಶಕ್ತಿಗಳು
ಸಾದಾಖ್ಯ–ಸಂತತ ಶಿವಭಾವದಿಂದಿರುವುದು
ಪಂಚಸಾದಾಖ್ಯಗಳು,-ಶಿವ, ಅಮೂರ್ತಿ, ಮೂರ್ತಿ, ಕರ್ತೃ, ಕರ್ಮ
ಷಡಧ್ವಗಳು–ಮಂತ್ರ, ಪದ, ವರ್ಣ, ಭುವನ, ತತ್ವ, ಕಲಾ
ಮಾರ್ಗಕ್ರಿಯೆ–ಭಕ್ತ, ಮಹೇಶ, ಪ್ರಸಾದಿ ಸ್ಥಳದ ಕ್ರಿಯೆಗಳು
ಮೀರಿದಕ್ರಿಯೆ–ಪ್ರಾಣಲಿಂಗಿ, ಶರಣ–ಐಕ್ಯಸ್ಥಲದ ಕ್ರಿಯೆಗಳು
ಎಡೆ ಬಟ್ಟಲು–ಊಟದ ತಟ್ಟೆ

# ವೀರಶೈವವೂ ವಿಶ್ವಪ್ರೇಮವೂ

ಜಗತ್ತಿನಲ್ಲಿ ಉತ್ತಮವಾದ ಎಲ್ಲ ಮತಗಳೂ, ಮನುಷ್ಯನು ಇಹದಲ್ಲಿ ಯೋಗ್ಯನಾಗಿಯೂ ಪರದಲ್ಲಿ ಭಗವಂತನ ಸನ್ನಿಧಿಯನ್ನು ಪಡೆಯತಕ್ಕವನಾಗಿಯೂ ಇರಬೇಕೆಂದು ಬೋಧಿಸುತ್ತವೆ. ತಾನು ನಿರ್ಮಲನಾಗಿದ್ದು ಸಮಸ್ತ ಪ್ರಾಣಿಗಳ ಸುಖ ದುಃಖವೂ ತನ್ನದೆಂಬುದಾಗಿ ಭಾವಿಸುವುದೇ ಸತ್ಪುರುಷರ ಲಕ್ಷಣ. ಹಿಂದೂ ಧರ್ಮವೆಂಬ ಹಿಮಾಲಯಕ್ಕೆ ಗೌರೀಶಂಕರ ಶಿಖರದಂತೆ ಅತ್ಯುನ್ನತನೆಂದು ಮಾನ್ಯನಾದ ಭಗವಾನ್ ವೇದವ್ಯಾಸ ಮಹರ್ಷಿಯು 'ಪರೋಪಕಾರಃ ಪುಣ್ಯಾಯ ಪಾಪಾಯ ಪರಪೀಡನಂ'ಎಂಬ ಶ್ಲೋಕಾರ್ಧದಲ್ಲಿ ವಿಶ್ವಧರ್ಮಸಾರವನ್ನು ನಿರೂಪಿಸಿದ್ದಾನೆ. 'ಪ್ರಾಣಿಕೋಟಿಗಳಿಗೆ ಹಿತವನ್ನುಂಟುಮಾಡುವುದೇ ಪುಣ್ಯಎಂಬುದಾಗಿಯೂ, ಅವುಗಳಿಗೆ ದುಃಖವನ್ನುಂಟುಮಾಡುವುದೇ ಪಾಪಎಂಬುದಾಗಿಯೂ' ಆ ವಾಕ್ಯದ ತಾತ್ಪರ್ಯ. ಭಗವದ್ಗೀತೆಯ ೫ನೆಯ ಅಧ್ಯಾಯದಲ್ಲಿ ಹಿಂದೂಧರ್ಮದಲ್ಲಿ ಕ್ರಾಂತಿಕಾರಕನೂ ಪೂರ್ಣಾವತಾರನೂ ಆದ ಶ್ರೀ ಕೃಷ್ಣನು"ವಿದ್ಯಾವಿನಯ ಸಂಪನ್ನೇ ಬ್ರಾಹ್ಮಣೇ ಗವಿ ಹಸ್ತಿನಿ। ಶುನಿಚೈವ ಶ್ವಪಾಕೇಚ ಪಂಡಿತಾಸ್ಸಮದರ್ಶಿನಃ" ಎಂಬ ಶ್ಲೋಕದಲ್ಲಿ 'ಜ್ಞಾನಿಯಾದವನು ವಿದ್ಯಾವಿನಯ ಸಂಪನ್ನನಾದ ಬ್ರಾಹ್ಮಣನನ್ನೂ, ಗೋವನ್ನೂ, ಮದೋನ್ಮತ್ತವಾದ ಆನೆಯನ್ನೂ, ಅಲ್ಪ ಪ್ರಾಣಿಯೆನಿಸಿದ ನಾಯಿಯನ್ನೂ, ನಾಯಿಮಾಂಸವನ್ನು ತಿನ್ನುವ ಚಂಡಾಲನನ್ನೂ ಸಮದೃಷ್ಟಿಯಿಂದ ನೋಡಬೇಕು ಎಂದು ಬೋಧಿಸಿದ್ದಾನೆ. ಆದುದರಿಂದ ಯಾವುದೊಂದು ಮತವಾಗಲಿ ಮಾನವಧರ್ಮವನ್ನೂ ಲೋಕ ಮರ್ಯಾದೆಯನ್ನೂ ಸರ್ವಪ್ರಾಣಿಗಳ ಕಲ್ಯಾಣವನ್ನೂ ಆತ್ಮ—ಶರೀರ ಶುದ್ಧಿಯನ್ನೂ ಆಧಾರವಾಗಿಟ್ಟುಕೊಂಡೇ . ಲೋಕದಲ್ಲಿ ಪ್ರಕಾಶಿಸಬೇಕಾಗುತ್ತದೆ. 'God is Love' ಎಂಬ ಆಂಗ್ಲರ ಜಾಣ್ಣುಡಿಯು ಪ್ರೇಮದ ಈ ಮಹತ್ವವನ್ನು ಸ್ಪಷ್ಟವಾಗಿ ನಿರೂಪಿಸುತ್ತಿದೆ.

---

* ತಾ॥ ೧೩-೧೨-೧೯೩೭ರಲ್ಲಿ ಧರ್ಮಸ್ಥಳದಲ್ಲಿ ನಡೆದ ಸಕಲ ಧರ್ಮ ಸಮ್ಮೇಳನದಲ್ಲಿ ನಿರೂಪಿಸಿದ ಭಾಷಣ ಸಂಗ್ರಹ.

ವೀರಶೈವ ಮತವು ವಿಶ್ವಪ್ರೇಮದ ಆಧಾರದ ಮೇಲೆಯೇ ಸಂಸ್ಥಾ ವಾಗಿದೆ ಎಂಬುದನ್ನು ಲೋಕವು ಮನಗಾಣಬಹುದು. ವೀರಶೈವ ಮ ತನ್ನಲ್ಲಿಗೆ ಬಂದ ಪ್ರತಿಯೊಂದು ವ್ಯಕ್ತಿಯನ್ನೂ ಕುರಿತು "ನಿನ್ನ ಅಂತರಂಗ ಶುದ್ಧ ಮಾಡಿಕೊಂಡು, ಕಾಮಕ್ರೋಧಾದಿಗಳನ್ನು ಗೆದ್ದು, ಸನ್ಮಾರ್ಗ ನಡೆದು, ಭಕ್ತಿ ಜ್ಞಾನ ವೈರಾಗ್ಯಗಳನ್ನು ಅಳವಡಿಸಿಕೊಂಡು ಐಹಿಕಾಮು ಫಲವನ್ನು ಪಡೆದುಕೋ" ಎಂದು ಬೋಧಿಸುತ್ತದೆ. "ವಿಶ್ವಪ್ರೇಮ" ಎಂಬ ಗಲ್ಲಿನ ಮೇಲೆ 'ವೀರಶೈವಧರ್ಮ' ಎಂಬ ಸುವರ್ಣವನ್ನು ತಿಕ್ಕಿದರೆ, ಅದು ಎ ಬಣ್ಣಗಳಿಗೆ ನಿಲ್ಲುತ್ತದೆ ಎಂಬುದನ್ನು ನಾವು ಈ ಮತದ ತತ್ವಗಳಿಂದ ಮ ಗಾಣಬಹುದು. ವಿಶ್ವಪ್ರೇಮವನ್ನು ಮಾಡುವ ಮನುಷ್ಯನು ಮೊದಲು ತ ಅಂತರಂಗವನ್ನು ಪರಿಶುದ್ಧ ಮಾಡಿಕೊಳ್ಳಬೇಕೆಂಬುದನ್ನು ಕುರಿತು ಶ್ರೀ ಬಸವೇಶ್ವರನು "ಸದಾಚಾರವೇ ಸ್ವರ್ಗ, ದುರಾಚಾರವೇ ನರಕ" "ಸತ್ಯ ನುಡಿವುದೇ ದೇವಲೋಕ, ಮಿಥ್ಯೆಯ ನುಡಿವುದೇ ಮರ್ತ್ಯಲೋಕ" ಇತ್ಯಾ ವಚನಗಳಿಂದ ಬೋಧಿಸಿರುವನು. ಲಿಂಗಾಂಗಿಯು ಈ ಕಾರಣದಿಂದ ಕಾಮಕ್ರೋಧಾದಿಗಳ ಹಾವಳಿಯನ್ನು ತಡೆಯುವ ಸಲುವಾಗಿ ಶ್ರೀ ಗುರು ನಿಂದ ಶಿವದೀಕ್ಷೆಯನ್ನು ಹೊಂದಿ ಆಣವಾದಿ ಮಲತ್ರಯಗಳನ್ನು ಕಳೆದುಕೊ ತ್ರಿದೇಹಗಳಲ್ಲಿ ತ್ರಿಲಿಂಗಗಳನ್ನು * ಧರಿಸಿಕೊಂಡು ಸದಾ ಪರಿಶುದ್ಧನಾ ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ಭಸ್ಮ, ರುದ್ರಾಕ್ಷ, ಮ ಎಂಬ ಅಷ್ಟಾವರಣಗಳಲ್ಲಿ ಇಷ್ಟವುಳ್ಳವನಾಗಿ ನಡೆದು, ಶಿವಾಚಾರ, ಗಣಾಚಾ ಭೃತ್ಯಾಚಾರ, ನಿಯತಾಚಾರ, ಸದಾಚಾರಗಳೆಂಬ ಪಂಚಾಚಾರಗಳ ಹಿಡಿದು, ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎ ಷಟ್ಸ್ಥಲಗಳ ಸೋಪಾನಗಳನ್ನು ಅಡರಿ, ಶಿವಾನುಗ್ರಹ ರೂಪವಾ ಕೈವಲ್ಯವನ್ನು ಪಡೆಯಬೇಕೆಂದು ವೀರಶೈವ ಧರ್ಮವು ಬೋಧಿಸುತ್ತ ಯಾವ ಸಾಧಕನು ಹೀಗೆ ಆತ್ಮಚಿಂತನೆಯಿಂದಲೂ, ಭಗವಧ್ಭಕ್ತಿಯಿಂದಲ

*ಸ್ಥೂಲ, ಸೂಕ್ಷ್ಮ, ಕಾರಣ ಅಥವಾ ತ್ಯಾಗಾಂಗ, ಭೋಗಾಂ ಯೋಗಾಂಗ ದೇಹತ್ರಯಗಳು. ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂ ಇವು ಲಿಂಗತ್ರಯಗಳು.

ಸಮರ್ಥನಾಗುತ್ತಾನೆಯೋ ಆತನೇ ವಿಶ್ವಪ್ರೇಮಕ್ಕೆ ಅರ್ಹನಾಗುತ್ತಾನೆ.

## ಮೊದಲು ನಿನ್ನನ್ನೂ ನಿನ್ನವರನ್ನೂ ಪ್ರೀತಿಸು

ವೀರಶೈವ ಧರ್ಮದ ದೃಷ್ಟಿಯಿಂದ ಸ್ತ್ರೀ ಪುರುಷರಿಬ್ಬರೂ ಮೋಕ್ಷಾಧಿಕಾರಿಗಳಾಗಿರುತ್ತಾರೆ. ಅನೇಕ ವೈದಿಕ ಮತಗಳಲ್ಲಿ ಸ್ತ್ರೀಯರಿಗೆ ಮೋಕ್ಷಾಧಿಕಾರವಿಲ್ಲ. ಅವೈದಿಕ ಮತಗಳಲ್ಲಿ ಕೆಲವು ಈ ಮಾರ್ಗವನ್ನೇ ಅನುಸರಿಸಿವೆ. ಭಗವಾನ್ ಗೌತಮ ಬುದ್ಧನ ಹೊರತು ಮತ್ತಾವ ಪ್ರಾಚೀನ ಸಿದ್ಧಾಂತಿಯೂ ಮಹಿಳೆಯರಿಗೆ ಈ ಪಾರಮಾರ್ಥಿಕಾಧಿಕಾರವನ್ನು ಕೊಟ್ಟಂತೆ ತೋರುವುದಿಲ್ಲ. A ಈ ವಿಷಯದಲ್ಲಿ ಮಾನವನಿಗೆ ಅತಿಮುಖ್ಯಗಳಾದ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ನಾಲ್ಕರಲ್ಲಿಯೂ ಸ್ತ್ರೀ ಪುರುಷರಿಬ್ಬರಿಗೂ ವೀರಶೈವ ಮತವು–ವಿಶ್ವಪ್ರೇಮದ ದೃಷ್ಟಿಯಿಂದಲೇ ಸಮಾನಾಧಿಕಾರವನ್ನು ಕೊಟ್ಟಿದೆ. ನಾವು ಇತರ ಮತಗಳನ್ನು ದೂಷಿಸುತ್ತೇವೆಂದು ಯಾರೂ ಭಾವಿಸಬಾರದು, ನಮಗೆ ನಮ್ಮ ಮತದ ಆಚಾರ್ಯರಲ್ಲಿ ಇರುವಷ್ಟೇ ಪ್ರೀತಿಯು ಇತರ ಹಿಂದೂ ಮತದ ಆಚಾರ್ಯರೂ ವಿಭೂತಿಗಳೂ ಆದ ಶ್ರೀ ಕೃಷ್ಣ, ಗೌತಮಬುದ್ಧ, ಮಹಾವೀರ, ಶಂಕರಾಚಾರ್ಯ, ರಾಮಾನುಜಾಚಾರ್ಯ, ಆನಂದ ತೀರ್ಥ, ಗುರು ನಾನಕ್, ಮಹರ್ಷಿ ದಯಾನಂದ ಮೊದಲಾದವರಲ್ಲಿಯೂ ಇದೆ. ಪ್ರತಿಯೊಬ್ಬ ಸನಾತನ ಧರ್ಮದ ಮನುಷ್ಯನು ತಾನು ಯಾವ ಮತ ಪಂಥಕ್ಕೇ ಸೇರಿರಲಿ ತನ್ನ ಮತದ ಮೂಲವು ಹಿಂದೂ ಧರ್ಮದ ಒಂದು ಭಾಗ ಎಂಬುದನ್ನು ಮರೆಯಬಾರದು. ಭಾರತೀಯರಾದ ನಾವು ಮತಗಳ ಪರಸ್ಪರ ಖಂಡನ ಮಂಡನಗಳನ್ನು ಇಂದು ನಡೆಸಬೇಕಾಗಿಲ್ಲ. ಆ ಕಾಲವು ಈಗ ಕಳೆದು ಹೋಗಿದೆ. ನಾವೀಗ ಎಲ್ಲ ಮತಗಳ ಸಾರಸರ್ವಸ್ವ ಸ್ವರೂಪವಾದ ಸಮನ್ವಯ ಯೋಗಮಾರ್ಗವನ್ನುಕಂಡು ಹಿಡಿಯಬೇಕಾಗಿದೆ. ಸ್ವಮತ ನಿಷ್ಠೆಯೂ, ಪರಮತ ಸಹಿಷ್ಣುತೆಯೂ ಹಿಂದೂ ಧರ್ಮದ ಹೆಗ್ಗುರುತುಗಳು. ಹಿಂದೂ ಧರ್ಮ

---

A ಈ ವಿಷಯದಲ್ಲಿ ಉಪನಿಷತ್ಕಾರರು ಅಪವಾದವಾಗಿದ್ದಾರೆ. ಸ್ತ್ರೀ ಜಾತಿಗೆ ಇವರು ಧಾರ್ಮಿಕಸ್ವಾತಂತ್ರ್ಯವಿತ್ತಿದ್ದಾರೆಂಬುದಕ್ಕೆ ನಿದರ್ಶನಗಳಿವೆ.

ಎಂಬ ಕಲ್ಪವೃಕ್ಷದಲ್ಲಿ, ಶೈವ, ವೈಷ್ಣವ, ಜೈನ, ಬೌದ್ಧ, ವೀರಶೈವ, ಮೊದಲಾದ ಶಾಖೋಪಶಾಖೆಗಳು ಆಗಿವೆಯೆಂಬುದನ್ನು ಜ್ಞಾನಿಗಳು ದಿದ್ದಾರೆ. ಆದುದರಿಂದ ಪ್ರತಿಯೊಬ್ಬ ಮನುಷ್ಯನೂ ಈ ತತ್ವನನ್ನು ನೆನಪಿನಲ್ಲಿಟ್ಟಿರ ಬೇಕಾಗುತ್ತದೆ. ನಮ್ಮ ಅಭಿಪ್ರಾಯದಲ್ಲಿ ಎಲ್ಲ ಮತಗಳು ಗುಣದೋಷ ಮಿಶ್ರಿತವಾದುವುಗಳು. ಕೆಲವುಗಳಲ್ಲಿ ಗುಣ ಹೆಚ್ಚು; ಕೆಲವು ಗಳಲ್ಲಿ ದೋಷ ಹೆಚ್ಚು. ಈ ವಿಮರ್ಶಾದೃಷ್ಟಿಯಿಂದಲೇ ನಾವು ತತ್ವಗಳನ್ನು ನೋಡಬೇಕು. ಆದುದರಿಂದ ಮುಖ್ಯವಾಗಿ ವಿವೇಕ ಆತ್ಮಕಲ್ಯಾಣವನ್ನು ಗಮನಿಸುವುದು ಒಳ್ಳೆಯದು.

## ವಿಶ್ವಪ್ರೇಮ ದೃಷ್ಟಿಯಿಂದಲೇ ವೀರಶೈವರಲ್ಲಿ ಯಜ್ಞಯಾಗಾದಿಗಳ

"ಪ್ರಾಣಾ ಯಥಾತ್ಮನೋऽಭೀಷ್ಟಾ ಭೂತಾನಾಮಪಿತೇ ತಥಾ ಆತ್ಮೌಪಮ್ಯೇನ ಭೂತೇಷು ದಯಾಂ ಕುರ್ವಂತಿ ಸಾಧವಃ" ಎಂದು ಸತ್ಪುರುಷರಾದವರು ತಮ್ಮ ಸುಖ-ದುಃಖದಂತೆಯೇ ಇತರ ಪ್ರಾಣಿಗಳ ಸುಖದುಃಖವನ್ನೂ ತಿಳಿಯುತ್ತಾರೆ ಎಂದು ನೀತಿ ಶಾಸ್ತ್ರವು ಹೇಳುತ್ತದೆ. ವೇದವಾಗಲಿ, ಪುರಾಣವಾಗಲಿ, ಲೋಕೋಕ್ತಿ ಮತ್ತು ವಿವೇಕದ ಅನುಭವ ಇವುಗಳಿಗೆ ಸಮ್ಮತವಾದುದಾಗಿರಬೇಕು. ಪ್ರಾಜ್ಞರ ಅನು ಭವಕ್ಕೆ ಒಪ್ಪದ ವೇದವಾಕ್ಯವಾದರೂ ಮಾನ್ಯವಲ್ಲವೆಂದು ಹಿರಿಯರು ಹೇಳುತ್ತಾರೆ.

ವೇದವನು ಹಿರಿದೆಂದು । ವಾದವನು ಮಾಡುವಿರಿ ।
ವೇದದೊಳಗೇನು ಹಿರಿದುಂಟು? ಅನುಭವಿಯ ।
ವೇದವೇ ವೇದ ಸರ್ವಜ್ಞ! ॥

ಎಂದು ಕನ್ನಡಜ್ಞಾನ ಸರ್ವಜ್ಞ ಮೂರ್ತಿಯು ಹೇಳಿದ್ದಾನೆ. ವೀರ ಶೈವರು ಈ ವಿಧವಾದ ತರ್ಕ ಮತ್ತು ಅನುಭವಗಳನ್ನು ಪ್ರಧಾನವಾಗಿಟ್ಟು ಕೊಂಡು ವೇದದ ಕರ್ಮಕಾಂಡದಲ್ಲಿ ಉಕ್ತವಾಗಿರುವ ಯಜ್ಞಯಾಗಾದಿ ಗಳನ್ನೂ, ಅದರಿಂದುಂಟಾಗುವ ಪ್ರಾಣಿಹಿಂಸೆಯನ್ನೂ ನಿಷೇಧಿಸುತ್ತಾರೆ

ವೀರಶೈವ ವಿಭೂತಿಗಳಾದ ಶ್ರೀ ಬಸವೇಶ್ವರ, ಶ್ರೀ ಸರ್ವಜ್ಞಮೂರ್ತಿ ಮೊದಲಾದವರು ಹೇಳಿದ ಒಂದೆರಡು ವಚನಗಳನ್ನು ಇಲ್ಲಿ ನಮ್ಮಗಳ ನೆನಪಿಗೆ ತಂದುಕೊಳ್ಳೋಣ.

ಕೊಲ್ಲದಿರ್ಪಾ ಧರ್ಮ ವೆಲ್ಲರಿಗೆ ಸಮ್ಮತವು ।
ಅಲ್ಲದೇ ಮಾರಿ ಕೊಲ್ಲುವನು ನರಕಕ್ಕೆ ।
ನಿಲ್ಲದೇ ಪೋಪ ಸರ್ವಜ್ಞ ॥

ಕೊಲುವ ಧರ್ಮವನೊಯ್ದು ಒಲೆಯೊಳಗೆ ಹಾಕಲಿ ।
ಕೊಲಲಾಗದೆಂಬ ಜೈನನಾಮತವೆನ್ನ ।
ತಲೆಯ ಮೇಲಿರಲಿ ಸರ್ವಜ್ಞ ॥

ಎಂದು ಜನಪದ ಸಾಹಿತ್ಯಾಚಾರ್ಯ ಸರ್ವಜ್ಞ ಕವಿಯು ಹೇಳಿದ್ದಾನೆ.

"ಮಾತಿತಾ ಮಾತಿಂಗೆ ನಿನ್ನ ಕೊಂದಾರೆಂದು ಎಲೆ ಹೋತೇ ಅಳು ಕಂಡೆಯಾ, ವೇದವ ನೋದಿದವರ ಮುಂದೆ ಅಳುಕಂಡೆಯಾ ಹೋತೇ, ಶಾಸ್ತ್ರವ ಹೇಳಿದವರ ಮುಂದೆ ಅಳುಕಂಡೆಯಾ? ನೀನತ್ತುದಕ್ಕೆ ತಕ್ಕುದ ಮಾಡುವ ನಮ್ಮ ಕೂಡಲ ಸಂಗಮದೇವ"

ಎಂದು ಕರುಣಾಳುವಾದ ಬಸವಣ್ಣನವರು ಯಜ್ಞದ ನೆಪದಿಂದ ವೈದಿಕರ ಕೈ ಖಡ್ಗಕ್ಕೆ ತುತ್ತಾಗುತ್ತಿರುವ ನಿರಪರಾಧಿಯಾದ ಮೇಕೆಯನ್ನು ಕಂಡು ದುಃಖದ ಕಣ್ಣೀರು ಸುರಿಸಿರುವರು

"ದಯವಿಲ್ಲದ ಧರ್ಮವಾವುದಯ್ಯಾ?
ದಯವಿರಬೇಕು ಸಕಲ ಪ್ರಾಣಿಗಳಲ್ಲಿ
ದಯವೇ ಧರ್ಮದ ಮೂಲವು"

ಎಂದು ಉದಾರಚಿತ್ತದ ಶ್ರೀ ಬಸವೇಶ್ವರನು ಹೇಳಿದ ಮಾತುಗಳನ್ನು ವಿಶ್ವಪ್ರೇಮಿಯಾದ ಯಾವನು ತಾನೇ ಒಪ್ಪದಿದ್ದಾನು! ಒಂದೇ ಮಾತಿನಲ್ಲಿ ಹೇಳಬೇಕೆಂದರೆ ವೀರಶೈವ ಮತವು ವಿಶ್ವಪ್ರೇಮದ ದೃಷ್ಟಿಯಿಂದಲೇ ಒಂದು ವೇಳೆ ವೇದೋಕ್ತವೆನಿಸಿದರೂ-ಯಜ್ಞಯಾಗಾದಿಗಳಲ್ಲಾಗುವ ಪಶುಹಿಂಸೆಯನ್ನು ಧೈರ್ಯವಾಗಿ ನಿಷೇಧಿಸಿದೆ. ಇದೇ ಅಹಿಂಸೆಯ ದೃಷ್ಟಿಯಿಂದ

ಚಾತುರ್ವರ್ಣ್ಯದ ಗಡಿಬಿಡಿ ಮೀರಿ ಅತಿವರ್ಣಾಶ್ರಮ ತತ್ವವನ್ನು ಸ್ವೀಕರಿಸಿದೆ.

ಯಾವ ಜಾತಿಯವನೇ ಆಗಲಿ ಅವನು ಮುಮುಕ್ಷುವೂ, ಸಸ್ಯಾಹಾರಿಯೂ, ಪ್ರಾಣಿದಯಾಪರನೂ ಆಗಿದ್ದರೆ ಅಂಥವನಿಗೆ ವೀರಶೈವ ಧರ್ಮ ತನ್ನಲ್ಲಿ ಸ್ಥಳವನ್ನು ಕೊಡುತ್ತದೆ. ವರ್ಣಾಶ್ರಮಗಳ ಸಂಕೋಲೆಗಳಲ್ಲಿ ಸಿಕ್ಕಿ ಕಿಂಕರ್ತವ್ಯ ಮೂಢರೂ, ಕ್ವಗಂತವ್ಯ ಮೂಢರೂ ಆದ ಜನರನೇಕರಿಗೆ ವೀರಶೈವ ಮತವು ತನ್ನಲ್ಲಿ ಇಂಬುಗೊಟ್ಟುದು ಇದರಲ್ಲಿರುವ ವಿಶ್ವಪ್ರೇಮದ ದೃಷ್ಟಿಯಿಂದಲೇ. ಈಗಲೂ ಹಿಂದೂಸ್ಥಾನದಲ್ಲಿರುವ ಸುಮಾರು ೫೦ ಲಕ್ಷ ವೀರಶೈವರು ಅಹಿಂಸಾವ್ರತ ಪರಿಪಾಲಕರಾಗಿಯೂ, ಸಸ್ಯಾಹಾರಿಗಳಾಗಿಯೂ ಜೀವಿಸುತ್ತಿರುವುದೇ ಇದಕ್ಕೆ ನಿದರ್ಶನವಾಗಿದೆ.

## ವೀರಶೈವರಲ್ಲಿ ಅಸ್ಪೃಶ್ಯತೆ ಇಲ್ಲ

ಮನುಷ್ಯನು ಪ್ರಾಣಿಕೋಟಿಗಳನ್ನು ಪ್ರೀತಿಸುವಂತೆಯೇ ಮೊದಲು ಮನುಷ್ಯರನ್ನು ಪ್ರೀತಿಸುವುದನ್ನು ಕಲಿಯಬೇಕು. ಹಿಂದೂ ಜನಗಳು ಕೋಟಿಗಟ್ಟಲೆಮಂದಿ ಹರಿಜನ ಬಂಧುಗಳನ್ನು ಅಸ್ಪೃಶ್ಯರೆಂದು ತಿರಸ್ಕರಿಸುತ್ತಿದ್ದುದು ಸರಿಯಷ್ಟೆ! ಮಾನವ ಧರ್ಮಕ್ಕೂ, ನಾಗರೀಕತೆಗೂ ವಿಶ್ವಪ್ರೇಮಕ್ಕೂ ವಿರುದ್ಧವಾದ ಈ ವರ್ತನೆಯನ್ನು ವೀರಶೈವ ಮತವು ಎಷ್ಟೋ ಶತಮಾನಗಳ ಹಿಂದೆಯೇ ಖಂಡಿಸಿದೆ. ವೀರಶೈವರು ಜನ್ಮತಃ ಅಸ್ಪೃಶ್ಯತೆಯನ್ನಾಗಲಿ, ಶೂದ್ರತ್ವವನ್ನಾಗಲಿ ಅಂಗೀಕರಿಸುವುದಿಲ್ಲ. "ಕೂಡಲ ಸಂಗನ ಶರಣರು ಅಖಿಲ ಜೀವಾವಳಿಯ ಲೇಸನೇ ಬಯಸುವರು" ಎಂಬ ಬಸವೇಶ್ವರನ ವಚನದಂತೆ ವೀರಶೈವರು ಸಮಸ್ತ ಮಾನವರನ್ನೂ ತಮ್ಮಂತೆ ಕಾಣುವ ಉದಾರಿಗಳಾಗಿದ್ದಾರೆ. ಗುಣಪ್ರಧಾನವಾದ ವೀರಶೈವ ಮತವು ಪಾಪಿಗಳನ್ನೂ ಪಾಪಕರ್ಮಗಳನ್ನೂ ತಿರಸ್ಕರಿಸುತ್ತದೆಯಾಗಲಿ ಹುಟ್ಟಿನಿಂದ ಒಂದು ಜನಾಂಗವನ್ನೇ ಅಸ್ಪೃಶ್ಯರೆಂದೂ, ಶೂದ್ರರೆಂದೂ ಪಾಪಿಗಳೆಂದೂ ಭಾವಿಸುವುದಿಲ್ಲ.

ವಿಶ್ವಪ್ರೇಮವೇ ಮುಖ್ಯ ಧ್ಯೇಯವಾಗುಳ್ಳ ವೀರಶೈವ ಮತವಿಚಾರವಂತಿರಲಿ, ಇನ್ನು ಆ ಮತವನ್ನು ಅನುಸರಿಸಿ ನಡೆಯುವ ವೀರಶೈವ ಸಮಾಜವನ್ನು ಕುರಿತು ಆಲೋಚಿಸೋಣ, ಹಿಂದಿನಿಂದ ಇಂದಿನವರೆಗೆ ಯಾವನೊಬ್ಬ ಲಿಂಗವಂತನೂ ಪ್ರಾಣಿಗಳ ರಕ್ತಕ್ಕೆಪಾತ ಮನಸ್ಸು ಮಾಡಿಲ್ಲ. ಏಕೆಂದರೆ

ಅವನ ಸಂಸ್ಕೃತಿಯು ಅವನನ್ನು ಹಾಗೆ ಪ್ರೇರೇಪಿಸುವುದಿಲ್ಲ. ರಕ್ತಪಾತದ ಮಾತಂತಿರಲಿ ನಿತ್ಯವ್ಯವಹಾರದಲ್ಲಿಯೂ ಲಿಂಗವಂತನು,ಕಳ್ಳತನ,ವ್ಯಭಿಚಾರ, ಮೋಸ ಮೊದಲಾದುವುಗಳನ್ನು ನಡೆಸಬಾರದೆಂದು ಶರಣರು ಹೇಳುತ್ತಾರೆ.

"ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ, ಮುನಿಯ ಬೇಡ, ಅನ್ಯರಿಗೆ ಅಸಹ್ಯ ಪಡಬೇಡ, ತನ್ನ ಬಣ್ಣಿಸಬೇಡ, ಇದಿರು ಹಳಿಯಲು ಬೇಡ, ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ, ಇದೇ ನಮ್ಮ ಕೂಡಲ ಸಂಗನ ನೊಲಿಸುವ ಪರಿ" ಎಂದು ಶ್ರೀ ಬಸವೇಶ್ವರನು ಸಮಾಜಕ್ಕೆ ಎಚ್ಚರಿಕೆಯನ್ನು ಕೊಟ್ಟಿದ್ದಾನೆ. ಈ ಉಪದೇಶದಂತೆ ಕಾಯೇನ ವಾಚಾ ಮನಸಾ ಜನರನ್ನು ನೋಯಿಸುವುದೂ ಕೂಡ ಪಾಪವೆಂದು ನಿಜವಾದ ಲಿಂಗವಂತನು ತಿಳಿಯುತ್ತಾನೆ. ನಮ್ಮ ಸನಾತನ ಧರ್ಮವೂ ಈ ವಿಷಯ ವನ್ನೇ ಬಗೆಬಗೆಯಿಂದ ಬೋಧಿಸುತ್ತಿದೆ.

ನಮ್ಮ ದೇಶದಲ್ಲಿ ಹಿಂದೆ ಆಗಿಹೋದ,ಕೆಳದಿ,ಬಿಳಿಗಿ,ಸ್ವಾದಿ, ಕೊಡಗು, ಓರುಂಗಲ್ಲು, ಹಾಗಲ್ವಾಡಿ, ಬಿಜ್ಜಾವರ ಮೊದಲಾದ ಲಿಂಗವಂತ ಅರಸರು ಸಕಲ ಧರ್ಮದವರನ್ನೂ ಸಮಾನವಾಗಿ ಕಂಡು ವಿಶ್ವಪ್ರೇಮ ದೃಷ್ಟಿಯಿಂದಲೇ ರಾಜ್ಯಭಾರ ಮಾಡಿದ್ದಾರೆ. ಸಂಸ್ಕೃತ, ಕನ್ನಡ, ತಮಿಳು, ತೆಲುಗು, ಮರಾಠಿ ಮೊದಲಾದ ಭಾಷೆಗಳಲ್ಲಿ ಲೆಕ್ಕವಿಲ್ಲದಷ್ಟು ಗ್ರಂಥಗಳನ್ನು ಬರೆದಿರುವ ವೀರಶೈವ ಕವಿಗಳಾದರೂ ಈ ವಿಶ್ವಪ್ರೇಮವನ್ನೇ ತಮ್ಮ ಕಾವ್ಯಗಳಲ್ಲಿ ವ್ಯಕ್ತಪಡಿಸಿದ್ದಾರೆ. ವೀರಶೈವ ಸಮಾಜದಲ್ಲಿ ಈಗಲೂ ಹಲವು ಮಂದಿ ಶ್ರೀಮಂತರು,ಧರ್ಮಛತ್ರ, ಪಾಠಶಾಲೆ, ಆಸ್ಪತ್ರೆ, ಪಶುವೈದ್ಯಶಾಲೆ, ಕೆರೆ,ಕಟ್ಟೆ, ಬಾವಿ ಮೊದಲಾದವುಗಳ ನಿರ್ಮಾಣ, ವಿದ್ಯಾರ್ಥಿವೇತನ, ಗ್ರಂಥಪ್ರಸಾರ ಇತ್ಯಾದಿ ಮಾರ್ಗಗಳಿಂದ ಲೋಕಸೇವೆ ಮಾಡುತ್ತಿರುವುದು ಕರ್ಣಾಟಕದಲ್ಲಿ ಬಹು ಮಂದಿಗೆ ತಿಳಿದ ಮಾತು. ಇದುವರೆಗೆ ನಾವು ಉದಾಹರಿಸಿದ ವಿಚಾರಗಳಿಂದಲೂ,ತತ್ವಜ್ಞಾನ ದೃಷ್ಟಿಯಿಂದಲೂ ಸಮಾಜದ ಆಚಾರ ವಿಚಾರಗಳಿಂದಲೂ ವೀರಶೈವರು ವಿಶ್ವ ಪ್ರೇಮವನ್ನು ನಡೆಸುತ್ತಿರುವರೆಂಬುದನ್ನು ನಿಷ್ಪಕ್ಷಪಾತಿಗಳಾದ ಜಿಜ್ಞಾಸು ಗಳು ತಿಳಿಯಬಹುದಾಗಿದೆ. ಮಹಾತ್ಮ ಕಬೀರನೂ ಕೂಡ 'ದಯಾ ಧರ್ಮಕಾ ಮೂಲಹೈ' ಎಂದು ಹೇಳಿರುವುದು ವಿಶ್ವಪ್ರೇಮದ ಕಾರಣದಿಂದಲೇ ಅಲ್ಲವೆ?

 

# ಆ ಗ ಮ   ವಾ ಙ್ಮ ಯ

"ಭರತಖಂಡದಲ್ಲಿ ಪ್ರಾಚೀನ ಕಾಲದಿಂದ ಆಧ್ಯಾತ್ಮಿಕ ಪ್ರವೃತ್ತಿ ಹೆಚ್ಚಿನ ಪ್ರಾಮುಖ್ಯತೆ ದೊರೆತಿದೆ. ಹಿಂದುಗಳ ಧರ್ಮಗ್ರಂಥಗಳೆನಿಸಿ ವೇದಗಳು ಮತ್ತು ಆಗಮಗಳು ತಮ್ಮ ಪ್ರಾಚೀನತೆಯಿಂದಲೂ ಉದಾತ್ತ ಭಾವನೆಯಿಂದಲೂ ಜಗತ್ತಿನ ಧಾರ್ಮಿಕ ವಾಙ್ಮಯದಲ್ಲಿ ಶ್ರೇಷ್ಠತಮವೆನಿಸಿವೆ. ವೇದಗಳನ್ನು ಧಾರ್ಮಿಕ ಭಾವನೆಯುಳ್ಳ ಜನ 'ಅನಾದಿ'—'ಅಪೌರುಷೇಯ' ಎಂದು ಭಾವಿಸುತ್ತಾರೆ. ಪ್ರಾಚೀನ ಸಾಂಪ್ರದಾಯದ ಜನರು ವೇದಗಳು ಪರಮೇಶ್ವರನ ಉಸಿರಿಂದೂ, ಆಗಮಗಳು ಮಾತುಗಳಿಂದೂ ಭಾವಿಸಿಕೊಂಡು ಬಂದಿರುತ್ತಾರೆ. ಅಂದ ಸರ್ವಜ್ಞನಾದ ಭಗವಂತನು ವೇದಮಂತ್ರಗಳಲ್ಲಿ ಅಸ್ಪಷ್ಟವಾಗಿ ಹೇಳಿ ಅಭಿಪ್ರಾಯಗಳನ್ನೇ ಆಗಮ ಶ್ಲೋಕಗಳಲ್ಲಿ ಸುಸ್ಪಷ್ಟವಾಗಿ ಹೇಳಿರುತ್ತಾನೆಂಬುದೇ ಇದರ ತಾತ್ಪರ್ಯವಾಗಿದೆ.

ತ್ರಿಕಾಲಾಬಾಧಿತ ತತ್ವಗಳನ್ನು ಹೇಳುತ್ತಿರುವ ಈ ವೇದಗಳು ಮತ್ತು ಆಗಮಗಳು ಪರಮೇಶ್ವರನಿಂದಲೇ ನೇರವಾಗಿ ಹೇಳಲ್ಪಟ್ಟರಲಿ, ಅಥವಾ ಆ ಈಶ್ವರಸ್ಫೂರ್ತಿಯಿಂದ ಜ್ಞಾನಿಗಳಾದ ಮಹರ್ಷಿಗಳ ಮುಖದಿಂದ ಹೇಳಲ್ಪಟ್ಟರಲಿ, ಅವು ಪವಿತ್ರವಾದ ಹಾಗೂ ಉದಾತ್ತವಾದ ವಾಙ್ಮಯವೆಂದು ಹೇಳುವುದರಲ್ಲಿ ಯಾವ ಭಿನ್ನಾಭಿಪ್ರಾಯವೂ ಇಲ್ಲ. ಸ್ಮೃತಿಗಳು ಪುರಾಣಗಳು ನಮ್ಮ ಜನರಿಗೆ ಪ್ರಮಾಣಗಳೆನಿಸಿದರೂ ಇವು ಪೌರುಷೇಯವೆಂಬುದು ಜನರ ನಂಬಿಕೆಯಾಗಿದೆ. ನಮ್ಮ ದೇಶದಲ್ಲಿ ಕೇವಲ ವೇದೋಕ್ತ ಮಾರ್ಗಗಳಲ್ಲಿ ನಡೆಯುತಕ್ಕವರನ್ನು ವೈದಿಕರೆಂದೂ; ಆಗಮೋಕ್ತ ಮಾರ್ಗಗಳಲ್ಲಿ ನಡೆಯುತಕ್ಕವರನ್ನು ತಾಂತ್ರಿಕರೆಂದೂ; ವೇದಗಳಿಗೆ ಪ್ರಾಮುಖ್ಯತೆಯನ್ನು ಕೊಟ್ಟು ಆಗಮಗಳಿಗೆ ಗೌಣಸ್ಥಾನ ಕೊಡುವವರನ್ನು ವೈದಿಕ ತಾಂತ್ರಿಕರೆಂದೂ, ಆಗಮಗಳಿಗೆ ಪ್ರಾಮುಖ್ಯತೆ ಕೊಟ್ಟು ವೇದಗಳಿಗೆ ಗೌಣಸ್ಥಾನ ಕೊಡುವವರನ್ನು ತಾಂತ್ರಿಕ ವೈದಿಕರೆಂದೂ ಕರೆಯುವುದು

ವಾಡಿಕೆಯಾಗಿದೆ. ಇದರಿಂದ ವೇದಾನುಯಾಯಿಗಳು ಇದ್ದಂತೆಯೇ, ಸಮಾಜದಲ್ಲಿ ಶುದ್ಧ ಆಗಮಾನುಯಾಯಿಗಳೂ ಇರುವರೆಂಬುದು ಸ್ಪಷ್ಟವಾಗುತ್ತದೆ. ಇತಿಹಾಸದಲ್ಲಿ ಕಂಡುಬರುವ ಕಾಳಾಮುಖ, ಲಕುಲೀಶ, ಪಾಶುಪತ ಮೊದಲಾದವರು ಕೇವಲ ಆಗಮಾನುಯಾಯಿಗಳಾದ ತಾಂತ್ರಿಕರೆನಿಸಿದ್ದಾರೆ. ಈ ದೆಸೆಯಲ್ಲಿ ವೀರಶೈವರು ತಾಂತ್ರಿಕ ವೈದಿಕರೆನಿಸಿದ್ದಾರೆ.

ನಿಗಮ-(ವೇದ)-ಆಗಮಗಳು ಸಮಾನ ಗೌರವ ಮತ್ತು ಪ್ರಾಮಾಣ್ಯವುಳ್ಳವುಗಳೆಂದು ಶ್ರೀ ನೀಲಕಂಠ ಶಿವಾಚಾರ್ಯರ 'ಕ್ರಿಯಾಸಾರ', ಶ್ರೀ ಅಪ್ಪಯ್ಯ ದೀಕ್ಷಿತರ 'ಶಿವಾರ್ಕಮಣಿ ದೀಪಿಕೆ' ಮೊದಲಾದ ಗ್ರಂಥಗಳಲ್ಲಿ ಹೇಳಿದೆ. ಹಾರೀತ ಮುನಿಯು ಶ್ರುತಿಯು 'ವೈದಿಕೀ ತಾಂತ್ರಿಕೀ' ಎಂಬ ಎರಡು ಬಗೆಯಾಗಿದೆ ಎಂದು ಹೇಳಿರುವುದೂ, 'ವೇದಸಾರಃ ಶಿವಾಗಮಃ' ಎಂಬುದಾಗಿ ಕೆಲವರು ಹೇಳಿರುವುದೂ ಈ ಆಗಮಗಳ ಹಿರಿಮೆಗೆ ನಿದರ್ಶನವಾಗಿದೆ. ಭರತಖಂಡದಲ್ಲಿ ಈಗ ರೂಢಿಯಲ್ಲಿರುವ ಹಿಂದೂಸಮಾಜದ ಆಚಾರ ವಿಚಾರಗಳು ಬಹುಮಟ್ಟಿಗೆ ಆಗಮೋಕ್ತವಾದವುಗಳೇ ಎಂದು ಹಲವು ಸಂಶೋಧಕರು ಅಭಿಪ್ರಾಯ ಪಟ್ಟಿದ್ದಾರೆ. ಮತ್ತೆ ಕೆಲವು ವಿದ್ವಾಂಸರು, ಈ ಆಗಮಗಳು ವೇದ ಪೂರ್ವಕಾಲದಲ್ಲಿ ದೇಶದಲ್ಲಿದ್ದ ದ್ರಾವಿಡ ಜನರ ಧರ್ಮಗ್ರಂಥಗಳಾಗಿರಬೇಕೆಂದೂ, ಆ ವಾಙ್ಮಯವು ಈಗ ಅಗೋಚರವಾಗಿರುವ ಮೂಲದ್ರಾವಿಡ ಭಾಷೆಯಲ್ಲಿದ್ದು ಅನಂತರ ಸಂಸ್ಕೃತಕ್ಕೆ ಭಾಷಾಂತರವಾಗಿರಬೇಕೆಂದೂ ಅಭಿಪ್ರಾಯಪಟ್ಟಿದ್ದಾರೆ. ಆದುದರಿಂದಲೇ ವೇದಗಳಿಗೂ, ಆಗಮಗಳಿಗೂ ಕೆಲವು ಮೂಲತತ್ವಗಳಲ್ಲಿ ಭಿನ್ನಾಭಿಪ್ರಾಯವಿದೆಯೆಂದು ಕೂಡ ಹೇಳಲಾಗಿದೆ.

ದೇವಾಲಯಗಳ ನಿರ್ಮಾಣ, ಮೂರ್ತಿಪೂಜೆಯ ವಿಧಾನ, ನಗರ ನಿರ್ಮಾಣ, ಕೆರೆಕಟ್ಟೆಗಳ ಕಟ್ಟೋಣ ಇತ್ಯಾದಿ ವಿಚಾರಗಳೆಲ್ಲವೂ ಆಗಮಗಳಲ್ಲಿ ಹೇಳಲ್ಪಟ್ಟವೆಯೆಂಬುದು ಆ ವಾಙ್ಮಯದ ಪ್ರಾಮುಖ್ಯತೆಗೆ ಕಾರಣವಾಗಿದೆ. ವೇದಗಳಲ್ಲಿ ಹೇಳಿರುವ ಪ್ರಕೃತಿ ವರ್ಣನೆ, ದಾರ್ಶನಿಕ ವಿಚಾರಗಳು, ಮೋಕ್ಷೋಪಾಯಗಳು ಇವುಗಳನ್ನೆಲ್ಲಾ ಆಗಮಗಳಲ್ಲಿ ಅಲ್ಲಲ್ಲಿ ಕಾಣಬಹುದಾದರೂ, ವೇದಗಳಲ್ಲಿ ಇಲ್ಲದಿರುವ, ವಿಗ್ರಹಾರಾಧನೆ, ಗುಡಿ

ಗೋಪುರ ನಿರ್ಮಾಣ ಇತ್ಯಾದಿ ಶಿಲ್ಪಶಾಸ್ತ್ರಕ್ಕೆ ಸಂಬಂಧಪಟ್ಟ ವಿಚಾರಗಳೂ, ರತ್ನ—ಅಶ್ವ—ಗಜ ಪರೀಕ್ಷಾ ವಿಧಾನಗಳೂ, ಜ್ಯೋತಿಃ ಶಾಸ್ತ್ರಕ್ಕೆ ಸಂಬಂಧಪಟ್ಟ ವಿಚಾರಗಳೂ ಇವುಗಳಿರುವುದರಿಂದ ಅತ್ಯಂತ ಲೌಕಿಕರನ್ನೂ ಕೂಡ ತಮ್ಮ ಕಡೆಗೆ ಆಕರ್ಷಿಸುತ್ತವೆ. ವೈಷ್ಣವಾಗಮಗಳಂತೆಯೇ ಜಿನಾಗಮಗಳೂ ಕೂಡ ಭಾರತೀಯ ಧಾರ್ಮಿಕ ಸಾಹಿತ್ಯದಲ್ಲಿ ನಮ್ಮ ವಿದ್ವಾಂಸರ ಗಮನವನ್ನು ಸೆಳೆದಿವೆ. 'ವೇದ ಮಯೋಃ ಭೇದಂ ನಪಶ್ಯಾಮಃ"ಎಂದು ಆಚಾರ್ಯ ಶ್ರೀಕಂಠನು ಹೇಳಿದ್ದಾನೆ.

ಇನ್ನು ಆಗಮಗಳ ಅಂತರಂಗದ ವಿಚಾರಗಳನ್ನು ಗಮನಿಸುವುದು ಅಗತ್ಯ. ಈ ಆಗಮಗಳು ಶ್ಲೋಕರೂಪದಲ್ಲಿ ನಿರೂಪಿತವಾಗಿವೆ. ಇವು ಸಂಸ್ಕೃತ ಭಾಷೆಯಲ್ಲಿ ಸರಳಶೈಲಿಯಲ್ಲಿದ್ದು ಹಿತಮಿತವಾಗಿ ಹೇಳಲ್ಪಟ್ಟಿವೆ. 'ವೇದಸಾರಃ ಶಿವಾಗಮಃ' ಎಂದು ಶೈವಸಿದ್ಧಾಂತ ಪರಿಭಾಷೆಯಲ್ಲಿ ಹೇಳಿದೆ. ಸಿದ್ಧಾಂತ ಶಿಖಾಮಣಿಯು ಆಗಮಗಳು 'ಪ್ರಾಮಾಣ್ಯಂವೇದವತ್ ಸದಾ' ಎಂದು ಹೇಳಿದೆ.

## ಶಿವಾಗಮಗಳು

ಸರ್ವಜ್ಞನಾದ ಪರಮೇಶ್ವರನು ಪಾರ್ವತಿ, ಷಣ್ಮುಖ, ಅನಂತರುದ್ರ, ಬೃಹಸ್ಪತಿ ಮೊದಲಾದವರನ್ನು ಕುರಿತು ಹೇಳಿದಂತೆ ಶಿವಾಗಮಗಳಲ್ಲಿಯೂ ಶ್ರೀ ಮಹಾವಿಷ್ಣುವು, ಭೃಗು, ಅತ್ರಿ, ಮರೀಚಿ, ಕಶ್ಯಪ ಮೊದಲಾದ ಋಷಿಗಳಿಗೆ ಉಪದೇಶಿಸಿದಂತೆ ಪಾಂಚರಾತ್ರಾದಿ ವೈಷ್ಣವಾಗಮಗಳಲ್ಲಿಯೂ ಹೇಳಲಾಗಿದೆ. ಪ್ರತಿಯೊಂದು ಆಗಮವೂ, ಜ್ಞಾನಪಾದ, ಯೋಗಪಾದ, ಕ್ರಿಯಾಪಾದ, ಚರ್ಯಾಪಾದ ಎಂದು ನಾಲ್ಕು ಭಾಗವಾಗಿ ವಿಭಾಗಿಸಲ್ಪಟ್ಟಿದೆ. 'ಆಗಮ' ಎಂದರೆ 'ಪರಂಪರೆಯಿಂದ ಬಂದುದು' ಎಂದು ಅರ್ಥವಿದೆ.

ಕಾಮಿಕ, ಪಾರಮೇಶ್ವರ, ಸ್ವಾಯಂಭು, ಸುಪ್ರಭೇದ, ಕಾರಣ, ವಾತುಲ ಮೊದಲಾದ ೨೮ ಶಿವಾಗಮಗಳು ಶೈವರಲ್ಲಿ ಪ್ರಸಿದ್ಧವಾಗಿವೆ. ಈ ಎಲ್ಲ ಆಗಮಗಳ ಶ್ಲೋಕಸಂಖ್ಯೆಯು ಎರಡು ಶಂಖ, ಒಂದು ಪದ್ಮ, ಒಂದು ಅರ್ಬುದ, ಹತ್ತೊಂಬತ್ತು ಕೋಟಿ, ಮೂವತ್ತೆಂಟು ಲಕ್ಷ, ಸಾವತ್ತು ನಾಲ್ಕು ಸಾವಿರ (೨೦,೧೦,೦೦,೧೦,೧೯,೩೮,೪೪,೦೦೦) ಎಂದು

ಶ್ರೀ ನಿಜಗುಣ ಶಿವಯೋಗಿಗಳು ತಮ್ಮ 'ವಿವೇಕಚಿಂತಾಮಣಿ' ಎಂಬ ಗ್ರಂಥದಲ್ಲಿ ಹೇಳಿರುತ್ತಾರೆ. ಶೈವಾಗಮಗಳ ಸಂಖ್ಯೆಯೇ ಇಷ್ಟಾದ ಮೇಲೆ ಇನ್ನು ವೈಖಾಸನ, ಪಾಂಚರಾತ್ರ ಮತ್ತು ಜಿನಾಗಮಗಳ ಸಂಖ್ಯೆಯನ್ನೂ ಕೂಡಿಸಿದರೆ ಈ ಆಗಮ ಸಾಹಿತ್ಯದ ವೈಶಾಲ್ಯ ಮತ್ತು ಗಾಂಭೀರ್ಯಗಳನ್ನು ನಾವು ಊಹಿಸುವುದೂ ಕಷ್ಟವಾಗುತ್ತದೆ. ಇದರಿಂದ ಈ ಆಗಮಸಾಹಿತ್ಯದ ವಿರಾಡ್ರೂಪದ ಅರಿವೂ ಆಗುತ್ತದೆ. A ಆಗಮಗಳಿಗೆ ತಂತ್ರಗಳು ಎಂಬ ಹೆಸರೂ ಇವೆ. ಮತ್ತು ಅಜಪವೇದ ಎಂಬ ಹೆಸರೂ ಉಂಟು.

## ಪಾಂಚರಾತ್ರಾಗಮಗಳು

ಭಗವಂತನಾದ ನಾರಾಯಣನು ಪಂಚ (ಐದು) ರಾತ್ರಿಗಳಲ್ಲಿ ಅನಂತ, ಗರುಡ, ವಿಷ್ವಕ್ಸೇನ, ಬ್ರಹ್ಮ ಮತ್ತು ಇಂದ್ರ ಈ ಐವರು ಪ್ರಾಚೀನರಿಗೆ ಉಪದೇಶ ಮಾಡಿದ್ದರಿಂದ ಇವುಗಳಿಗೆ ಪಾಂಚರಾತ್ರಾಗಮಗಳು ಎಂದು ಹೆಸರು ಬಂದಿದೆ. ಈ ಆಗಮಗಳ ಸಂಖ್ಯೆ ನೂರೆಂಟು (೧೦೮) ಎಂಷ್ಟೂ, ಅವುಗಳಲ್ಲಿ ಪಾದ್ಮ, ಈಶ್ವರ, ಸಾತ್ವತ ಇತ್ಯಾದಿಗಳು ಪ್ರಸಿದ್ಧವಾದುವೆಂದೂ ತಿಳಿದು ಬರುತ್ತದೆ. ಶ್ರೀರಂಗ, ಮೇಲುಕೋಟೆ ಮೊದಲಾದ ಕ್ಷೇತ್ರಗಳಲ್ಲಿ ಪಾಂಚರಾತ್ರಾಗಮ ರೀತಿಯಿಂದ ಪೂಜಾಕಾರ್ಯಗಳು ನಡೆಯುತ್ತವೆಂದು ತಿಳಿದು ಬಂದಿದೆ. ಈ ಆಗಮಗಳಲ್ಲಿ ಮುಕ್ತಿ, ಭಕ್ತಿ, ಜ್ಞಾನ, ಯೋಗ, ವೈಶೇಷಿಕ ಎಂಬ ಐದು ವಿಚಾರಗಳನ್ನು ಕುರಿತು ಸೂಕ್ಷ್ಮವಾಗಿ ಹೇಳಲಾಗಿದೆ.

## ವೈಖಾನಸಾಗಮಗಳು

ಶ್ರೀ ಮಹಾವಿಷ್ಣುವು ಆಚಾರ್ಯ ವಿಖಸನರಿಗೆ ಉಪದೇಶ ಮಾಡಿದ ತಂತ್ರಗಳಿಗೆ'ವೈಖಾನಸಾಗಮಗಳು'ಎಂದು ಹೆಸರು ಬಂದಿದೆ. ಈ ವಿಖನಸರು

---

A ಕಾಮಿಕಾದಿ ವಾತುಲ ಪರ್ಯಂತವಾದ ೨೮ ಶಿವಾಗಮಗಳನ್ನು ವೀರಶೈವರು ಪರಮ ಪ್ರಮಾಣವಾಗಿ ತಿಳಿಯುತ್ತಾರೆ. ವೀರಶೈವ ಮತ ತತ್ವಗಳು ಶಿವಾಗಮಗಳಲ್ಲಿ ವಿಸ್ತಾರವಾಗಿ ನಿರೂಪಿಸಲ್ಪಟ್ಟಿವೆ. ವಾತುಲೋತ್ತರದಲ್ಲಿ ಷಟ್ಸ್ಥಲ ತತ್ವವಿದೆ. ಗುಬ್ಬಿ ಮಲ್ಲಣ್ಣಗಳು ಅದಕ್ಕೆ ಕನ್ನಡ ವ್ಯಾಖ್ಯಾನ ಮಾಡಿದ್ದಾರೆ. ಮಗ್ಗೆ ಮಾಯಿದೇವರು ಅನುಭವಸೂತ್ರದಲ್ಲಿ ವಾತುಲದ ಹೆಸರು ಹೇಳಿದ್ದಾರೆ. ಅಲ್ಲಿರುವ ಷಟ್‌ಸ್ಥಲ ತತ್ವಗಳನ್ನೇ ನಾವು ಅವರ ಶಿವಾನುಭವ ಸೂತ್ರದಲ್ಲಿ ಕಾಣಬಹುದು.

ಭಗವಂತನಿಂದ ತಮಗೆ ಉಪದೇಶಿಸಲ್ಪಟ್ಟ ಈ ದಿವ್ಯ ಸಂಹಿತೆಗಳನ್ನು ಶ ತ್ರಾತ್ಮರಾದ, ಕಶ್ಯಪ, ಅತ್ರಿ, ಭೃಗು, ಮರೀಚಿ ಮೊದಲಾದ ಋಷಿಗ ಉಪದೇಶಿಸಿದರು. ಅತ್ರಿಯು ಎಂಭತ್ತೆಂಟು ಸಾವಿರ ಶ್ಲೋಕಗಳ (೮೮,೦೦೦), ಮರೀಚಿಯು ಒಂದು ಲಕ್ಷ ಎಂಭತ್ತು ನಾಲ್ಕು ಸಾವಿರ ಶ್ಲೋ ಗಳನ್ನೂ (೧,೮೪,೦೦೦), ಕಶ್ಯಪರು ಅರುವತ್ತು ನಾಲ್ಕು ಸಾವಿರ ಶ್ಲೋ ಗಳನ್ನೂ(೬೪,೦೦೦), ಭೃಗು ಮುನಿಗಳು ಎಂಭತ್ತೆಂಟು ಸಾವಿರ ಶ್ಲೋ ಗಳನ್ನೂ(೮೮,೦೦೦) ಹೇಳಿರುವಂತೆ ತಿಳಿದು ಬಂದಿದೆ. ಈ ವೈಖಾನಸಾ ಗಳು ಪಾಂಚರಾತ್ರಾಗಮಗಳಿಗಿಂತ ಪ್ರಾಚೀನವಾದುವುಗಳೆಂದೂ, ಈ ಶ ಗಳಲ್ಲಿ ವಿಗ್ರಹ ಮತ್ತು ದೇವಾಲಯ ನಿರ್ಮಾಣ ವಿಷಯಗಳು ವಿಸ್ತಾರ ಹೇಳಲ್ಪಟ್ಟವೆಯೆಂದೂ ಸಂಶೋಧಕರಾದ ಶ್ರೀ ರಾಮಕೃಷ್ಣ ಕವಿಗಳು ಹ ದ್ದಾರೆ. ಶ್ರೀ ಕ್ಷೇತ್ರ ತಿರುಪತಿ, ಬಿಳಿಗಿರಿರಂಗನಬೆಟ್ಟ ಮೊದಲಾದ ಸ್ಥಳಗ ವೈಖಾನಸತಂತ್ರ ರೀತಿಯ ಪೂಜೆಗಳು ನಡೆಯುತ್ತಿವೆ. ದಕ್ಷಿಣ ಭಾ ಕಂಚಿ, ಕಾಳಹಸ್ತಿ, ತಿರುವಣ್ಣಾಮಲೆ, ತಂಜಾವೂರು, ಮಧುರೆ, ರಾಮೇ ಮೊದಲಾದ ಶಿವದೇವಸ್ಥಾನಗಳಲ್ಲೆಲ್ಲ ಶಿವಾಗಮೋಕ್ತ ರೀತಿಯ ಪೂಜ ಗಳು ನಡೆಯುತ್ತಿವೆ.

ಇನ್ನು ಆಗಮೋಕ್ತಗಳಾದ ದೇವಾಲಯಗಳು, ಅಲ್ಲಿ ನಡೆಯ ಪೂಜಾದಿಗಳು, ಅವುಗಳಿಂದಾಗುವ ಲೋಕೋದ್ಧಾರ ಕಾರ್ಯಗಳು ಇತ್ಯಾ ಗಳನ್ನೆಲ್ಲಾ ನಾವು ಈ ಸಮಯದಲ್ಲಿ ಸ್ಮರಿಸುವುದು ಅಗತ್ಯವಾಗಿದೆ. ನ ದೇಶದಲ್ಲಿ ಸುಪ್ರಸಿದ್ಧವಾಗಿರುವ ಕಂಚಿ, ಮಧುರೆ, ರಾಮೇಶ್ವ ತಂಜಾವೂರು, ಶ್ರೀರಂಗ, ಚಿದಂಬರ, ಅನಂತಶಯನ, ಹಳೇಬೀ ಬೇಲೂರು, ಶ್ರವಣಬೆಳಗೊಳ, ಮೂಡಬಿದ್ರೆ, ಹಂಪೆ, ಲೇಪಾಕ್ಷಿ, ಐಹೊ ಪಟ್ಟದಕಲ್ಲು ಮೊದಲಾದ ಸ್ಥಳಗಳಲ್ಲಿರುವ ಶಿಲ್ಪಕಲಾ ವೈಭವದಿಂದ ಕೂ ದೇವಾಲಯಗಳು, ಎಲ್ಲೋರ, ಅಜಂತ, ಬಾದಾಮಿ, ಕಾರ್ಲೆ, ಎಲಿಫೆಂಟಾ, ಕನ್ಹೆ ಮೊದಲಾದ ಸ್ಥಳಗಳಲ್ಲಿರುವ ಗುಹಾಂತರ್ಗತ ದೇವಾಲಯಗಳು, ಮೈಸೂ ನಲ್ಲಿ ಪ್ರಸಿದ್ಧವೆನಿಸಿರುವ, ಹಂಪೆ, ಗೋಕರ್ಣ, ನಂಜನಗೂಡು, ಚಾಮರಾ ನಗರ, ಮಹಾಕೂಟ, ಮೇಲುಕೋಟೆ, ಶೃಂಗೇರಿ, ಕೊಲ್ಲೂರು, ಕೆಳದಿ, ಇಕ್ಕೇ

ಮೊದಲಾದ ಸ್ಥಳಗಳಲ್ಲಿರುವ ದೇವಾಲಯಗಳು ಇವುಗಳ ನಿರ್ಮಾಣಕ್ಕೆ ಈ ಆಗಮ ವಾಙ್ಮಯದ ಪ್ರಭಾವವೇ ಕಾರಣವೆಂದು ನಾವು ಭಾವಿಸಬಹುದು. ಆದುದರಿಂದ ಆಗಮಗಳು ಜನರ ಧಾರ್ಮಿಕ ಭಾವನೆಯ ಜತೆಗೆ, ಶಿಲ್ಪ, ಚಿತ್ರ ಮುಂತಾದ ಲಲಿತ ಕಲೆಗಳ ವಿಕಾಸಕ್ಕೂ ಬಹುಮಟ್ಟಿಗೆ ಕಾರಣವಾಗಿವೆ.

ಒಂದು ಕಾಲದಲ್ಲಿ ಈ ಆಗಮಗಳ ವರ್ಚಸ್ಸು ಕಾಶ್ಮೀರದಿಂದ ಹಿಡಿದು ಕನ್ಯಾಕುಮಾರಿಯವರೆಗೂ ಭಾರತ ದೇಶದಲ್ಲಿ ಹಬ್ಬಿತ್ತೆಂದು ಇತಿಹಾಸದಿಂದ ತಿಳಿದು ಬರುತ್ತದೆ. ಕಂಚಿಯ ಈಶ್ವರದೇವಾಲಯವೊಂದರಲ್ಲಿ ಕ್ರಿ|| ಶ|| ೫ನೇ ಶತಮಾನದ ಶಿಲಾಶಾಸನದಲ್ಲಿ ೨೮ ಶಿವಾಗಮಗಳ ಹೆಸರು ಬಂದಿರುವುದು ಇತಿಹಾಸ ಪಂಡಿತರಿಂದ ಕಂಡುಹಿಡಿಯಲ್ಪಟ್ಟಿದೆ. ಕ್ರಿ|| ಶ|| ೯ ಮತ್ತು ೧೦ನೇ ಶತಮಾನಗಳಲ್ಲಿ ಕಾಶ್ಮೀರ ದೇಶಗಳಲ್ಲಿ ಶಿವಾಗಮಗಳ ಪ್ರಾಬಲ್ಯ ಬಹಳವಾಗಿ ಇದ್ದಿತು. ಮಹಾಭಾರತ, ವರಾಹ, ಕೂರ್ಮ ಪುರಾಣಗಳಲ್ಲಿ ಆಗಮಗಳ ಹೆಸರು ಕಂಡು ಬಂದಿದೆ. ವೇದಗಳಿಗೆ ಭಾಷ್ಯವನ್ನು ಬರೆದ ಶ್ರೀ ಸಾಯಣಾಚಾರ್ಯರು 'ಶೈವಾಗಮ ಸಾರಸಂಗ್ರಹ' ಎಂಬ ಗ್ರಂಥವನ್ನು ಬರೆದು ಆಗಮ ಸಾಹಿತ್ಯದ ಪ್ರಾಮುಖ್ಯತೆಯನ್ನು ಜಗತ್ತಿಗೆ ಸಾರಿ ಹೇಳಿದ್ದಾರೆ. ಆದ್ದರಿಂದಲೇ ಪ್ರೊ|| ಕ್ಯಾಲೆಂಡ್, ಪ್ರೊ|| ಸ್ಕ್ರೇಡರ್, ಮೊದಲಾದ ಪಾಶ್ಚಾತ್ಯ ವಿದ್ವಾಂಸರು, 'ಈ ಉಪಯುಕ್ತವಾದ ಆಗಮಸಾಹಿತ್ಯವನ್ನು ಸಂಗ್ರಹಿಸಿ ಪ್ರಕಟಿಸುವುದು ಮಹತ್ವದ ಕಾರ್ಯ' ಎಂದು ಹೇಳಿರುತ್ತಾರೆ. ಕೆಲವು ವಿದ್ವಾಂಸರು ಪ್ರಾಚೀನ ಶಿವಾಗಮಗಳ ಅಭಿಪ್ರಾಯವನ್ನೇ ಸುಪ್ರಸಿದ್ಧವಾದ ಭಗವದ್ಗೀತೆಯಲ್ಲಿಯೂ ಕಾಣಬಹುದೆಂದು ವಾದಿಸಿರುತ್ತಾರೆ. ವೇದಗಳು ಜನ್ಮ ಪ್ರಧಾನವಾದ ವರ್ಣಾಶ್ರಮ ಧರ್ಮಕ್ಕೂ, ಆಗಮಗಳು ದೀಕ್ಷಾ ಪ್ರಧಾನವಾದ ಭಕ್ತಿಮಾರ್ಗಕ್ಕೂ ಆಶ್ರಯವಾಗಿವೆಯೆಂದೂ, ಆ ಕಾರಣದಿಂದಲೇ ವೇದಗಳಿಗಿಂತಲೂ ಆಗಮಗಳು ಪ್ರಾಚೀನವಾದುವೆಂದೂ ಮತ್ತೆ ಕೆಲವು ವಿದ್ವಾಂಸರು ಅಭಿಪ್ರಾಯಪಟ್ಟಿರುತ್ತಾರೆ.

ದೇವಾಲಯಗಳನ್ನು ಸ್ಥಾಪಿಸುವುದು, ಅಲ್ಲಿ ವಿಧ್ಯುಕ್ತವಾದ ಪೂಜಾದಿ ಕರ್ಮಗಳನ್ನು ಮಾಡಿಸುವುದು, ಭಕ್ತಿಯಿಂದ ಭಗವಂತನನ್ನುಅರ್ಚಿಸುವುದು ಇವುಗಳೆಲ್ಲವೂ ಅತ್ಯಂತ ಪವಿತ್ರವಾದ ಲೋಕೋಪಕಾರಕವಾದ ಕಾರ್ಯವೆಂಬುದರಲ್ಲಿ ಸಂದೇಹವಿಲ್ಲ.

# ಕಲ್ಯಾಣದ ಅನುಭವ ಮಂಟಪ A

"ಅನುಭವ ಮಂಟಪ" ಎಂಬುದು ಚಾಲುಕ್ಯರ ರಾಜಧಾನಿಯಾ ಕಲ್ಯಾಣ ಪಟ್ಟಣದಲ್ಲಿ ೧೨ನೇ ಶತಮಾನದ ಉತ್ತರಭಾಗದಲ್ಲಿ, ಶ್ರೀ ಬಸವೇಶ್ವರಾದಿ ಶಿವಶರಣರು ಸ್ಥಾಪಿಸಿದ ಅಪೂರ್ವವಾದ ಒಂದು ಧಾರ್ಮಿ ಸಂಸ್ಥೆಯ ಹೆಸರು. ಶಿವ ಶರಣರು ತಮ್ಮ ಜೀವನದಲ್ಲಿ ಸತ್ಯ ಧರ್ಮಗಳನ್ನು ತಿಳಿದು ನಡೆದುದರಿಂದ ಉಂಟಾದ ಅರಿವಿಗೆ 'ಅನುಭವ' ಎಂದು ಹೆಸ ಈ ಸಂಸ್ಥೆಯ ಅಧ್ಯಕ್ಷರು ಸಾಹಿತ್ಯ ಕ್ಷೇತ್ರದಲ್ಲಿಯೂ ತತ್ವಜ್ಞಾನ ಪ್ರಪಂ ದಲ್ಲಿಯೂ ವಿಖ್ಯಾತರಾದ ಪ್ರಭುದೇವರು. ಇದರ ಕಾರ್ಯದರ್ಶಿಗಳು ಜ್ಞಾನ ನಿಧಿಗಳಾದ ಚೆನ್ನಬಸವಣ್ಣನವರು. ಇದರ ಸ್ಥಾಪಕ ಸುಪ್ರಸಿದ್ಧಕವಿಗಳೂ ಕಾಲಚೂರ್ಯ ಸಾಮ್ರಾಜ್ಯದ ಮುಖ್ಯಮಂತ್ರಿಗಳ ಭಕ್ತಿಭಂಡಾರಿಗಳೂ ಶರಣ ಶ್ರೇಷ್ಠರೂ ಆದ ಬಸವೇಶ್ವರರು. ಈ ಮಂಟ ಸದಸ್ಯರು ಕನ್ನಡ ಸಾಹಿತ್ಯದಲ್ಲಿ ವಿಖ್ಯಾತರಾಗಿರುವ ಸಿದ್ಧರಾಮೇಶ್ವರ, ಮ ವಳ ಮಾಚಿದೇವ, ಘಟ್ಟಿವಾಳಯ್ಯ, ಮೋಳಿಗೆ ಮಾರಯ್ಯ, ಅಕ್ಕಮಹಾ ದೇವಿ, ನೀಲಾಂಬಿಕೆ, ಅಕ್ಕನಾಗಮ್ಮ, ರೇಮವ್ವೆ, ರೇಚವ್ವೆ, ಸತ್ಯಕ್ಕ ಅರಳಯ್ಯ, ಶಿವನಾಗಿಮಯ್ಯ ಮೊದಲಾದ ಶರಣ ಶರಣೆಯರು. ಈ ಮಂಟಪದ ಮಹತ್ವವನ್ನು ಕೇಳಿ, ಕಾಶ್ಮೀರ, ಗುಜರಾತು, ಆಂಧ್ರ ದ್ರಾವಿಡ ಮೊದಲಾದ ದೂರ ದೂರದ ದೇಶಗಳಿಂದ ಕೂಡ ಜನರು ಕಲ್ಯಾ ಣಕ್ಕೆ ಬಂದಂತೆ ಐತಿಹ್ಯವಿದೆ.

ಈ ಮಂಟಪವು ಕಲ್ಯಾಣ ಪಟ್ಟಣದಲ್ಲಿ ತ್ರಿಪುರಾಂಕನ ಕೆರೆಯ ಗುಡ್ಡ ಮೇಲೆ ಸುಂದರವಾದ ಪ್ರಕೃತಿಯ ಮಧ್ಯದಲ್ಲಿ ವಿರಚಿತವಾಗಿತ್ತು. ಈ ಮಂಟಪವು ವೀರಶೈವದರ್ಶನದಲ್ಲಿರುವ ೩೬ ತತ್ವಗಳ ನಿದರ್ಶವೆಂಬಂತೆ ಮೂ

---

A (ದಿನಾಂಕ ೧೦-೧-೫೮ರ ರಾತ್ರಿ ಬೆಂಗಳೂರು ಆಕಾಶವಾಣಿಯಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ, ಆಸ್ಥಾನ ವಿದ್ವಾನ್, ಪಂಡಿತ ರತ್ನಂ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು ಮಾಡಿದ ಭಾಷಣ.)

ಶೂನ್ಯಸಿಂಹಾಸನಾಧೀಶ್ವರ ನಿರಂಜನ ಜಗದ್ಗುರು



ಅಲ್ಲಮ ಪ್ರಭುಗಳ ಪಾದಪೂಜೆ
(ಕಲ್ಯಾಣದ ಅನುಭವ ಮಂಟಪದಲ್ಲಿ)

ತ್ತಾರು ಕಂಭಗಳಿಂದಲೂ, ನಾಲ್ಕು ಮಹಾದ್ವಾರಗಳಿಂದಲೂ ಕೂಡಿತ್ತು. ಇದರ ಅಧ್ಯಕ್ಷ ಪೀಠಕ್ಕೆ 'ಶೂನ್ಯ ಸಿಂಹಾಸನ' ಎಂದು ಹೆಸರು. ಚರಿತ್ರೆಯಲ್ಲಿ ಕಲ್ಯಾಣ ಪಟ್ಟಣವು ಅತ್ಯಂತ ಪ್ರಸಿದ್ಧವಾದುದು. ಅದನ್ನು ಚಾಲುಕ್ಯ ರಾಜನಾದ ಆವಹಮಲ್ಲ ಸೋಮೇಶ್ವರನು ಕ್ರಿ. ಶ. ೧೦೫೨ ರಲ್ಲಿ ಕಟ್ಟಿಸಿದನು. ಇವನು 'ಮಾನಸೋಲ್ಲಾಸ'ಎಂಬ ಸಂಸ್ಕೃತ ಗ್ರಂಥವೊಂದನ್ನು ರಚಿಸಿರುವನು. ಇವನ ಅನಂತರ ಶಕಪುರುಷನಾದ ಚಾಲುಕ್ಯ ವಿಕ್ರಮಾದಿತ್ಯ ಮೊದಲಾದ ಸುಪ್ರಸಿದ್ಧ ಚಕ್ರವರ್ತಿಗಳು ಅಲ್ಲಿ ಆಳಿ ಬಾಳಿದರು. ಆ ಕಾಲದಲ್ಲಿ ಈ ಪಟ್ಟಣವನ್ನು ಕುರಿತು ವಿಜ್ಞಾನೇಶ್ವರನೆಂಬ ಕವಿಯು 'ನಾಸೀದಸ್ತಿ ಭವಿಷ್ಯತಿ ಕ್ಷಿತಿತಲೇ ಕಲ್ಯಾಣ ಕಲ್ಪಂಪುರಂ' ಎಂದು ಹೇಳಿರುವನು. ಶಿವಶರಣರು ಕಲ್ಯಾಣವನ್ನು 'ಅವಿಮುಕ್ತ ಕ್ಷೇತ್ರ'ಎಂದು ಹೊಗಳಿದವರು. ಈ ಕಲ್ಯಾಣಪಟ್ಟಣದಲ್ಲಿ ಇಂದಿಗೂ ಶಿವಶರಣರ ತಪೋಭೂಮಿಗಳೆನಿಸಿದ ಅಸಂಖ್ಯಾತ ಗುಹೆಗಳನ್ನು ನಾವು ಕಣ್ಣಾರ ಕಾಣಬಹುದು. ಅವರು ಸ್ನಾನ ಮಾಡುತ್ತಿದ್ದ ಕೆರೆ, ಅವರು ಶಿವಪೂಜೆ ಮಾಡುತ್ತಿದ್ದ ಬಿಲ್ವವನ ಇವುಗಳನ್ನೆಲ್ಲಾ ನಾವಿಂದು ನೋಡಬಹುದು. ಬಿಜ್ಜಳನ ಅರಮನೆಯ ನೆಲಗಟ್ಟು, ಬಸವಣ್ಣನವರ ಮಹಾಮನೆಯ ಪ್ರದೇಶ. ತ್ರಿಪುರಾಂಕನ ಕೆರೆ, ಮಾಚಯ್ಯನಹೊಂಡ, ಪರುಷಗಟ್ಟೆ ಮೊದಲಾದ ಪ್ರಾಚೀನ ಸ್ಮಾರಕಗಳನ್ನು ನಾವು ಇಂದಿಗೂ ಅಲ್ಲಿ ನೋಡಬಹುದು. ಇಂತಹ ಕಲ್ಯಾಣಪಟ್ಟಣದಲ್ಲಿ ಅನುಭವ ಮಂಟಪವು ಕಲ್ಯಾಣ ಮಂದಿರದ ಸುವರ್ಣಗೋಪುರದಂತೆ ಕಂಗೊಳಿಸುತ್ತಿತ್ತು. ಅನುಭವ ಮಂಟಪವು 'ವೀರಶೈವ ಹೃದಯ' (The Anubhava mantapa is the heart of Veerasivisam) ಎಂಬ ಜಾಣರ ಮಾತನ್ನು ನಾವಿಲ್ಲಿ ಸ್ಮರಿಸಬೇಕು.

ಅದೇ ನಗರದಲ್ಲಿದ್ದ ವಿಚಾರ ಮಂಟಪ, ಪ್ರಕಾಶ ಮಂಟಪ, ಜ್ಞಾನ ಮಂಟಪ, ಪ್ರಸಾದ ಮಂಟಪ ಮೊದಲಾದವುಗಳಿಗೆಲ್ಲ ಈ ಅನುಭವ ಮಂಟಪವು ಶಿರೋಮಣಿಪ್ರಾಯವೆನಿಸಿತ್ತು. ಈ ಅನುಭವ ಮಂಟಪದ ಕಾರ್ಯಕಲಾಪಗಳನ್ನು ಪರಿಶೀಲಿಸಿದರೆ ಉಪನಿಷತ್ ಕಾಲದ ಋಷ್ಯಾಶ್ರಮಗಳು,

 

ಬೌದ್ಧರಕಾಲದ ವಿಹಾರಗಳು, ದ್ರಾವಿಡದೇಶದ ಸಂಘಗಳು, ತಕ್ಷಶಿ
ನಲಂದ, ವಿಕ್ರಮಶಿಲೆ, ಕಂಚಿ, ಐಹೊಳೆ, ಸ್ಥಾನಗುಂದ, ವಿಜಯ
ಮೊದಲಾದ ಕಡೆಗಳಲ್ಲಿದ್ದ ಸಕಲವಿದ್ಯಾನಿಲಯಗಳು ನಮ್ಮ ನೆನಪಿಗೆ ಬ
ತ್ತವೆ.

'ಅನುಭವ'ಎಂಬ ಮಾತಿಗೆ 'ಮನುಷ್ಯನ ಜೀವನದಲ್ಲಿ ಹಿಂದೆ ಆ
ದರ ನೆನಹು' ಎಂಬುದು ಸಾಮಾನ್ಯವಾದ ಅರ್ಥ. ಆದರೆ' ಶಿವಶ
ಈ ಶಬ್ದಕ್ಕೆ ಒಂದು ವಿಶೇಷವಾದ ಅರ್ಥವನ್ನು ಕಲ್ಪಿಸಿದ್ದಾರೆ. 'ಅನುಭ
ಎಂಬುದಕ್ಕೆಪರ್ಯಾಯವಾಗಿ ಶಿವಾನುಭಾವ ಎಂದುಹೇಳಿ'ಶಿವಸ್ಯಅನುಭ
ಶಿವಾನುಭಾವಃ' ಅಂದರೆ ಜೀವ-ಶಿವರ ಸಂಬಂಧವಾದ ನೆನಹು ಯಾವುದ
ಅದು 'ಅನುಭಾವ'ಎಂದು ಹೇಳಿದ್ದಾರೆ. ಈ ಅನುಭವ ಮಂಟಪದಲ್ಲಿ ಹತ್ತ
ವರ್ಷಗಳ ಕಾಲ ಶಿವಶರಣರು ನಡೆಸಿದ ತಾತ್ವಿಕ ಚರ್ಚೆಯ ಪರಿಣಾ
ವಾಗಿ ಕನ್ನಡದಲ್ಲಿ 'ವಚನ ಸಾಹಿತ್ಯ' ಎಂಬ ಮಹೋನ್ನತವಾದ ಒ
ವಾಙ್ಮಯ ರಾಶಿ ನಿರ್ಮಾಣವಾಗಿದೆ. ಶರಣರ ಅನುಭವಪೂರ್ಣ
ಈ ವಚನಗಳು ಕನ್ನಡದ ಉಪನಿಷತ್ತುಗಳು, ಕನ್ನಡದ ಶಿವಾಗಮಗ
ಎಂದು ಪ್ರಾಜ್ಞರು ಹೇಳಿದ್ದಾರೆ. ನಮ್ಮ ಸಾಹಿತ್ಯದಲ್ಲಿ ಪ್ರಖ್ಯಾತ
ಸಿರುವ ಶೂನ್ಯ ಸಂಪಾದನೆ,ಗಣಭಾಷ್ಯ ರತ್ನಮಾಲೆ, ಲಿಂಗಲೀಲಾವಿಲಾ
ಬಸವಣ್ಣನವರ ವಚನಗಳು, ಪ್ರಭುದೇವರು, ಸಿದ್ಧರಾಮೇಶ್ವರ, ಮೋ
ಮಾರಯ್ಯ, ಅಕ್ಕಮಹಾದೇವಿ, ಸತ್ಯಕ್ಕ, ಲಿಂಗಮ್ಮ ಮೊದಲಾದ
ವಚನಗಳು, ಇವೆಲ್ಲವೂ ಅನುಭವ ಮಂಟಪದ ಸಾಹಿತ್ಯವೆನಿಸಿವೆ. ಈ
ಭವ ಮಂಟಪಕ್ಕೆ ಸದಸ್ಯರಾಗತಕ್ಕವರು, ಶಿವಭಕ್ತಿಸಂಪನ್ನರಾಗಿ, ಶಿವದೀ
ಸಂಸ್ಕಾರಯುಕ್ತರಾಗಿ, ಇಷ್ಟ, ಪ್ರಾಣ, ಭಾವ, ಎಂಬ ತ್ರಿವಿಧ ಲಿಂಗಗಳ
ಸ್ಥೂಲ, ಸೂಕ್ಷ್ಮ, ಕಾರಣ ಎಂಬ ತ್ರಿವಿಧದೇಹಗಳಲ್ಲಿ ಅನುವಾ
ಪೂಜಿಸತಕ್ಕವರಾಗಿ, ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾ
ಭಸ್ಮ, ರುದ್ರಾಕ್ಷ, ಮಂತ್ರ ಎಂಬ ಕ್ರಿಯಾಪ್ರಧಾನವಾದ ಅಷ್ಟಾವರಣಗಳ
ಆಚರಿಸತಕ್ಕರಾಗಿ, ಶಿವಾಚಾರ, ಸದಾಚಾರ, ಲಿಂಗಾಚಾರ, ಗಣಾಚಾ
ಭೃತ್ಯಾಚಾರ ಎಂಬ ನೀತಿಪ್ರಧಾನವಾದ ಪಂಚಾಚಾರಗಳನ್ನು ಪಾ

ತಕ್ಕವರಾಗಿ, ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂಬ ಜ್ಞಾನ ಪ್ರಧಾನವಾದ ಷಟ್‌ಸ್ಥಲಗಳನ್ನು ಅನುಸಂಧಾನ ಮಾಡತಕ್ಕವರಾಗಿ ಭಕ್ತಿ, ಜ್ಞಾನ, ವೈರಾಗ್ಯಸಂಪನ್ನರಾಗಿ ಇರಬೇಕೆಂಬ ನೇಮವಿದೆ. "ನಡೆದಂತೆ ನುಡಿ, ನುಡಿದಂತೆ ನಡಿ, ಇವೆರಡೂ ಶ್ರೀ ಗುರುವಿನ ಅಡಿ" ಎಂಬುದು ಅನುಭವ ಮಂಟಪದ ದಿವ್ಯ ಸಂದೇಶವೆನಿಸಿದೆ.

ಅನುಭವ ಮಂಟಪದ ಅಧ್ಯಕ್ಷಪೀಠದ ಹೆಸರು 'ಶೂನ್ಯಸಿಂಹಾಸನ' ಎಂದು ಹೇಳಲಾಯಿತಷ್ಟೆ. ಅದರ ಅರ್ಥವಿವರಣೆಯಲ್ಲಿಯೂ ತುಂಬ ಸ್ವಾರಸ್ಯವಿದೆ. ಅನುಭವ ಮಂಟಪದ ಸಾಹಿತ್ಯದಲ್ಲಿ 'ಶೂನ್ಯ' ಎಂಬ ಶಬ್ದಕ್ಕೆ 'ಶಿವ' ಎಂಬ ಅರ್ಥವಿದೆ. 'ಶೂನ್ಯ' ಎಂಬ ಶಬ್ದಕ್ಕೆ ಬೇರೆಬೇರೆ ಧರ್ಮಗಳಲ್ಲಿ, ಬೇರೆಬೇರೆ ಶಾಸ್ತ್ರಗಳಲ್ಲಿ ಭಿನ್ನಭಿನ್ನ ಅರ್ಥಗಳಿವೆ. ಪ್ರಕೃತ ಶಿವಶರಣರ ಶಾಸ್ತ್ರದಲ್ಲಿ 'ಶೂನ್ಯ' ಶಬ್ದಕ್ಕೆ 'ಶಿವ' ಎಂಬ ಅರ್ಥವು ಸ್ಪಷ್ಟವಾಗಿದೆ. 'ಶೂನ್ಯಪೀಠ' ಎಂದರೆ ಶಿವಧರ್ಮವನ್ನು ಬೋಧಿಸುವ ಪೀಠ ಎಂದು ಅರ್ಥ. 'ಶೂನ್ಯಸಂಪಾದನೆ' ಎಂದರೆ ಶಿವನನ್ನು ಸಂಪಾದಿಸಿ ಕೊಡುವ ಗ್ರಂಥ ಎಂದು ಅರ್ಥ. ಭಾರತದೇಶದಲ್ಲಿ, ವೈದಿಕ, ಜೈನ, ಬೌದ್ಧ, ವೈಷ್ಣವ ಸಾಹಿತ್ಯಗಳಲ್ಲಿ ಕೂಡ ಇಂತಹ ಪಾರಿಭಾಷಿಕ ಶಬ್ದಗಳನ್ನು ನಾವು ಕಾಣಬಹುದು. ವ್ಯಕ್ತಿ ಎಷ್ಟೊಂದು ಓದಿರುವನೆಂಬ ವಿಷಯಕ್ಕೆ ಅನುಭವ ಮಂಟಪದಲ್ಲಿ ಅಷ್ಟು ಪ್ರಾಮುಖ್ಯತೆ ಇರಲಿಲ್ಲ. ಅವನು ಎಷ್ಟು ವಿಷಯಗಳನ್ನು ಅನುಷ್ಠಾನಕ್ಕೆ ತಂದಿರುವನು ಎಂಬ ವಿಷಯಕ್ಕೆ ಅಲ್ಲಿ ಪ್ರಾಮುಖ್ಯತೆ ಇತ್ತು. ಆದುದರಿಂದಲೇ ಜ್ಞಾನಕರ್ಮಗಳ ಸಮುಚ್ಚಯ ಅಂದರೆ ತಿಳಿವಳಿಕೆ ಮತ್ತು ನಡವಳಿಕೆಗಳು ಏಕರೂಪಗಳನ್ನು ತಾಳುವುದು. ಶಿರಸ್ಸು, ಹೃದಯಗಳ ಮಿಲನ ಅಂದರೆ, ವ್ಯಕ್ತಿಯ ವಿಚಾರಗಳು ಮತ್ತು ಆಚಾರದಲ್ಲಿ ಸಮರಸ ಕಂಡುಬರುವುದು 'ಅನುಭವದ ಲಕ್ಷಣ' ಎಂದು ಶರಣರು ಅರ್ಥಮಾಡಿದ್ದಾರೆ. 'ಪ ರ ಸ್ತ್ರೀ ಯ ರ ನ್ನು ನೋಡಬಾರದು ಎಂಬುದು ಜ್ಞಾನ, ಆದರಂತೆ ನಡೆಯುವುದು ಕ್ರಿಯೆ' ಎಂದು ಚೆನ್ನಬಸವಣ್ಣನವರು ಹೇಳಿದ್ದಾರೆ.

ಅನುಭವ ಮಂಟಪದಲ್ಲಿ, ದೇವರು, ಜೀವರು, ಜಗತ್ತು, ಜೀವನ, ಜಾತಿ, ಕುಲ, ಕರ್ಮ, ಜ್ಞಾನ, ಯೋಗ, ಧರ್ಮ, ದರ್ಶನ, ತ್ಯಾಗ,

ಭೋಗ, ವಿಜ್ಞಾನ, ಸುಜ್ಞಾನ, ವರ್ಣ, ಆಶ್ರಮ, ಸ್ಪೃಶ್ಯ, ಅಸ್ಪೃ ಸ್ತ್ರೀ, ಪುರುಷ, ಸ್ವರ್ಗ, ನರಕ, ಮೋಕ್ಷ, ವೇದ, ಶಾಸ್ತ್ರ, ಪುರಾ ಆಗಮ ಇತ್ಯಾದಿ ಎಲ್ಲ ವಿಚಾರಗಳ ಬಗ್ಗೆಯೂ ಹೃದಯಂಗಮ ಮತ್ತು ಅನುಭವ ಪೂರ್ಣವಾದ ಚರ್ಚೆ ನಡೆದಿದೆ. ಕಲ್ಯಾಣದ ಶರ "ಸಕಲ ಜೀವಾವಳಿಯ ಲೇಸನೇ ಬಯಸುವರು" ಎಂದು ಬಸವಣ್ಣನ ಹೇಳಿರುವಂತೆ ವಿಶ್ವಬಂಧುತ್ವದ ಉದಾರತತ್ವಗಳ ಮೇಲೆಯೇ ನಡೆಯುತ್ತಿತ್ತು. ಅಲ್ಲಿ ನಡೆದ ವಾದವಿವಾದಗಳ ಫಲಿತಾಂಶವೇ ಕ ದಲ್ಲಿ ದಿವ್ಯವಾದ ವಚನಶಾಸ್ತ್ರವೆನಿಸಿದೆ. ಈ ವಾಙ್ಮಯವು ವಿಶ್ವಸಾ ಒರೆಗಲ್ಲಿನಲ್ಲಿ ನಿಲ್ಲತಕ್ಕದ್ದು, ವಿಶ್ವದ ಶಾಂತಿಗೆ ಸಾಧಕವಾದುದು, ರಾ ಅಭ್ಯುದಯಕ್ಕೆ, ಹಾಗೂ ಸಕಲಧರ್ಮಗಳ ಸಮನ್ವಯಕ್ಕೆ ಅರ್ಹವಾ ಎಂದು ವಿಚಾರಪರರು ಹೇಳಿದ್ದಾರೆ.

ಈ ಅನುಭವ ಮಂಟಪದ ಶರಣರು ಈ ಮುಂದೆ ಹೇ ಸನಾತನವಾದ ಸಿದ್ಧಾಂತಗಳನ್ನು ತಮ್ಮ ಅಧ್ಯಯನ ಮತ್ತು ಅನುಭ ಬಲದಿಂದ ಹೇಳಿದ್ದಾರೆ.

೧. ದೇವನೊಬ್ಬ ನಾಮ ಹಲವು, ಒಬ್ಬನೇದೇವನೆಂಬುದು ವ

೨. ದಯೆ ಇಲ್ಲದ ಧರ್ಮವಾವುದಯ್ಯಾ, ದಯೆಯೇ ಧರ್ಮದ ಮೂ

೩. ಕಾಯಕವೇ ಕೈಲಾಸ. ಕೈಕೆಸರು ಬಾಯಿ ಮೊ ಸೋಮಾರಿಯು ದೇವರಿಗೆ ಶತ್ರು (ಉಮಯಾ ಸಹಿತಃ ಸೋ ಸೋಮಸ್ಯ ಅರಿಃ-ಸೋಮಾರಿಃ)

೪. 'ವರ್ಣಾನಾಂ ಕಿಂ ಪ್ರಯೋಜನಂ' ಎಂಬ ಆಗಮ ವಾಕ್ಯ ಸಮಾಜದಲ್ಲಿ ತರತಮ ಭಾವದ ವರ್ಣನೆಗಳು, ಜಾತಿಗಳು ಇರಬಾ ದೇವನೊಲಿದಾತನೇ ಕುಲಜನು.

೫. ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟ, ಇಲ್ಲಿ ಸ ವವರು ಅಲ್ಲಿಯೂ ಸಲ್ಲುವರು. ಸಂಸಾರ ದುಃಖವಲ್ಲ, ಅದು ಶಿ ಲೀಲಾವಿಲಾಸ,

೬. ಅಸ್ಪೃಶತೆ, ಜಾತಿಭೇದಗಳು ಸಮಾಜದಲ್ಲಿ ಇರಬಾರದು.

೭. ಅರಿದರೆ ಶರಣ, ಮರೆದರೆ ಮಾನವ. ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ.

೮. ಧರ್ಮದ ದೃಷ್ಟಿಯಲ್ಲಿ ಸ್ತ್ರೀಪುರುಷರು ಸಮಾನರು.

೯. ಸತ್ಯವನುಡಿವುದೇ ದೇವಲೋಕ, ಮಿಥ್ಯೆಯನುಡಿವುದೇ ಮರ್ತ್ಯಲೋಕ.

೧೦. ಹೆಣ್ಣು, ಹೊನ್ನು, ಮಣ್ಣುಗಳು ಮಾಯೆಯಲ್ಲ, ಮನದ ಮುಂದಣ ಆಶೆಯೇ ಮಾಯೆ,

೧೧. ಮಾತೆಂಬುದು ಜ್ಯೋತಿರ್ಲಿಂಗ, ಅಯ್ಯಾ ಎಂದಡೆ ಸ್ವರ್ಗ, ಎಲವೋ ಎಂದಡೆ ನರಕ. ವಿದ್ಯೆಗೆ ವಿನಯವೇ ಭೂಷಣ. ಮಾತಿನಲ್ಲಿ ತಪಸ್ಸು ಬೇಕು.

೧೨. ಜಗತ್ತಿನಲ್ಲಿ ಹುಟ್ಟಿದ ಬಳಿಕ ಸ್ತುತಿ ನಿಂದೆಗಳಿಗೆ ಅಂಜಬಾರದು ಅಳುಕಬಾರದು' ಸಮಾಧಾನಿಯಾಗಿರಬೇಕು.

೧೩. ಸಮಾಜದ ಐಶ್ವರ್ಯ ಅಧಿಕಾರಗಳನ್ನು ಎಲ್ಲರೂ ಸಮನಾಗಿ ಹಂಚಿಕೊಳ್ಳಬೇಕು. ದೇವರ ದೃಷ್ಟಿಯಲ್ಲಿ ಎಲ್ಲರೂ ಸಮಾನರು, ಅಪರಿಗ್ರಹತತ್ವಬೇಕು. ಅದರಿಂದ ಜನತೆಯಲ್ಲಿ ಬಾಂಧವ್ಯ ಹೆಚ್ಚುವುದು.

೧೪. ಇಂದಿಂಗೆಂತು, ನಾಳಿಂಗೆಂತು ಎಂದು ಚಿಂತಿಸಬಾರದು. ತಂದಿಕ್ಕುವ ದೇವಂಗೆ ಬಡತನವೆ? ಹಸು ಸಾಯುವಾಗ ಕರುವಿಗೆ ಬಣವೆ ಹಾಕುವುದೆ? ನಂಬು ನಮ್ಮ ಕೂಡಲಸಂಗನ.

೧೫. ಎನಗಿಂತ ಕಿರಿಯರಿಲ್ಲ. ಶರಣಗಿಂತ ಹಿರಿಯರಿಲ್ಲ. ಇದೇ ದಾಸೋಹಂಭಾವ, ಭೃತ್ಯಾಚಾರದ ತಿರುಳು.

೧೬. ತ್ರಿವಿಧ ದಾಸೋಹವು ಸಮಾಜದ ಅಭ್ಯುದಯಕ್ಕೆ ಕಾರಣ.

೧೭. 'ಅನುಭವಿಯ ವೇದವನೇ ವೇದ' ಶಾಸ್ತ್ರ ಪುರಾಣಗಳು ನುಚ್ಚುತೌಡು ಕಾಣಿಭೋ.

೧೮. ಅನುಭವವೇ ಜೀವನದ ಕೈದೀವಿಗೆ. ಕಾಯಕ ಹೊಟ್ಟೆಗೆ, ಅನುಭವ ಮುಕ್ತಿಗೆ. ಸಿದ್ಧಾಂತಕ್ಕಿಂತ ಅನುಭವ ಮುಖ್ಯವೆನಿಸಿದೆ. ದರ್ಶನ ಬಹುಮುಖ, ಅನುಭವ ಏಕಮುಖ.

೧೯. ಜಗತ್ತು ನಶ್ವರವಲ್ಲ, ಅದು ಪರಬ್ರಹ್ಮನ ಕಾರ್ಯ, ಆ ಕಾರಣ ಅದು ಸತ್ಯ.

೨೦. ಹೆಣ್ಣು ಮಾಯೆಯಲ್ಲ, ಅದು ಪಾರ್ವತಿಯ ಸ್ವರೂಪ. ಪರ ವನಿತೆಯನು ಮಹಾದೇವಿಯೆಂಬೆ. ಸ್ತ್ರೀ ನಿಕೃಷ್ಟಳಲ್ಲ. ಅವಳು ಆದಿಶಕ್ತಿ.

ಈ ಸಿದ್ಧಾಂತಗಳು ವಿಶ್ವಧರ್ಮಕ್ಕೂ ಭಾರತದ ಇಂದಿನ ಘಟನೆಗೂ ಎಷ್ಟೊಂದು ಅನುಗುಣವಾಗಿವೆ ಎಂಬುದನ್ನು ನಾವು ಅರಿಯಬಹುದು. ಶಿವ ಶರಣರು ಭಕ್ತಿ ಜ್ಞಾನ ವೈರಾಗ್ಯಗಳಿಂದ ಕೂಡಿದ ಪರಿಶುದ್ಧವಾದ ಜೀವನ ವುಳ್ಳವರು. ಆಶೆ ಅಂಜಿಕೆಗಳಿಲ್ಲದ ಕೆಚ್ಚೆದೆಯ ಕಟ್ಟಾಳುಗಳು. ಧರ್ಮ ಸ್ವಾತಂತ್ರ್ಯ, ವಿಚಾರ ಸ್ವಾತಂತ್ರ್ಯಕ್ಕಾಗಿ ತಮ್ಮ ಜೀವನವನ್ನು ಒಪ್ಪಿಸಲು ಸಿದ್ಧರಾದವರು. "ಉದಾರ ಚರಿತಾನಾಂತು ವಸುಧೈವ ಕುಟುಂಬಕಂ" ಎಂಬ ಆರ್ಯೋಕ್ತಿಯಂತೆ ನುಡಿದು ನಡೆದವರು. "ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ" ಎಂಬ ಗೀತೋಕ್ತಿಯಂತೆ ನಿಷ್ಕಾಮದಿಂದ ನಡೆ ದವರು. ಅನಾಸಕ್ತ ಯೋಗಿಗಳು. ತನ್ನೊಬ್ಬನ ಮೋಕ್ಷಕ್ಕಿಂತ ಸಾಮೂ ಹಿಕ ಮೋಕ್ಷವನ್ನು ಬಯಸಿದ ಪೂರ್ಣಯೋಗಿಗಳು. ಸಾಕ್ರಟೀಸನ ಸತ್ಯ, ಅರಿಸ್ಟಾಟಲನ ವಾದ ಶಕ್ತಿ, ಕನ್‌ಫ್ಯೂಷಿಯಸ್ಸನ ಭೂತಾನುಕಂಪ, ಶ್ರೀ ಕೃಷ್ಣನ ಕರ್ಮಯೋಗ, ಬುದ್ಧನ ಸರ್ವಸಮತೆ, ಮಹಾವೀರನ ಅಹಿಂಸೆ, ಯೇಸೂಕ್ರಿಸ್ತನ ಆತ್ಮಾರ್ಪಣಭಾವ, ಪೈಗಂಬರ ಮಹಮ್ಮದನ ಬಂಧು ಪ್ರೇಮ, ಕಾಳಿದಾಸನ ಪ್ರತಿಭೆ, ವಿದ್ಯಾರಣ್ಯರ ಸರ್ವಜ್ಞತ್ವ, ಶಂಕರಾಚಾರ್ಯರ ದಿವ್ಯಜ್ಞಾನ, ರಾಮಾನುಜರ ನಿಶ್ಚಿತಜ್ಞಾನ, ಮಧ್ವಾಚಾರ್ಯರ ಅನುಭವ ಜ್ಞಾನ, ಗಾಂಧಿಜಿಯ ಅನಾಸಕ್ತಯೋಗ, ಪರಮಹಂಸರ ಸಮನ್ವಯ ದೃಷ್ಟಿ, ಅರವಿಂದರ ಪೂರ್ಣಯೋಗ, ವಿವೇಕಾನಂದರ ದರ್ಶನ ಪಾಂಡಿತ್ಯ, ಕಬೀರನ ಭಕ್ತಿಯೋಗ, ತುಕಾರಾಮನ ವಿಶ್ವಪ್ರೇಮ ಮೊದಲಾದುವುಗಳನ್ನು ನಾವು ಇಲ್ಲಿ ಕಾಣಬಹುದು. ಜೀವನುತ್ತುಪ್ತದಲ್ಲಿ ಎಲ್ಲ ತೂವುಗಳ ರಸವನ್ನೂ ನಾವು

ಹೇಗೆ ಸವಿಯಬಹುದೋ, ಸಮುದ್ರಸ್ನಾನದಿಂದ ಎಲ್ಲ ತೀರ್ಥಗಳ ಪುಣ್ಯವನ್ನೂ ಹೇಗೆ ನಾವು ಏಕಕಾಲದಲ್ಲಿ ಪಡೆಯಬಹುದೋ ಹಾಗೆಯೇ ವಚನ ಶಾಸ್ತ್ರದ ಅಧ್ಯಯನದಿಂದ ವಿಶ್ವದ ಸಕಲಧರ್ಮಗಳ, ಸಕಲ ಶಾಸ್ತ್ರಗಳ ಸಾರಸಮನ್ವಯವನ್ನೂ ನಾವು ಅರಿಯಬಹುದಾಗಿದೆ. ಶಿವಶರಣರು ಅಘಟಿತ ಘಟನಾ ಸಾಮರ್ಥ್ಯವುಳ್ಳವರು. ಇತರಕಡೆ ಪರಸ್ಪರ ವಿರೋಧವಾದ ದ್ವೈತ ಅದ್ವೈತ ಅಲ್ಲಿ ಒಮ್ಮುಖವಾಗಿವೆ. ದ್ವೈತವು ಸಾಧನೆಗೂ, ಅದ್ವೈತವು ಸಿದ್ಧಿಗೂ ಕಾರಣವೆಂದು ಅವರ ಭಾವ. ಇದರಿಂದ ಸರ್ವ ಶ್ರುತಿ ಸಮನ್ವಯತ್ವ ಶರಣರ ತತ್ವಗಳಿಗೆ ಬರುತ್ತದೆ. ಪೂರ್ವೋತ್ತರ ಮೀಮಾಂಸಗಳಲ್ಲಿ ಬೆಳಕು ಕತ್ತಲೆಯಂತಿರುವ ಜ್ಞಾನ-ಕರ್ಮಗಳು, ಅನುಭವ ಮಂಟಪದಲ್ಲಿ ನಾಣ್ಯದ ಎರಡು ಮುಖಗಳಂತೆ ಹೊಂದಿಕೊಂಡಿವೆ. ಶರಣರ ಅಪರಿಗ್ರಹ ತತ್ವದಲ್ಲಿ ಈ ಕಾಲದ ಸಮಾಜವಾದ, ಸಮತಾವಾದಗಳು ಜೀರ್ಣವಾಗಿವೆ. ಶರಣರ ವಾದಕ್ಕೂ ಗಾಂಧಿ ಹೇಳಿದ ವಾದಕ್ಕೂ ಹೆಚ್ಚು ವ್ಯತ್ಯಾಸ ಕಾಣುವುದಿಲ್ಲ. ಯುಗಪುರುಷ ಗಾಂಧಿ ಹೇಳಿದ ಅಸ್ಪೃಶ್ಯತಾ ನಿವಾರಣೆ, ಹರಿಜನೋದ್ಧಾರ ಜಾತಿ ಭೇದ ನಿರಸನ, ಖಾದಿ ಪ್ರಚಾರ, ಅಹಿಂಸಾನಿಷ್ಠೆ, ಸತ್ಯವ್ರತ, ಸತ್ಯಾಗ್ರಹ, ಅನಾಸಕ್ತಿಯೋಗ, ಸ್ತ್ರೀಯರ ಉನ್ನತಿ ಇವನ್ನೆಲ್ಲಾ ಶರಣರು ಅಂದೇ ಹೇಳಿದ್ದಾರೆ. ಶಿವಶರಣರ ತತ್ವಗಳು ಪ್ರಗತಿಪರವಾದುವು. ಜನತೆಗೆ ಸತ್ಯದ ಬೆಳಕು ಅಲ್ಲಿ ಕಂಡೀತು! ಶಾಂತಿ ಸಮಾಧಾನ ನೆಲೆಸೀತು!! ಸನಾತನ ಧರ್ಮವು ಅವರಿಂದ ಕಳೆಗೊಂಡೀತು!!!

ಅನುಭವ ಮಂಟಪದ ಕಾಲ ಸುಮಾರು ಹತ್ತು ವರ್ಷ [ಕ್ರಿ. ಶ. ೧೧೫೮-೧೧೬೮] ಈ ವಾಙ್ಮಯವು, ಕನ್ನಡ, ತೆಲುಗು, ತಮಿಳು, ಮರಾಠಿ ಮತ್ತು ಸಂಸ್ಕೃತದ ಹಲವಾರು ಕವಿಗಳ ಮೇಲೆ ತನ್ನ ಪರಿಣಾಮವನ್ನುಂಟು ಮಾಡಿದೆ. ದಕ್ಷಿಣಭಾರತದ ಗಣ್ಯಕವಿಗಳಾದ, ಹರಿಹರದೇವ, ರಾಘವಾಂಕ, ಮಾಯಿದೇವ, ಚಾಮರಸ, ಪಾಲ್ಕುರಿಕೆ ಸೋಮ, ಶಿವಪ್ರಕಾಶಸ್ವಾಮಿ, ಸಿಂಗಿರಾಜ, ಮನ್ಮಥಸ್ವಾಮಿ, ಶಂಕರಾರಾಧ್ಯ ಇತ್ಯಾದಿ ಕವಿಗಳ ಗ್ರಂಥಗಳನ್ನು ಇದಕ್ಕೆ ನಿದರ್ಶನವಾಗಿ ಹೇಳಬಹುದು. ಮುಖ್ಯವಾಗಿ ಕನ್ನಡ ಸಾಹಿತ್ಯ ಮತ್ತು ಜನತೆಯ ಏಳಿಗೆ, ಭಾರತ ರಾಷ್ಟ್ರ ಮತ್ತು ಭಾರತೀಯರ ಉನ್ನತಿ,

ವಿಶ್ವಶಾಂತಿ ಮತ್ತು ವಿಶ್ವಬಂಧುತ್ವ ಇವುಗಳೇ ಅನುಭವ ಮಂಟಪದ ಶರಣರ ಮುಖ್ಯ ಉದ್ದೇಶ.

ಕಲ್ಯಾಣ ಪಟ್ಟಣದಲ್ಲಿ ಇಂದು ಅನುಭವ ಮಂಟಪದ ಆ ಕಟ್ಟಡ ವಿಲ್ಲ. ಮುಸಲ್ಮಾನರ ದಾಳಿಯಲ್ಲಿ ಅದು ಕಣ್ಮರೆಯಾಗಿದೆ, ಅದರ ಕಂಭಗಳು ಅಲ್ಲಿನ ಮುಸಲ್ಮಾನರ ದರ್ಗದಲ್ಲಿವೆ. ಆದರೆ, ಆ ಮಂಟಪದ ದಿವ್ಯಭವ್ಯ ಸಾಹಿತ್ಯ ಮಾತ್ರ ಕರ್ಣಾಟಕ ವಾಙ್ಮಯದಲ್ಲಿ ಘನತಮವೆನಿಸಿಕೊಂಡಿದೆ. ವಿಶ್ವದ ಧರ್ಮ ಸಾಹಿತ್ಯದಲ್ಲಿ, ಅದು ಉಪನಿಷತ್-ಬೈಬಲ್-ಖುರಾನ್-ಜಾತಕ-ಗೀತೆಗಳಿಗೆ ಸರಿಸಮವೆನಿಸಿ ಕಂಗೊಳಿಸುತ್ತಿದೆ. ಇಂತಹ ಶ್ರೇಷ್ಠ ಸಾಹಿತ್ಯ ನಮ್ಮದಾಯಿತೆಂಬುದು ಕನ್ನಡಿಗರಾದ ನಮಗೆ ಹೆಮ್ಮೆಯ ವಿಷಯವಲ್ಲವೆ? ಆ ಅನುಭವ ಮಂಟಪವನ್ನು ವಿರಚಿಸಿದ ಆ ಕನ್ನಡ ಋಷಿಗಳು ನಮಗೆ ಪೂಜ್ಯರಲ್ಲವೆ? ಈ ಅನುಭವ ಮಂಟಪದ ಸಾಹಿತ್ಯವು ನಮ್ಮ ಕನ್ನಡಿಗರ ವೇದಮಂತ್ರಗಳಲ್ಲವೆ?




ಪುಲಿಗೆರೆಯ ಸೋಮೇಶ್ವರ ದೇವಾಲಯ, ಲಕ್ಷ್ಮೇಶ್ವರ

# ಪುಲಿಗೆರೆಯ ಸೋಮಕವಿ

## ಕವಿ ಕಾವ್ಯ ವಿಚಾರ

'ಸೋಮೇಶ್ವರ ಶತಕ'ವು ಕನ್ನಡಿಗರಿಗೆ ಅತ್ಯಂತ ಪ್ರಿಯವಾದ ಗ್ರಂಥಗಳಲ್ಲಿ ಒಂದು. ಅರ್ಧ ಶತಮಾನದ ಹಿಂದೆ ಕನ್ನಡ ನಾಡಿನಲ್ಲಿ ಹೆಚ್ಚು ಜನಪ್ರಿಯವಾಗಿದ್ದ, ಕನ್ನಡ ಭಾರತ, ಹರಿಭಕ್ತಿಸಾರ, ಜೈಮಿನಿ ಭಾರತ, ಚೆನ್ನಬಸವ ಪುರಾಣ, ಬಸವ ಪುರಾಣ, ತೊರವೆ ರಾಮಾಯಣ, ರಾಜಶೇಖರ ವಿಳಾಸ, ಸರ್ವಜ್ಞ ವಚನಗಳು, ನಿಜಗುಣದ ಕೃತಿಗಳು ಮತ್ತು ಪುರಂದರ ದಾಸರ ಹಾಡುಗಳು – ಇವುಗಳ ಜತೆಯಲ್ಲಿ ಸೋಮೇಶ್ವರ ಶತಕವೂ ಕನ್ನಡಿಗರ ನಾಲಗೆಯಲ್ಲಿ ನಲಿದಾಡುವ ಗ್ರಂಥವೆನಿಸಿತ್ತು. ಇತ್ತೀಚಿನ ಪರಿಸ್ಥಿತಿ ನಾಡಿನಲ್ಲಿ ಬದಲಾವಣೆಯಾದ ಮೇಲೆ, ಜನಾಭಿರುಚಿ ವ್ಯತ್ಯಾಸ ಗೊಂಡು ಸೋಮೇಶ್ವರ ಶತಕದ ಹೆಸರು ಕೊಂಚ ಹಿಂದೆ ಹೋಯಿತು ಎಂದು ಹೇಳಬಹುದು. ಜನಪ್ರಿಯವಾದ ಈ ಶತಕವು ಮೊದ ಮೊದಲು ಬಹಳ ಅಶುದ್ಧವಾಗಿ ಅಚ್ಚಾಗಿ ಪೇಟೆಗೆ ಮಾರಾಟಕ್ಕೆ ಬಂದಿತು. ಅದನ್ನೇ ಕೊಂಡು ನಮ್ಮ ಜನ ಅಕ್ಕರೆಯಿಂದ ಓದುತ್ತಿದ್ದರು. ಆ ಕಾಲದಲ್ಲಿ ಈ 'ಸೋಮೇಶ್ವರ ಶತಕ'ದ ಪದ್ಯಗಳ ಅಂಕಿತವನ್ನು ಕೆಲವು ವಿಧರ್ಮಿಗಳು "ನರನೆಲಾ ಕೇಳ್ದಪ್ಪುದೀ ಬುದ್ಧಿಯಾ" ಎಂದು ಬದಲಾಯಿಸಿ ಪ್ರಕಟಿಸಿ ದುದೂ ಉಂಟು. (ಶಬರ ಶಂಕರ ವಿಳಾಸಂ, ಪೀಠಿಕೆ, ಪುಟ ೩೩, ಧಾರವಾಡ, ಲಿಂ. ವಿ. ವೃ. ಸಮಿತಿ ಪ್ರಕಟನೆ.) ಹೀಗೆ 'ಸೋಮೇಶ್ವರ ಶತಕ'ವು ಹಲವಾರು ಗಂಡಾಂತರಗಳನ್ನು ಜಯಿಸಿ ಈಗ ಕನ್ನಡಿಗರ ಕೈಗೆ ಶುದ್ಧ ರೂಪದಲ್ಲಿ ದೊರೆತಿರುವುದು ನಮ್ಮ ನಾಡಿನ ಹಾಗೂ ನುಡಿಯ ಪುಣ್ಯವೆಂದೇ ಹೇಳಬಹುದು.

೧೯೨೦ರಲ್ಲಿ ಬೆಂಗಳೂರಿನಲ್ಲಿ "ನೀತಿಸಾರ" ಎಂಬಹೆಸರಿನ ಗ್ರಂಥಗುಚ್ಛದಲ್ಲಿ ಬೆಂಗಳೂರು [illegible] ಮುದ್ರಣಾಲಯದಲ್ಲಿ ಇದು ಮೊದಲು ಅಚ್ಚಾಗಿ ಬೆಳಕಿಗೆ

ಬಂದಿತು. ಇದು ಸುಂದರವಾಗಿ ಒಳ್ಳೆಯ ಕಾಗದದಲ್ಲಿ ಅಚ್ಚಾಗಿದ್ದರೂ ಶು ವಾಗಿ ಸಂಶೋಧಿಸಲ್ಪಟ್ಟು ಪ್ರಕಟವಾಗಲಿಲ್ಲ ಎಂದು ಹೇಳದೆ ವಿಧಿಯಿ ೧೯೩೩ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನವರು ಈ ಶತಕವನ್ನು ಶು ವಾಗಿಯೂ, ಸುಂದರವಾಗಿಯೂ ಸಂಪಾದಿಸಿ ಶುದ್ಧ ಪಾಠಸ ಭಾವಾರ್ಥ, ಟಿಪ್ಪಣಿ, ಪೂರ್ವದ ಕಥೆಗಳು, ಸಂಬಂಧಪಟ್ಟ ಗಳು ಇವನ್ನೆಲ್ಲಾ ಕೂಡಿಸಿ ಪ್ರಕಟಿಸಿ ಕನ್ನಡಿಗರಿಗೆ ಉಪಕಾರಮಾಡಿದರು. ದೀಚೆಗೆ ಸೋಮೇಶ್ವರ ಶತಕವು ಎಲ್ಲ ವಿದ್ವಾಂಸರ ಮನ್ನಣೆಗೂ ಅರ್ಹ ಶಾಲೆಯ ಮಕ್ಕಳ ಪಠ್ಯಪುಸ್ತಕಗಳಲ್ಲಿಯೂ ಕಾಣಿಸಿಕೊಂಡು ಮತ್ತೆ ಪ್ರ ತಿಗೆ ಬಂದಿದೆ. ಇದರಲ್ಲಿ ೧೦೯ ವೃತ್ತಗಳಿವೆ.

ಗ್ರಂಥಕರ್ತೃ:—ಸೋಮೇಶ್ವರ ಶತಕವನ್ನು ಬರೆದ ಕವಿ ಪುಲಿಗೆರೆ ಸೋಮ. ಕವಿಯೇ ಶತಕದ ಎರಡನೆಯ ಪದ್ಯದಲ್ಲಿ "ಪೇಳಿದ ಸೋಮ ಎಂದು ಹೇಳಿ ತನ್ನ ಹೆಸರನ್ನು ಸ್ಪಷ್ಟಗೊಳಿಸಿದ್ದಾನೆ. ಗ್ರಂಥದ ನಾಂದಿ ಪ ದಲ್ಲಿ ಕವಿಯು ತನ್ನ ಇಷ್ಟದೇವತೆಯಾದ "ಪುಲಿಗಿರಿ ನಗರೀ ಶಾಸನಾ ಮೃಗಾಂಕಂ ಸೋಮೇಶಂ ಸರ್ವಭೂಷಂ ಸಲಹುಗೆ ಜಗಮಂ" ಎಂ ಹೇಳುವಲ್ಲಿ ತಾನು ಪುಲಿಗೆರೆಯ ಸೋಮೇಶ್ವರನ ಭಕ್ತನೆಂದೂ ಈ ಗ್ರಂಥ ಪುಲಿಗೆರೆ ಸೋಮೇಶನಿಗೆ ಅಂಕಿತವಾದುದೆಂದೂ ಸ್ಪಷ್ಟವಾಗಿ ನಿರೂಪಿಸಿದ್ದಾ ಆದರೂ ಈ ಕವಿಯ ವಿಷಯವಾಗಿ ವಿದ್ವತ್ಪ್ರಪಂಚದಲ್ಲಿ ಕೂಡ ಸಂದೇ ಮತ್ತು ತಪ್ಪು ಭಾವನೆಗಳು ಪ್ರಚುರವಾಗಿರುವುದರಿಂದ ಈ ವಿಷಯವನ್ನು ನಾವು ಇಲ್ಲಿ ಕೊಂಚ ಪರಿಶೀಲಿಸಬೇಕಾಗಿದೆ.

ಕರ್ಣಾಟಕ ಕವಿಚರಿತೆಯಲ್ಲಿ ಪಾಲ್ಕುರಿಕೆ ಸೋಮನಾಥನ(ಸು.೧೧೯ ವಿಷಯವನ್ನು ಪ್ರಸ್ತಾಪಿಸುವಾಗ ಸೋಮೇಶ್ವರ ಶತಕದ ವಿಚಾರ ಬಂದಿ (ಭಾಗ ೧, ಪು. ೨೫೩) ಈ ಶತಕಕ್ಕೆ "ಸೋಮಾರಾಧ್ಯ ಶತಕ" ಎಂ ಹೆಸರೂ ಉಂಟು. ಇದು ಬಹಳ ಅಶುದ್ಧವಾಗಿದೆ. ಇದರಲ್ಲಿ ವ್ಯಾಕರ ವಿರುದ್ಧವಾದ ಅನೇಕ ಪ್ರಯೋಗಗಳಿವೆ. ಇದನ್ನು ಸಂಸ್ಕೃತದಲ್ಲಿ ಪಂಡಿ ನಾಗಿದ್ದ ಪಾಲ್ಕುರಿಕೆ ಸೋಮನಾಥನು ರೂಪಿಸಿದನೆಂದು ಹೇಳುವು ಕಷ್ಟವಾಗಿದೆ. ಅಲ್ಲದೆ ಶತಕಕಾರನ ಲಿಂಗವು ಪುಲಿಗೆರೆಯಲ್ಲಿದ್ದಂತೆ ಗ್ರಂಥದಿ

ತಿಳಿದು ಬರುತ್ತದೆ. ಪಾಲ್ಕುರಿಕೆ ಸೋಮನಾಥನು ಸಂಸ್ಕೃತಾಂಧ್ರ ಗ್ರಂಥಗಳಲ್ಲಿ "ಪಾಲ್ಕುರಿಕೆ ಸೋಮ" ಎಂದೇ ತನ್ನ ಹೆಸರನ್ನು ಹೇಳಿಕೊಂಡಿದ್ದಾನೆ. ಈ ಶತಕದಲ್ಲಿ ಗ್ರಂಥಕರ್ತನ ಹೆಸರು ಸುಮ್ಮನೆ 'ಸೋಮ' ಎಂದಿದೆ. ಇದೂ ಅಲ್ಲದೆ "ಪಾಲ್ಕುರಿಕೆ ಸೋಮ" ಕೃತ ಎಂದು ಹೇಳಿರುವ ಗ್ರಂಥಗಳಲ್ಲಿ ಈ ಈ ಶತಕವು ಉಕ್ತವಾಗಿಲ್ಲ. ಈ ಕಾರಣಗಳಿಂದ ಶತಕಕಾರನು ಪಾಲ್ಕುರಿಕೆಯ ಸೋಮನೋ ಅಲ್ಲವೋ ಎಂದು ಸಂದೇಹಿಸಲು ಅವಕಾಶವುಂಟು. ಆದರೂ ಈತನೇ ಶತಕವನ್ನು ಮಾಡಿದನೆಂದು ಪ್ರತೀತಿಯಿರುವುದರಿಂದ ತದನುರೋಧೇನ ಈ ಗ್ರಂಥವು ಇಲ್ಲಿ ಸೇರಿಸಲ್ಪಟ್ಟಿದೆ.

ಇದು ನೀತಿಬೋಧಕವಾದ ಗ್ರಂಥ. ಇದರಲ್ಲಿ ೧೦೭ ಮತ್ತೇಭ ವಿಕ್ರೀಡಿತ ವೃತ್ತಗಳಿವೆ. ಛಂದೋಂಬುಧಿಯ ಉಪೋದ್ಘಾತದಲ್ಲಿ (ಇದರಲ್ಲಿ ಪು. ೫೫) ೧೧೦ ಪದ್ಯಗಳಿವೆಯೆಂದು ರೆ|| ಕಿಟ್ಟೆಲ್ ಹೇಳುತ್ತಾರೆ. ಪ್ರತಿ ಪದ್ಯವೂ 'ಶ್ರೀ ಚೆನ್ನ ಸೋಮೇಶ್ವರ' ಎಂದು ಮುಗಿಯುತ್ತದೆ. 'ನೀತಿಯೆ ಸಾಧನಂ ಸಕಲಲೋಕಕ್ಕಾಗಬೇಕೆಂದು ಪೇಳಿದ ಸೋಮಂ' ಎಂಬ ಪದ್ಯ ಭಾಗದಲ್ಲಿ ಗ್ರಂಥದ ಸ್ವರೂಪವು ಉಕ್ತವಾಗಿದೆ. ಗ್ರಂಥಾವತಾರದಲ್ಲಿ ಕವಿ ಪುಲಿಗೆರೆಯ ಸೋಮೇಶನನ್ನು ಸ್ತುತಿಸಿದ್ದಾನೆ. ಈ ಶತಕದಿಂದ ಉಂಟಾಗುವ ಪ್ರಯೋಜನವನ್ನು ಈ ಶತಕದ ಕೊನೆಯ ಪದ್ಯದಲ್ಲಿ ಹೇಳಿದ್ದಾನೆ" ಎಂದು ಕವಿಚರಿತೆಕಾರರು ಅಭಿಪ್ರಾಯ ಪಟ್ಟಿದ್ದಾರೆ.

ಶತಕಕಾರನು ತನ್ನ ಹೆಸರು ಮತ್ತು ಸ್ಥಳವನ್ನು ಸ್ಪಷ್ಟವಾಗಿ ಹೇಳಿರುವುದರಿಂದಲೂ, ಆಂಧ್ರಪ್ರಾಂತದ ಪಾಲ್ಕುರಿಕೆ, ಕರ್ಣಾಟಕ ರಾಜ್ಯದ ಪುಲಿಗೆರೆ ಇವೆರಡೂ ಭಿನ್ನಭಿನ್ನವಾದುದರಿಂದಲೂ, ಪ್ರಾಚೀನ ವೀರಶೈವ ಕವಿಗಳು ಪಾಲ್ಕುರಿಗೆ ಸೋಮನಾಥನ ಗ್ರಂಥಗಳ ಪಟ್ಟಿಯಲ್ಲಿ ಸೋಮೇಶ್ವರ ಶತಕವನು ಸೇರಿಸಿಲ್ಲವಾದುದರಿಂದಲೂ, ಮಹಾವಿದ್ವಾಂಸನಾದ ಪಾಲ್ಕುರಿಕೆ ಸೋಮನಾಥನು ಸೋಮೇಶ್ವರ ಶತಕದಂತಹ ಸಾಮಾನ್ಯ ಗ್ರಂಥವನ್ನು ಬರೆದನೆಂದು ಊಹಿಸುವುದು ತರ್ಕಬದ್ಧವಲ್ಲದುದರಿಂದಲೂ ಸೋಮೇಶ್ವರ ಶತಕಕ್ಕೂ ಪಾಲ್ಕುರಿಕೆ ಸೋಮನಾಥನಿಗೂ ಏನೇನೂ ಸಂಬಂಧವಿಲ್ಲವೆಂದು ನಾವು ಸ್ಪಷ್ಟವಾಗಿ ಹೇಳಬಹುದು. ಕೇವಲ ನಾಮ ಸಾದೃಶ್ಯದಿಂದ ಹೇಳು

ವುದಾದರೆ, "ಶೃಂಗಾರಸಾರ"ದ ಸೋಮರಾಜನಿಗೂ ಈ ಶತಕಕಾರನಿ... ಏತಕ್ಕೆ ಸಂಬಂಧ ಕಲ್ಪಿಸಬಾರದು ಎಂಬ ಪ್ರಶ್ನೆ ಕೂಡ ನಮ್ಮ ಮು... ನಿಲ್ಲುವುದಿಲ್ಲವೆ?.

ಈ ಸೋಮೇಶ್ವರ ಶತಕವನ್ನು ಭರತೇಶವೈಭವ, ರತ್ನಾಕರ ಶ... ಮೊದಲಾದುವನ್ನು ಬರೆದು ವಿಖ್ಯಾತನಾಗಿರುವ ಮಹಾಕವಿ ರತ್ನಾಕರವ... ಬರೆದನೆಂಬ ಒಂದು ವಾದವನ್ನು ದಿನಾಂಕ ೩೦-೪-೧೯೬೯ರ ವಿಶ್ವಬಂ... ಪತ್ರಿಕೆಯಲ್ಲಿ ಆಸ್ಥಾನ ವಿದ್ವಾನ್ ಶ್ರೀ ಎಂ. ಜಿ. ನಂಜುಂಡಾರಾಧ್ಯ... ಎತ್ತಿರುತ್ತಾರೆ. ಅವರ ಅಂಬೋಣ ಹೀಗಿದೆ:"ನನ್ನ ಜೈನ ಸ್ನೇಹಿತರೊಬ್ಬ... ನನಗೆ ದೊರೆತ ಸೋಮೇಶ್ವರಶತಕದ ಒಂದು ಪುರಾತನ ತಾಳಪತ್ರದಪ್ರತಿಯ...

ವರಸಮ್ಯಕ್ತ್ವಸುಧರ್ಮ ಜೈನಮತದೊಳ್ ತಾಂಪುಟ್ಟಿ ಯಾದೀಕ್ಷೆಯಂ
ಧರಿಸೀ ಸನ್ನುತ ಕಾವ್ಯಶಾಸ್ತ್ರಗಳನಾಂ ನಿರ್ಮಾಣಮಂ ಮಾಡುತಂ ॥
ವರ ರತ್ನಾಕರ ಯೋಗಿಯೆಂದು ನಿರುತಂ ವೈರಾಗ್ಯ ಬಂದೇರಲಾಂ ।
ಹರದೀಕ್ಷಾವ್ರತನಾದೆನೈ ಹರಹರಾ ಶ್ರೀ ಚನ್ನ ಸೋಮೇಶ್ವರಾ ॥

"ಈ ಪದ್ಯವು ಈಚೆಗಿನ ಕೆಲವು ಅಚ್ಚಿನ ಪ್ರತಿಗಳಲ್ಲಿರುವುದಿಲ್ಲ. ಯಾ... ಕಾರಣಗಳಿಂದ ಈ ಪದ್ಯವು ತೆಗೆಯಲ್ಪಟ್ಟಿತೆಂಬುದು ಗೊತ್ತಿಲ್ಲ. ಅಲ್ಲ... ಅನೇಕ ಶತಕಗಳಲ್ಲಿ ೧೦೮ ಪದ್ಯಗಳು ಇರುತ್ತವೆ. ಈ ಎಲ್ಲ ಕಾರಣಗಳಿ... ಈ ಶತಕದ ಕರ್ತನು ರತ್ನಾಕರನೆಂದೇ ವ್ಯಕ್ತವಾಗುವುದಲ್ಲದೆ ಅವನು ಜೈ... ಮತವನ್ನು ತೊರೆದ ನಂತರ ವೀರಶೈವನಾಗಿ ಈ ಶತಕವನ್ನು ರಚಿಸಿರುವುದ... ವ್ಯಕ್ತವಾಗುತ್ತದೆ. ಆದುದರಿಂದ 'ಸೋಮೇಶ್ವರ ಶತಕವು' ಪಾಲ್ಕು... ಸೋಮನಾರಾಧ್ಯರಿಂದಾಗಲಿ ಮತ್ತಾವ ವೀರಶೈವರಿಂದಾಗಲಿ ರಚಿತವಾಗಿ... ಕನ್ನಡದ ಕವಿಶ್ರೇಷ್ಠನಾದ ರತ್ನಾಕರ ಕವಿಯಿಂದಲೇ ರಚಿತವಾಗಿದೆಯೆಂ... ಮುಕ್ತ ಕಂಠದಿಂದ ಹೇಳಬಹುದು."

ಶ್ರೀ ಎಂ. ಜಿ. ನಂಜುಂಡಾರಾಧ್ಯರು ಹೇಳುವಂತೆ ಸೋಮೇಶ್ವ... ಶತಕವು ರತ್ನಾಕರ ಕವಿ ವಿರಚಿತವೆಂದು ಹೇಳಲು ಸಾಧ್ಯವಿಲ್ಲ. ಏತಕ್ಕೆಂದ...

(೧) ಉಪಲಬ್ಧವಿರುವ ನೂರಾರು ಸೋಮೇಶ್ವರ ಶತಕದ ತಾಳೆಯೋಲೆಯ ಗ್ರಂಥಗಳಲ್ಲಿ—ಶ್ರೀ ಆರಾಧ್ಯರು ಹೇಳುವ ಪದ್ಯ ಇಲ್ಲ. ಆದುದರಿಂದ ಈ ಶ್ಲೋಕವು ಪ್ರಕ್ಷಿಪ್ತವೆಂದು ಕಂಡುಬರುತ್ತದೆ. ಪರಿಷತ್ತಿನವರಿಗಾಗಲಿ, ಬೆಂಗಳೂರು ಪ್ರೆಸ್ಸಿನವರಿಗಾಗಲಿ, ಕವಿಚರಿತಕಾರರಿಗಾಗಲಿ ದೊರೆತ ಸೋಮೇಶ್ವರ ಶತಕದ ಪ್ರತಿಗಳಲ್ಲಿ ಶ್ರೀ ಆರಾಧ್ಯರು ಹೇಳುವ ಪದ್ಯ ಕಂಡು ಬಂದಿಲ್ಲ. ನಮ್ಮ ಕಾರ್ಯಾಲಯದಲ್ಲಿರುವ ತಾಳೆಯೋಲೆ ಗ್ರಂಥಗಳಲ್ಲಿಯೂ ಈ ಪದ್ಯವಿಲ್ಲ. ಮತ್ತೆಲ್ಲಿಯೂ ಕಾಣಬಂದಿಲ್ಲ. ಆದುದರಿಂದ ಇದು ಪ್ರಕ್ಷಿಪ್ತವಿರಬೇಕೆಂದು ನಮಗೆ ಖಚಿತವಾಗಿ ತೋರುತ್ತದೆ.

(೨) ರತ್ನಾಕರನಂತಹ ಓರ್ವ ಮಹಾಕವಿ, ತತ್ವಜ್ಞಾನಿ ಆಡಿಗಡಿಗೆ ಮತವನ್ನು ಬದಲಾಯಿಸುವ ಹುಡುಗಾಟಿಕೆಯ ಕಾರ್ಯಕ್ಕೆ ಹೋಗಿಲ್ಲವೆಂದು ನಾವು ಸುಲಭವಾಗಿ ಹೇಳಬಹುದು. ಪೂರ್ವದ ಪರಸ್ಪರ ಮತದ್ವೇಷಗಳ ಕಾಲದಲ್ಲಿ, ಕುಚೇಷ್ಟೆಗಾಗಿ ಯಾರೋ ಕಟ್ಟಿದ ಕಥೆ ಇದಾಗಿರಬಹುದು. ರುದ್ರಭಟ್ಟ, ಷಡಕ್ಷರ, ಲಕ್ಷ್ಮೀಶರ ಬಾಂಧವ್ಯ ಕುರಿತಾದ, ಮತ್ತು ಕುಮಾರವ್ಯಾಸ, ಚಾಮರಸರನ್ನು ಕುರಿತಾದ, ಬ್ರಹ್ಮಶಿವನನ್ನು ಕುರಿತಾದ ಕಟ್ಟುಕಥೆಗಳಂತೆ ಇದೂ ಒಂದು ದಂತಕಥೆಯಾಗಿದೆ.

(೩) ಸಾಹಿತ್ಯ ವಿಮರ್ಶಕರು ಹೇಳುವ ಶೈಲಿಯೇ ಕವಿ (Style is Poet)ಎಂಬ ನಿರ್ಣಯದಂತೆ ಕೂಡ ವಿದ್ವತ್ಕವಿಯಾದ ರತ್ನಾಕರನ ಶೈಲಿಗೂ ಸಾಮಾನ್ಯ ಕವಿಯಾದ ಸೋಮನ ಶೈಲಿಗೂ ಆನೆ ಆಡಿಗಿರುವಷ್ಟು ವ್ಯತ್ಯಾಸ ಕಂಡುಬರುತ್ತದೆ. ಆದುದರಿಂದ 'ಪ್ರಬಲೇನ ದುರ್ಬಲಸ್ಯ ಬಾಧಾ' ಎಂಬ ನ್ಯಾಯದಂತೆ ಶ್ರೀ ಎಂ. ಜಿ. ನಂಜುಂಡಾರಾಧ್ಯರು ನಿರೂಪಿಸಿದ ಪೂರ್ವೋಕ್ತ ವಿವಾದವು ತರ್ಕಬದ್ಧವಲ್ಲವೆಂದೂ ಅವರಿಗೆ ಯಾವುದೋ ಒಂದು ಪ್ರತಿಯಲ್ಲಿ ಸಿಕ್ಕಿದ ಪದ್ಯ ಪ್ರಕ್ಷಿಪ್ತವೆಂದೂ ಜನಪ್ರಿಯ ಕವಿಯಾದ ಸೋಮನು ತಮ್ಮ ಮತದವನೆಂದು ಹೇಳಿಕೊಳ್ಳಲು ಯಾರೋ ಪಟ್ಟ ಪ್ರಯತ್ನ ಇದೆಂದೂ ಈ ವಾದ ಬುಡಭದ್ರವಿಲ್ಲದ್ದೆಂದೂ ನಾವು ವಿಧಿಯಿಲ್ಲದೆ ಹೇಳಬೇಕಾಗಿದೆ.

ಈ ಮೇಲೆ ಕಂಡ ಎಲ್ಲ ಕಾರಣಗಳಿಂದ ಸೋಮೇಶ್ವರ ಶತಕಕಾರನು ಕವಿ ಸೋಮನೇ ಹೊರತು, ರತ್ನಾಕರನೂ ಅಲ್ಲ, ಪಾಲ್ಕುರಿಕೆ ಸೋಮನಾಥನೂ ಅಲ್ಲ ಎಂದು ನಾವು ತೀರ್ಮಾನಿಸಬಹುದಾಗಿದೆ.

**ಕವಿಯ ಸ್ಥಳ—ಪುಲಿಗೆರೆ :** ಈಗ ಧಾರವಾಡ ಜಿಲ್ಲಾ ಲಕ್ಷ್ಮೇಶ್ವರ ಎಂಬ ಊರು ಹಿಂದಿನ ಶತಮಾನಗಳಲ್ಲಿ 'ಪುಲಿಗೆರೆ'ಎಂದು ಪ್ರಸಿದ್ಧವಾಗಿತ್ತು. ನೃಪತುಂಗನ ಕವಿರಾಜಮಾರ್ಗದಲ್ಲಿ ತಿರುಳ್ಗನ್ನಡನಾಡನ್ನು ಕುರಿತು ಹೇಳುವಾಗ

ಅದಱೊಳಗಂ ಕಿಸುವೊಳಲಾ ।
ವಿದಿತ ಮಹಾ ಕೊಪಣ ನಗರದಾ ಪುಲಿಗೆಱೆಯಾ ॥
ಸದಭಿಸ್ತುತಮಪ್ಪೊಂಕುಂ ।
ದದ ನಡುವಣ ನಾಡೆ ನಾಡೆ ಕನ್ನಡದ ತಿರುಳ್ ॥ (೧-೩೭)

ಎಂಬ ಪದ್ಯದಲ್ಲಿ ಮೊಟ್ಟ ಮೊದಲು ಪುಲಿಗೆರೆಯ ಹೆಸರು ನಮಗೆ ತಿಳಿದು ಬಂದಿದೆ. ಕೆಲವು ಕವಿರಾಜ ಮಾರ್ಗದ ಹಸ್ತಪ್ರತಿಗಳಲ್ಲಿ ಪುಲಿಗೆ ಮತ್ತು ಪುಲಿಗೆರೆ ಎಂಬ ಪ್ರಯೋಗಗಳೂ ಇವೆ. ಮಹಾಕವಿ ಆದಿಪಂಪನು ತನ್ನ ವಿಕ್ರಮಾರ್ಜುನ ವಿಜಯದಲ್ಲಿ

ಕಂದ ॥ ರಾಜದ್ರಾಜಕಮೆನಿಸಿದ ।
ಸಾಜದ ಪುಲಿಗೆರೆಯ ತಿರುಳ ಕನ್ನಡದೊಳ್‌ನಿ ।
ರ್ವ್ಯಾಜಮೆಸಕಮೊಳೆ ಪುದಿದಂ ।
ದೋಜೆಯ ಬಲದಿಸಿಯ ಕವಿತೆ ಪಂಪನ ಕವಿತೇ ॥
[ಪಂಪ ಭಾರತ – ಅ. ೧೪. ಪ. ೫೮]

ಎಂಬಲ್ಲಿ "ಪುಲಿಗೆರೆಯ ತಿರುಳ ಕನ್ನಡದೊಳ್" ತಾನು ಕಾವ್ಯಗಳನ್ನು ಬರೆದಂತೆ ಹೇಳಿದ್ದಾನೆ. ಪದ್ಮರಾಜ ಪುರಾಣದಲ್ಲಿ ಕೆರೆಯ ಪದ್ಮರಸನಿಗೂ ತ್ರಿಭುವನ ತಾತನಿಗೂ ನಡೆದ ಸಂವಾದದಲ್ಲಿ 'ಹುಲಿಗೆರೆಯ ಮಾಯಿದೇವನು' ಪದ್ಮರಸನ ಪರವಾಗಿ ಭಾಗವಹಿಸಿದ್ದಂತೆ ಹೇಳಿದೆ. [೯–೨೯]

ಕರ್ಣಾಟಕ ಕವಿಚರಿತೆಕಾರರು ಸುಮಾರು ೧೫೦೦ರ ರಲ್ಲಿ ಇದ್ದನೆಂದು ಊಹಿಸಿರುವ ಕವಿಚಕ್ರವರ್ತಿ ಸುಪಂಗನು "ಪುಲಿಗೆರೆಯ ಪುರಾಧಿಪ ಶ್ರೀ ಸೋಮನಾಥ ಭಕ್ತಿಯುಕ್ತಂ" ಎಂದು ಹೇಳಿಕೊಂಡಿರುವುದರಿಂದ ಇವನ ಸ್ಥಳವು ಪುಲಿಗೆರೆಯಾಗಿರಬಹುದು ಎಂದು ಹೇಳುತ್ತಾರೆ. (ಕ. ಕವಿ

ಚರಿತೆ, ಭಾಗ ೨, ಪುಟ ೧೬೦) ಮಹಾಕವಿ ರಾಘವಾಂಕನು ಬರೆದಿರುವ ಸೋಮನಾಥ ಚರಿತೆ ಅಥವಾ ಆದಿಶೆಟ್ಟ ಪುರಾಣವು ಪುಲಿಗೆರೆಯ ಸೋಮನಾಥನನ್ನು ಕುರಿತು ವಿರಚಿತವಾಗಿದೆ. ಈ ಆದಿಶೆಟ್ಟಿಯೂ ಕನ್ನಡದಲ್ಲಿ ಪ್ರಖ್ಯಾತ ವಚನಕಾರನಾಗಿಯೂ, ಪವಾಡ ಪುರುಷನಾಗಿಯೂ ವಿಖ್ಯಾತನಾಗಿದ್ದಾನೆ. ಪ್ರಖ್ಯಾತನಾದ ಏಕಾಂತದ ರಾಮಯ್ಯನು ಹುಲಿಗೆರೆಗೆ ಯಾತ್ರೆ ಬಂದಂತೆ ಪುರಾಣಗಳಲ್ಲಿದೆ.

ಬಂದು ಪುಲಿಗೆರೆಯ ಪಟ್ಟಣವನೊಲವಿಂ ಪೊಕ್ಕು ।
ಸಂದಣಿಸಿ ಮೆರೆವುತ್ತೆ ಬರುತಂ ಮನಂ ಮಿಕ್ಕು ॥
(ಏ. ರಾ. ರಗಳೆ, ಪು. ೧೨, ಸಾಲು, ೫)

ಪಂಪ ಭಾರತದ ಕಥಾನಾಯಕ ಅರಿಕೇಸರಿಯು "ಪುರಿಗೆರೆಯ ರಾಜ"ನೆಂದು ಹೇಳಿದೆ. (ಕ. ಕ. ಚ. ಪುಟ ೩೦) ಈ ಎಲ್ಲ ಕಾರಣಗಳಿಂದ ಹುಲಿಗೆರೆಯು ೯ನೆಯ ಶತಮಾನದಿಂದ ತಿರುಳ್ಗನ್ನಡಕ್ಕೂ, ಪ್ರಖ್ಯಾತ ಕವಿಗಳಿಗೂ, ಪವಾಡ ಪುರುಷರಿಗೂ ಗಣ್ಯತೆಯನ್ನು ಪಡೆದ ಪುಣ್ಯಪ್ರದವಾದ ಸುಕ್ಷೇತ್ರವೆಂದು ನಾವು ತಿಳಿಯಬಹುದು.

ಹುಲಿಗೆರೆ ಅಥವಾ ಲಕ್ಷ್ಮೇಶ್ವರದಲ್ಲಿ ಈಗಲೂ ಪ್ರಸಿದ್ಧವಾದ ಸೋಮನಾಥ ದೇವಾಲಯ, ವೀರಭದ್ರನ ಗುಡಿ, ಹಲವಾರು ಜಿನಬಸದಿಗಳು, ನೂರಾರು ಶಿಲಾಶಾಸನಗಳು ಇವನ್ನೆಲ್ಲ ನಾವು ಕಣ್ಣಾರ ಕಾಣಬಹುದು. ಸೋಮೇಶ್ವರ ಶತಕವನ್ನು ಬರೆದ 'ಕವಿ ಸೋಮನು' ಇಂತಹ ಪ್ರಖ್ಯಾತವಾದ ತಿರುಳ್ಗನ್ನಡ ನಾಡಿನ ಐತಿಹಾಸಿಕ ಸ್ಥಳವಾದ ಹುಲಿಗೆರೆಯಲ್ಲಿ ಇದ್ದವನು ಎಂಬುದು ಅಲ್ಲಿ ಗಮನಾರ್ಹವಾಗಿದೆ.

ಶಿವಶರಣ ಆದಯ್ಯನು ಸೌರಾಷ್ಟ್ರ ಸೋಮನಾಥನನ್ನು ತಂದು ಹುಲಿಗೆರೆಯಲ್ಲಿ ಸ್ಥಾಪಿಸಿದ ಕಾಲ ಕ್ರಿ. ಶ. ೧೧೧೦ ಎಂದು ತಿಳಿದು ಬಂದಿದೆ. ಕ್ರಿ. ಶ. ೧೧೧೦೨೮ ಪುಲಿಗೆರೆಯ ಶಾಸನದಲ್ಲಿ ಮಾಧವಭಟ್ಟನು ಚಾಲುಕ್ಯ ವಿಕ್ರಮ ಶಕ ೨೭ರ ಚಿತ್ರಭಾನು ಸಂವತ್ಸರ ಆಷಾಢ ಶುದ್ಧ ೫ ರವಿವಾರ

ದಿವಸ (ಕ್ರಿ. ಶ. ೧೧೦೨ ಡಿಸೆಂಬರ್ ೨೯) ಶ್ರೀ ರಾಜಧಾನಿ ಪಟ್ಟಣ ಪುಲಿಗೆರೆಯ ಶ್ರೀ ಸ್ವಯಂಭೂ ಶ್ರೀ ಸೋಮೇಶ್ವರನ ಅಂಗಭೋಗಕ್ಕಾ ಸೋಮನಾಥ ದೇವಾಲಯದ ಸ್ಥಾನಾಚಾರ್ಯನಾದ ಮಹೇಂದ್ರ ಸೋ ಪಂಡಿತರ ಕಾಲ್ಗರ್ಚಿ ದತ್ತಿಯನ್ನು ಬಿಟ್ಟ ವಿಷಯ ಉಕ್ತವಾಗಿದೆ. ಸೋ ನಾಥ ಚಾರಿತ್ರದಲ್ಲಿಯೂ ಪುಲಿಗೆರೆಯಲ್ಲಿ ಸೋಮೇಶ್ವರನನ್ನು ಸ್ಥಾಪಿಸಿ ವಿಷಯ ಬಂದಿದೆ. (ಸೋ. ಚಾ. ಸ್ಥಲ, ೪, ಪ. ೬) ಅದರಂತೆ ಶಾ ವಾಹನ ಶಕ ೧೦೨೪ರ ವಿಕ್ರಮ ಶಕ ಕೂಡಿಬರುತ್ತದೆ. ಕ್ರಿ. ಶ. ೧೧ ರಲ್ಲಿ ಪುಲಿಗೆರೆಯಲ್ಲಿ ಸೋಮನಾಥ ದೇವರ ಪ್ರತಿಷ್ಠಾಪನೆಯಾಯಿತೆಂ ಸ್ಪಷ್ಟವಾಗುತ್ತದೆ. ಕ್ರಿ. ಶ. ೧೧೦೦ರ ಪೂರ್ವದ ಯಾವ ಶಾಸನಗಳಲ್ಲಿಯ ಪುಲಿಗೆರೆಯ ಸೋಮನಾಥನ ವರ್ಣನೆ ಬಂದಿರುವುದು ಬೆಳಕಿಗೆ ಬಂದಿ ಆದುದರಿಂದ ಪುಲಿಗೆರೆಯ ಸೋಮೇಶ್ವರನು ಇಂದಿಗೆ ೮೬೦ ವರ್ಷಗಳಷ್ಟು ಹಳಬನೆಂಬುದು ಈ ವಿಚಾರಗಳಿಂದ ವಿದಿತವಾಗುತ್ತದೆ. ಇಂತಹ ಮ ಮಾನ್ವಿತ ಸೋಮೇಶ್ವರನೇ ನಮ್ಮ ಶತಕಕಾರ ಕವಿ ಸೋಮನ ಇಷ್ಟ ದೈವವೆನಿಸಿದ್ದಾನೆ. (ಕರ್ಣಾಟಕ ವಿಶ್ವವಿದ್ಯಾನಿಲಯ ಗ್ರಂಥಮಾ ಸೋಮನಾಥ ಚಾರಿತ್ರದ ಪೀಠಿಕೆಯಲ್ಲಿ ಈ ವಿಷಯುವನ್ನು ವಿಸ್ತಾರವಾ ಓದಬಹುದು.)

**ಕವಿಯ ಕಾಲ ವಿಚಾರ:** ಸೋಮೇಶ್ವರ ಶತಕವನ್ನು ಬರೆ ಕವಿಯ ಕಾಲದ ವಿಚಾರವಾಗಿ ಹೀಗೆಯೇ ಸರಿ ಎಂದು ಹೇಳುವುದು ಕ ವಾಗಿದೆ. ಈ ಶತಕದ ಕಡೆಯ ಪದ್ಯದಲ್ಲಿ ಗ್ರಂಥಕರ್ತನೇ "ನಾಲ್ಸಾಸಿ ನಾಲ್ಕುನೂರು—ಕಲ್ಯಬ್ದದೆಗತಿಸೆ ವಿಕಾರ್ಯಬ್ದದಲಿ" ಈ ಗ್ರಂಥವನ್ನು ಬ ದಂತೆ ಹೇಳುತ್ತಾನೆ. ಇದರಿಂದ ಈತನು ಕ್ರಿ. ಶ ೧೩೦೦ ರಲ್ಲಿದ್ದಂತೆ ತಿಳಿ ಬರುತ್ತದೆ. ಆದರೆ ಸೋಮೇಶ್ವರ ಶತಕದ ಈ ಕೊನೆಯ ಪದ್ಯವು ಹ ವಾರು ಹಳೆಯ ಪ್ರತಿಗಳಲ್ಲಿ ಸಾಮಾನ್ಯವಾಗಿ ದೊರೆಯುವುದಿಲ್ಲ. ಇದ ಈಚೆಗೆ ಇತರರು ಸೇರಿಸಿದ್ದಾಗಿರಬಹುದೆ? (ಪೀಠಿಕೆ. ಪು. ಎಂದು ಈ ಗ್ರಂಥದ ಸಂಪಾದಕರು ಸಂದೇಹವನ್ನು ವ್ಯಕ್ತಪಡಿಸಿದ್ದಾರೆ ಕವಿಯ ಗ್ರಂಥವನ್ನು ಪರಿಶೀಲಿಸಿದರೆ ಇವನು ೧೩ನೇ ಶತಕದವನ

ಕಾಣಬರುವುದಿಲ್ಲ. ಕೊಂಚ ಈಚೆಯುವನಂತೆ ಕಾಣುತ್ತಾನೆ. ಆದರೆ ಈ ಶತಕದಲ್ಲಿರುವ ವೃತ್ತಗಳ ಬಗೆಗೆ ತಕ್ಕಷ್ಟು ಸಂಶೋಧನೆ ನಡೆಯಬೇಕೆಂದು ಕಾಣುತ್ತದೆ. ಪರಿಷತ್ತಿನ ಪ್ರಕಟಣೆಯಲ್ಲಿ ೧೦೩ವೃತ್ತಗಳಿವೆ. ಕೆಲವರು ಇದರಲ್ಲಿ ೧೦೯ ಅಥವಾ ೧೧೦ ವೃತ್ತಗಳಿವೆಯೆಂದು ಹೇಳಿದ್ದಾರೆ. ಇದು ಗಮನಾರ್ಹವಾದ ಸಂಗತಿಯಾಗಿದೆ.

ಸೋಮೇಶ್ವರ ಶತಕದ ಮೂರನೆಯ ಪದ್ಯದಲ್ಲಿರುವ "ಪಾಲುಂಡು ಮೇಲುಂಬರೆ" ಎಂಬ ಜಾಣ್ನುಡಿ ಮೊಟ್ಟಮೊದಲು ಕನ್ನಡ ಸಾಹಿತ್ಯದಲ್ಲಿ ಪ್ರಭುದೇವರ ವಚನದಲ್ಲಿ (ಪ್ರಭುದೇವರ ವಚನಗಳು,! ಪು. ೮೧-೩೬ (೧೯೩೧) ಶಿವಾನುಭವ ಗ್ರಂಥಮಾಲೆ) ಕಂಡು ಬಂದಿದೆ. ಅನಂತರ ಪುಲಿಗೆರೆಯ ಸುರಂಗ ಕವಿ ವಿರಚಿತವಾದ ತ್ರಿಷಷ್ಟಿ ಪುರಾತನರ ಚರಿತೆಯಲ್ಲಿ (ಆಶ್ವಾಸ ೧-೨೮) "ಪಾಲುಂಡು ಮೇಲುಂಬುದೆ" ಎಂಬ ರೂಪದಲ್ಲಿ ಈ ವಾಕ್ಯ ಕಂಡುಬರುತ್ತದೆ. ಸೋಮ ಕವಿಯು ಈ ಮಾತನ್ನು ಜನರ ಬಾಯಿಮಾತಿನಲ್ಲಿ ಬಳಕೆಯಿದ್ದ ನಾಣ್ನುಡಿಯಾಗಿ ಸ್ವೀಕರಿಸಿದನೋ ಅಥವಾ ಪೂರ್ವೋಕ್ತ ಗ್ರಂಥಗಳಿಂದ ಸಂಗ್ರಹಿಸಿದನೋ ಸ್ಪಷ್ಟವಾಗಿ ಹೇಳುವುದು ಸಾಧ್ಯವಿಲ್ಲ. ಒಂದುವೇಳೆ ಹಿಂದಿನ ಕವಿಗಳಿಂದಲೇ ಈ ಸುಂದರ ವಾಕ್ಯವನ್ನು ಶತಕಕಾರನು ಸ್ವೀಕರಿಸಿದ್ದರೂ ಇರಬಹುದೆಂದು ತರ್ಕಿಸಲು ಅವಕಾಶವಿದೆ.

೧೬ನೆಯ ಶತಮಾನದಲ್ಲಿ ಕನ್ನಡ ನಾಡಿನಲ್ಲಿ ಪ್ರಸಿದ್ಧನಾಗಿದ್ದ ಸರ್ವಜ್ಞಮೂರ್ತಿಯು "ಸರ್ವರೊಳಗೊಂದೊಂದು ನುಡಿಗಲ್ತು ವಿದ್ಯದ ಪರ್ವತವೆ ಆದ" ಎಂದು ಆಡಿರುವ ಮಾತು, ಸೋಮೇಶ್ವರ ಶತಕದಲ್ಲಿ ಬರುವ "ಕೆಲವಂ ಬಲ್ಲವರಿಂದ ಕಲ್ತು....ಸರ್ವಜ್ಞನಪ್ಪಂ ನರಂ" ಎಂಬ ಪದ್ಯದಿಂದ ಸ್ಫೂರ್ತಿಯನ್ನು ಪಡೆದಿರಬಹುದೆಂದು ನಾವು ತಿಳಿಯಬಹುದೆ ? ಒಟ್ಟಿನಲ್ಲಿ ಯಾವ ಐತಿಹಾಸಿಕ ಕಾರಣಗಳೂ ಲಭಿಸದಿರುವುದರಿಂದ ಈ ಕವಿಯ ಕಾಲವು ಇಂಥದೇ ಎಂದು ಹೇಳುವುದು ಸಾಧ್ಯವಿಲ್ಲವಾಗಿದೆ. ಆದರೆ ಗ್ರಂಥದ ಶೈಲಿ, ಭಾಷೆ ಮುಂತಾದುವನ್ನು ನೋಡಿದರೆ ಈತನು ೧೬ನೆಯ ಶತಮಾನಕ್ಕೆ ಈಚಿನವನೆಂದು ನಾವು ಸ್ಥೂಲವಾಗಿ ಊಹಿಸಬಹುದು.

ಕವಿಯಮತ: ಸೋಮೇಶ್ವರ ಶತಕಕಾರನು ಶಿವಭಕ್ತನೆಂ ಅವನ ಗ್ರಂಥದಲ್ಲಿ ನಾವು ಹೆಜ್ಜೆಹೆಜ್ಜೆಗೂ ಗುರುತಿಸಬಹುದು. ಅವ ತನ್ನ ಶತಕವನ್ನು "ಪುಲಿಗೆರೆಯ ಸೋಮೇಶನಿಗೆ" ಅಂಕಿತ ಮಾಡಿದ್ದಾ ಅಲ್ಲದೆ ಮೇಲಿಂದ ಮೇಲೆ ಶಿವಾಧಿಕ್ಯವನ್ನು ಈ ಮುಂದಿನ ವಾಕ್ಯಗ ಸಾರಿ ಹೇಳಿದ್ದಾನೆ. ಉದಾಹರಣೆಗೆ "ಶಿವನೇ ದೇವರೊಳುತ್ತಮ (ಪದ್ಯ, ೪) "ಹರನಿಂದುರ್ವಿಗೆ ದೈವವೇ? (ಪದ್ಯ, ೬) "ದೈವಂಗಳೊ ಶಿವಂ" (ಪದ್ಯ, ೧೩) "ಶಿವನೇ ದೇವರ್ಕಳ್ಗೆ ತಾನಾಶ್ರಯಂ" (ಪದ್ಯ "ಮೃಡ ನೀನಲ್ಲದದಾರು ಕಾಯ್ವರು" (ಪದ್ಯ, ೨೮) "ಈಶ್ವರ ಭಕ್ತನಾ (ಪದ್ಯ,೩೬) "ಇಡಬೇಕೀಶ್ವರನಲ್ಲಿ ಭಕ್ತಿರಸಮಂ" (ಗದ್ಯ ೭೯) " ಸುಜ್ಞಾನವೆ ಯೋಗಿಗಳ್ಗೆ ನಯನಂ" (ಪದ್ಯ, ೮೬) ಎಂಬಿವನ್ನು ನಾ ಗಮನಿಸಬಹುದು. ಅಲ್ಲದೆ ಶಿವಶರಣರ ಕಥೆಗಳನ್ನು ಅನೇಕ ನಿದರ್ ಗಳನ್ನಾಗಿ ಶತಕದಲ್ಲಿ ನಿರೂಪಿಸಿದ್ದಾನೆ. ಈ ಕಾರಣಗಳಿಂದ ಇವ ವೀರಶೈವ ಕವಿಯೆಂದು ನಾವು ಸುಲಭವಾಗಿ ಹೇಳಬಹುದು.

ಕವಿ ಸೋಮನ ನೀತಿಬೋಧೆ: ಶತಕಕಾರರ ಹಿರಿಯ ಗು ಗಳಲ್ಲಿ ನೀತಿಬೋಧೆಯೂ ಒಂದಾಗಿದೆ. ಕನ್ನಡದಲ್ಲಿರುವ ಸಿದ್ಧ ನೀತಿ, ವಿ ಪಾಕ್ಷ ನೀತಿ, ಸದಾಶಿವ ನೀತಿ, ನೀತಿಸಾರ, ನೀತಿಮಂಜರಿ ಮೊದಲ ಹೆಸರುಗಳಿಂದ ಕೆಲವು ಶತಕಗಳಿರುವುದನ್ನು ನಾವಿಲ್ಲಿ ಸ್ಮರಿಸಿಕೊಳ್ಳಬಹುದು ಸೋಮೇಶ್ವರ ಶತಕಕಾರನು "ನೀತಿಯೆ ಸಾಧನಂ ಸಕಲ ಲೋಕಕ್ಕಾ ಬೇಕು" ಎಂಬ ಉದ್ದೇಶದಿಂದಲೇ ಈ ಶತಕವನ್ನು ಹೇಳಿದ್ದಾ ಕಾರಣ ಅವನ ಶತಕದಲ್ಲಿ ಮೊದಲಿಂದ ಕಡೆಯವರೆಗೂ ನಾವು ನೀ ಬೋಧೆಯನ್ನು ಯಥೇಚ್ಛವಾಗಿ ನೋಡಬಹುದು.

"ಸಖರಿಂದುನ್ನತ ವಸ್ತುವೇ, ಕವಿಯೋ ಸರ್ವರೊಳುತ್ತಮಂ, ಕೆ ವೆಣ್ಣಿಂಗೆಣೆಯಾವುದೈ, ಸುತನೇ ಸದ್ಗತಿದಾತನೈ, ದ್ವಿಜನಾಚಾರಶೀ ಳ್ಳವಂ, ಕವಿತಾ ವಿದ್ಯೆ ಸುವಿದ್ಯೆಯೊಳ್, ಆಪತ್ತಿನೊ ಮಣಿದುಂನೋಡದ ಬಂಧುವೇತಕೆ, ಕಾಲೋಚಿತಕ್ಕೈದಿದಾ ತೃಣ ಪರ್ವತವಲ್ಲವೇ, ದುರ್ಮಾರ್ಗರೊಳು ಸ್ನೇಹಂ ಬರಿಗೆಯ್ಯಂ ಸುರಿದಂತೆ

ತರುಗಳ್ ಜೀವಿಗಳಲ್ಲವೆ? ಮತಿವಂತರ್ ಮರುಳಪ್ಪರೆ, ನುಡಿದುಂ ತಪ್ಪುವ ರಾಜನಂ ಸುಡು, ಅವಿನೀತಂ ಮಗನೇ? ದುಸ್ಸಂಗದೊಳಿರೆ ಹಾನಿಯೈ, ವಿಧಿಯುಂ ಮೀರುವನಾವನೈ, ಪಡೆದಷ್ಟಲ್ಲದೆ ಬಪ್ಪುದೆ, ಸಿರಿ ಬಂದುಂನಿಲೆ ಪುಣ್ಯವೈ, ಪೂರ್ವದೊಳ್ ಪಡೆದಷ್ಟುಣ್ಣದೆ ಪೋಪರೇ? ಕೊಡುವರ್ ಕೊಂಬರು ಮರ್ತ್ಯರೆ? ಬಡವಂ ಬಲ್ಲಿದನಾಗನೆ, ವಿಧಿ ಕಾಡಲ್ ಸುಖಮಾಂ ಪರೆ? ಪಲವುಂಪಳ್ಳ ಸಮುದ್ರವೈ, ಅತಿಕಾಮುರ್ಗತಿಹಾನಿಯೈ, ದುರುಳಂ ಬಲ್ಲನೆ ಬಾಳ್ವನಂ, ಪಗೆಯುಂ ಬಾಲಕನೆಂಬರೆ,ಕಳವೇಂಕೊಲ್ಲದೆ ಕಾಯ್ವುದೇ, ಬಲುಗರ್ವಂ ಕೊಲದಿರ್ಪುದೆ, ಗಜದೊಳ್ ಸುಂಡಗೆ ಯುದ್ಧವೆ, ಯುಗ ಧರ್ಮಂ ನರರ್ಗಪ್ಪುದೈ, ಬಿಡ ತನ್ನಂದವ ನೀಚತಾಂ, ಮನುಜರ್ಗೆತ್ತಣ ನೀತಿಯೈ, ಕಡುಮೂರ್ಖಂ ಹಿತಕೇಳ್ವನೇ, ನೆಲಮುಟ್ಟಲ್ ಮುನಿದಪ್ಪುದೈ, ಧನಿಕಂ ಸತ್ಕುಲ ಜಾತನೈ, ಸಿರಿವಂತರ್ ನೆಲೆಗಾಣರ್ಬೈ, ದೊರೆಗಳ್ಗೆತ್ತಣ ನೆಂಟರ್ಬೈ, ಬಲು ಭಾಗ್ಯಂದೊರೆಗಪ್ಪುದೈ, ದೊರೆಗಳ್ಗಿಚ್ಚರು ಬೇಕೆಲೈ,ದೊರೆ ಗಳ್ಗೆತ್ತಣ ನೀತಿಯೈ, ಪತಿಕಾರ್ಯಂ ವರಮಂತ್ರಿಯೈ, ಶಕುನಂ ಶೋಭನ ಕಾಸ್ಪದಂ, ಕೊಡುಗೈವೇಶ್ಯೆಯು ವಶ್ಯವೈ. ಪರಸೇವಾ ಸ್ಥಿತಿ ಕಷ್ಟವೈ, ಸನ್ನೆ ಸಾವಿರ ಕಾಲಾಳಿನ ಸತ್ವವೈ, ತೆರಬಲ್ಲರ್ ಪೊಣೆಯುಪ್ಪುದೈ, ಕದನ ಕ್ಕಂಜುವ ವೀರನೆ- ಕೊಡಬೇಕುತ್ತಮನಾದವಂಗೆ ಮಗಳಂ, ಸತಿಯಾ ಚಿತ್ತವಭೇದ್ಯವೈ, ಋಣಭಾರಕ್ಕೆಣೆಯಾವುದೈ, ತೆರೆಬೇಡೊತ್ತೆಗೆ ಬಡ್ಡಿಯಂ, ಜನರಂ ಮೆಚ್ಚಿಸಲಾಗದೈ, ಕೊಡುವರ್ಗಾವುದು ದೊಡ್ಡಿತೈ, ಕಡುಲೋ ಭಂಗಿಡೆಬೆಟ್ಟವೈ, ಕವಿಯೇ ರಾಜರ ಕಣ್ಣೆಲೈ, ಮುದಿಗಾ ಯೌವನೆ ಶತ್ರುವೈ, ಮರ್ತ್ಯರೊಳ್ ಮಥನಂ ವೆಗ್ಗಳವಲ್ಲವೈ, ಸಿರಿ ಪುಲ್ಲಗ್ರದ ತುಂತುರ್ಬೈ, ಬಹು ವಿದ್ವಾಂಸನು ಭ್ರಾಂತನೈ, ವಚನಕ್ಕೇನು ದರಿದ್ರವೈ, ಜರೆಯಲ್ ಸಿಂಗವ ಕುನ್ನಿಯೇಂ, ಮಡಿಯೇ ನಿರ್ಮಲ ಚಿತ್ತವೈ, ವಚನ ಬ್ರಹ್ಮದಿ ಮುಕ್ತಿಯೇ ?" ಈ ಮೊದಲಾದ ನೀತಿವಾಕ್ಯಗಳು ಕವಿಯ ನೀತಿ ಧರ್ಮ ಪ್ರತಿಪಾದನೆಗೆ ಸೊಗಸಾದ ನಿದರ್ಶನವೆನಿಸಿವೆ.

**ಕನ್ನಡದಲ್ಲಿ ಶತಕ ಸಾಹಿತ್ಯ:-** ವಿಶಾಲವೂ ಪ್ರಾಚೀನವೂ ಆದ ಕನ್ನಡ ಸಾಹಿತ್ಯದಲ್ಲಿ ಶತಕ ಸಾಹಿತ್ಯವು ತನ್ನದೇ ಆದ ಕೆಲವು ವಿಶೇಷ ಗುಣ

ಗಳಿಂದ ಕಂಗೊಳಿಸುತ್ತಿದೆ. ಭಕ್ತಿ, ಜ್ಞಾನ, ವೈರಾಗ್ಯ ಮತ್ತು ನೀತಿವಿ[illegible] ಗಳನ್ನು ಹಿತಮಿತವಾಗಿ ಲೋಕಾನುಭವದ ಹಲವು ನಿದರ್ಶನಗಳ[illegible] ಕೊಟ್ಟು ಪ್ರತಿಪಾದಿಸುವುದು ಶತಕಕಾರರ ಮುಖ್ಯ ಉದ್ದೇಶವಾಗಿದೆ. ಇ[illegible] ಅಪವಾದವಾಗಿ ಕವಿಕಾಮನು (೧೨೦೦) 'ಸ್ತನ ಶತಕ'ವನ್ನು ಬರೆದಿರುವ[illegible] ಉಂಟು. ಆದರೆ ಈ ಜಾತಿಯ ಶತಕಗಳು ಬಹಳ ವಿರಳ. ಭಕ್ತಿ ಜ್ಞಾ[illegible] ಬೋಧೆಗೆ ಹರಿಹರನ ಪಂಪಾಶತಕ,ರಕ್ಷಾಶತಕ, ಕನಕದಾಸನ ಹರಿಭಕ್ತಿಸಾ[illegible] ರತ್ನಾಕರನ ಅಪರಾಜಿತೇಶ್ವರ ಶತಕ, ರತ್ನಾಕರಾಧೀಶ್ವರ ಶತಕ, ಗುಮ್ಮ[illegible] ಚಾರ್ಯನ ಗುಮ್ಮಟ ಶತಕ, ಮುಮ್ಮಡಿ ಕೃಷ್ಣರಾಜರ ಸಿರಿ ನಂಜು[illegible] ಶತಕ ಮತ್ತು ಪಾರ್ವತೀ ವಲ್ಲಭ ಶತಕ ಮುಂತಾದುವನ್ನು ನಿದರ್ಶನ[illegible] ಹೇಳಬಹುದು. ಲೋಕನೀತಿ ಮತ್ತು ಅನುಭವಗಳ ನಿರೂಪಣೆಗೆ ಕನ್ನ[illegible] ಭರ್ತೃಹರಿ ಶತಕ, ಸ್ವಾದಿ ಸದಾಶಿವರಾಜರ ಪಂಚಶತ ನೀತಿಗಳು, ಚೆ[illegible] ನಾರಾಯಣ ಶತಕ, ನಯಶತಕ ಇವುಗಳನ್ನು ನಾವು ಹೆಸರಿಸಬಹುದು. ಆದರೆ ಲೋಕನೀತಿಯನ್ನು ಹೇಳುವ ಕ್ರಮದಲ್ಲಿ ಸೋಮ ಕವಿಯ ರೀತಿ ಅ[illegible] ಗಣ್ಯವೆಂದು ನಾವು ಒಪ್ಪಿಕೊಳ್ಳಬೇಕಾಗಿದೆ.

ಮತ ಧರ್ಮ ನಿರೂಪಣೆಗಾಗಿಯೂ ಶತಕಗಳನ್ನು ಬರೆದವರು ಕನ್ನಡ[illegible] ಉಂಟು. ಮಗ್ಗೆಯ ಮಾಯಿದೇವನ ಶಿವಾನವಲ್ಲಭ ಶತಕ, ಐಪುರೀಶ್ವರ ಶತ[illegible] ಶಿವಾಧವ ಶತಕಗಳೂ, ಶಂಕರ ಲಿಂಗ, ನಿರಂಜನ ಲಿಂಗ ಮೊದಲಾದ ಶ[illegible] ಗಳೂ ಇದಕ್ಕೆ ಉದಾಹರಣೆಗಳು.

ಶತಕಗಳು; ಕಂದ, ವೃತ್ತ, ಷಟ್ಪದಿ, ಸಾಂಗತ್ಯ ಛಂದಸ್ಸುಗಳಲ್ಲಿ ವಿ[illegible] ತವಾಗಿವೆ. 'ಶತಕ' ಎಂದರೆ ನೂರು ಎಂದರ್ಥ. ಕೆಲವು ಶತತಕಗಳಲ್ಲಿ ೧೦[illegible], ೧೦೮, ೧೨೦, ೧೨೫ ಈ ಬಗೆಯಲ್ಲಿ ಪದ್ಯಗಳು ಹೆಚ್ಚಿರುವುದೂ ಉಂಟು. ಲೋಕಾನುಭವಿಗಳಾದ ಈ ಶತಕಕಾರರು, ಶ್ರೀ ಪುರಂದರ ದಾಸರು, ಸರ್ವಜ್ಞ ಮೂರ್ತಿ ಮೊದಲಾದ ನೀತಿಬೋಧಕರಂ[illegible] ನಾಣ್ಣುಡಿಗಳನ್ನು ವಿಪುಲವಾಗಿ ಬಳಸಿಕೊಂಡಿರುವುದರಿಂದ ಅವು ಹೆಚ್ಚು ಜನಪ್ರಿಯುವಾಗಿವೆ. [illegible] ಶತಕಕಾರರ ಶೈಲಿ ಕೂಡ ಸುಲಭವಾಗಿ ದ್ರಾಕ್ಷಾ

ಪಾಕದಿಂದ ಕೂಡಿರುವುದು ಅವುಗಳ ಇನ್ನೊಂದು ಹಿರಿಯ ಗುಣ. ಹಾಗೂ ಜನಪ್ರಿಯತೆಗೆ ಕಾರಣ ಎಂದು ನಾವು ತಿಳಿಯಬಹುದು.

ಕನ್ನಡದ (ಕ್ರಿ.ಶ.೧೦೭೦ರಲ್ಲಿದ್ದ) ನಾಗವರ್ಮಾಚಾರ್ಯನ "ಚಂದ್ರ ಚೂಡಾಮಣಿ ಶತಕ"ವೇ ಮೊದಲ ಶತಕವೆಂದು ತೋರುತ್ತದೆ. ಅಲ್ಲಿಂದ ಮುಂದೆ (ಕ್ರಿ.ಶ.೧೧೬೦ರಲ್ಲಿದ್ದ) ಕೊಂಡಗುಳಿ ಕೇಶಿರಾಜನ "ಷಡಕ್ಷರ ಕಂದ" ಅನಂತರ (ಸು.ಕ್ರಿ.ಶ. ೧೨೦೦ರಲ್ಲಿದ್ದ) ಹರೀಶ್ವರನ ಪಂಪಾಶತಕ, ರಕ್ಷಾ ಶತಕ ಇವು ಸಾಹಿತ್ಯದಲ್ಲಿ ಪ್ರಖ್ಯಾತವೆನಿಸಿವೆ. ಮುಂದೆ ಚಂದ್ರಕವಿಯ ಗುರು ಮೂರ್ತಿ ಶಂಕರ ಶತಕ, ಗುಮ್ಮಟಾಚಾರ್ಯನ ಅರ್ಧೇಂದು ಮೌಳಿ ಶತಕ, ವೀರಭದ್ರ ರಾಜನ ಪಾರ್ವತೀವಲ್ಲಭ ಶತಕ ಮೊದಲಾದವು ಗಮನಾರ್ಹ ವಾದುವು. ಮಹಾಕವಿ ಚಿಕುಪಾಧ್ಯಾಯನ ಶತಕ ಸಾಂಗತ್ಯಗಳೂ ಈ ಸಂದರ್ಭದಲ್ಲಿ ನೆನೆಯಲರ್ಹವಾಗಿವೆ. ಕಡೆಯದಾಗಿ ಶ್ರೀ ಮುಮ್ಮಡಿ ಕೃಷ್ಣ ರಾಜ ಒಡೆಯರವರ ಕಾಲದಲ್ಲಿ ಸ್ವಯಂ ಮಹಾಪ್ರಭುಗಳೂ, ಅಳಿಯ ಲಿಂಗರಾಜರೂ, ದೇವಲಾಪುರದ ನಂಜುಂಡ ಕವಿಯೂ ಹಲವಾರು ಶತಕ ಗಳನ್ನು ರಚಿಸಿ ಕನ್ನಡ ಸಂಪತ್ತನ್ನು ಹೆಚ್ಚಿಸಿದ್ದಾರೆ. ಅನಂತರ ಶ್ರೀ ಚಾಮ ರಾಜ ಒಡೆಯರ ಕಾಲದಲ್ಲಿ ಮಹಾಕವಿ ಬಸವಪ್ಪ ಶಾಸ್ತ್ರಿಗಳು ಸುಪ್ರಸಿದ್ಧ ಭರ್ತೃಹರಿಯ ಶತಕತ್ರಯವನ್ನು ಕನ್ನಡಕ್ಕೆ ಭಾಷಾಂತರಿಸಿ ಕೊಟ್ಟದಲ್ಲದೆ ಶಂಕರ ಶತಕ, ನೀತಿಸಾರ ಶತಕ, ಆರ್ಯಾ ಶತಕ, ಮುಂತಾದುವನ್ನು ರಚಿಸಿ ಉಪಕರಿಸಿದರು. ಇದೇ ಸುಮಾರಿನಲ್ಲಿ ಶ್ರೀನಿವಾಸ ಕವಿಯ ವರ್ಷವರ್ಧಂತಿ ಶತಕವೂ, ಕರ್ಣಾಟಕ ಭಾಷಾರತ್ನ ಕರಿಬಸವ ಶಾಸ್ತ್ರಿಗಳ ನಯ ಶತಕವೂ, ಕವಿ ದೇವಶಿಖಾಮಣಿ ಅಳಸಿಂಗಾಚಾರ್ಯರ ಚೆಲ್ವನಾರಾಯಣ ಶತಕವೂ ಸುದೈವದಿಂದ ರಚಿತವಾಗಿ ಸಾಹಿತ್ಯ ಸಂಪತ್ತಿಗೆ ಕಾರಣವಾದುವು. ಕನ್ನಡ ಶತಕಕಾರರಿಗೆ, ಸಂಸ್ಕೃತದ ಮಯೂರ ಶತಕ, ಅಮರುಕ ಶತಕ, ಭರ್ತೃಹರಿ ಶತಕ, ಸುದರ್ಶನ ಶತಕ, ದಯಾ ಶತಕ, ಜ್ಞಾನ ಶತಕ, ನ್ಯಾಯ ಶತಕ ಮುಂತಾದ ಹಲವು ಶತಕಗಳೂ ಸ್ಫೂರ್ತಿಯನ್ನು ಕೊಟ್ಟಿರುವುವೆಂದು ನಾವು ಎಣಿಸಬಹುದು. ಸೋದರ ಭಾಷೆಯಾದ ತೆಲುಗಿನಲ್ಲಿ ಕೂಡ ಸುಮತಿ ಶತಕ, ವೃಷಾಧಿಪ ಶತಕ, ಪಾಲ್ಕುರಿಕೆ ಸೋಮನಾಥ ಶತಕ, ಸರ್ವಜ್ಞನ ಶತಕ

ಮೊದಲಾದುವು ಗಣ್ಯವಾದುವು. ಒಟ್ಟಿನಲ್ಲಿ ಭಾರತೀಯ ಸಾಹಿತ್ಯದಲ್ಲಿಯೂ ಕನ್ನಡ ವಾಙ್ಮಯದಲ್ಲಿಯೂ ಶತಕ ವಾಙ್ಮಯವು ತನ್ನದೇ ಆದ ಹಲವು ವೈಲಕ್ಷಣ್ಯಗಳಿಂದ ಕೂಡಿ ಮನೋಹರವೆನಿಸಿದೆ. ಪ್ರಕೃತ 'ಸೋಮೇಶ್ವರ ಶತಕ'ವು ಕನ್ನಡದಲ್ಲಿ ವಿರಚಿತವಾಗಿ ನಮ್ಮ ಸಾಹಿತ್ಯಕ್ಕೆ ಹೆಚ್ಚಿನ ಶೋಭೆ ಯನ್ನು ಉಂಟುಮಾಡಿದೆ. ಲೋಕಾನುಭವವನ್ನು ಪಡೆಯಲಿಚ್ಛಿಸುವವರು ಶರಣರ ವಚನ, ದಾಸರ ಹಾಡು, ಸರ್ವಜ್ಞನ ತ್ರಿಪದಿ ಇವುಗಳ ಜತೆಯಲ್ಲಿ ಸೋಮೇಶ್ವರ ಶತಕವನ್ನು ಅಭ್ಯಾಸ ಮಾಡುವುದರಿಂದ ಇಹಪರ ಸುಖಗಳ ಸಂಪತ್ತನ್ನು ಪಡೆಯಬಹುದೆಂದು ನಾವು ಭಾವಿಸುತ್ತೇವೆ. ಸೋಮೇಶ್ವರ ಶತಕ ಮನೆಯಲ್ಲಿದ್ದರೆ ಸದಾ ಹಿತವನ್ನು ಬಯಸುವ ಒಬ್ಬ ಹಿರಿಯರೂ ಮಕ್ಕಳ ಹಿತೈಷಿಗಳೂ ಮನೆಯಲ್ಲಿ ಇದ್ದಂತೆ ಎಂದು ನಾವು ಹೇಳ ಬಯಸುತ್ತೇವೆ.

ಕನ್ನಡ ಸಾಹಿತ್ಯದ ಹಿತಚಿಂತಕರೆಲ್ಲರೂ ನಮ್ಮ ನಾಡಿನಲ್ಲಿ ವಿಪುಲ ವಾಗಿರುವ ಈ ಶತಕಗಳನ್ನೆಲ್ಲಾ ಸಂಗ್ರಹಿಸಿ, ಸುಲಭವಾಗಿ ಟೀಕೆ ಟಿಪ್ಪಣಿ ಬರೆಸಿ, ಸುಂದರವಾಗಿ ಪ್ರಕಟಿಸಿ, ಸುಲಭ ಬೆಲೆಗೆ ಮಾರಾಟ ಮಾಡಿಸಿದ ಅದರಿಂದ ಸಾಹಿತ್ಯಕ್ಕೂ ಸಮಾಜಕ್ಕೂ ಕೂಡಿಯೇ ಲಾಭವೆಂದು ನಮ್ಮ ನಂಬಿಕೆಯಿದೆ. ಹಿತವೂ ಮಿತವೂ ಆದ ಶೈಲಿಯಿಂದ ಕೂಡಿದ ಉಪಯುಕ್ತ ವಿಷಯಗಳನ್ನು ಸ್ವಾರಸ್ಯವಾಗಿ ನಿರೂಪಿಸುವ ಈ ಶತಕ ಸಾಹಿತ್ಯ ಯಾರಿಗೆ ತಾನೇ ಪ್ರಿಯವಾಗಲಿಕ್ಕಿಲ್ಲ ?



# ವೀರಶೈವವೂ ಸನಾತನತ್ವವೂ

ಒಂದು ಮತದ ಸನಾತನತ್ವ ಎಂಬಲ್ಲಿ ಆ ಮತತತ್ವಗಳ ಸನಾತನತ್ವವೋ ಅಥವಾ ಆ ತತ್ವಗಳು ಸಮಾಜದಲ್ಲಿ ಅನುಷ್ಠಾನಕ್ಕೆ ಬಂದ ಕಾಲದ ಸನಾತನತ್ವವೋ ಎಂಬ ಆಲೋಚನೆಯು ಉಂಟಾಗುವುದು ಸಹಜ. ಯಾವುದಾದರೊಂದು ಮತವು ಬಹುದಿವಸಗಳ ಹಿಂದಿನದೆಂದು ಹೇಳಿದ ಮಾತ್ರಕ್ಕೇ ಆ ಮತವು ಶ್ರೇಷ್ಠವೆಂದೂ ಒಂದು ಮತವು ನೂತನವಾದ ಮಾತ್ರಕ್ಕೇ ನಿಕೃಷ್ಟವೆಂದೂ ತಿಳಿಯುವುದು ಸಾಧುವಲ್ಲ. ಈ ವಿಚಾರದಲ್ಲಿ ಕಾಳಿದಾಸ ಕವಿಯ

ಪುರಾಣ ಮಿತ್ಯೇವ ನಸಾಧು ಸರ್ವಂ ।
ನಚಾತಿಕಾವ್ಯಂ ನವಮಿತ್ಯವದ್ಯಂ ॥
ಸಂತಃಪರೀಕ್ಷ್ಯಾನ್ಯತರದ್ಭಜಂತೇ ।
ಮೂಢಃ ಪರಪ್ರತ್ಯಯನೇಯ ಬುದ್ಧಿಃ ॥

(ಮಾಲವಿಕಾಗ್ನಿಮಿತ್ರ)

ಶ್ಲೋಕಾರ್ಥವು ಈ ನಮ್ಮ ಅಭಿಪ್ರಾಯಕ್ಕೆ ಪೋಷಕವಾಗಿದೆ. ಯಾವುದೊಂದು ಮತವು ಉತ್ತಮವೆಂದು ಪರಿಗಣಿತವಾಗಬೇಕಾಗಿದ್ದರೆ ಆ ಮತದ ತತ್ವಗಳು ಉದಾರವಾಗಿರಬೇಕು. ಮತ್ತು ಆ ಮತಾನುಯಾಯಿಗಳಾದ ಜನರು ಆ ತಮ್ಮ ತತ್ವಗಳನ್ನು ತಿಳಿದು ಆಚರಿಸುತ್ತಿರಬೇಕು. ಇಲ್ಲವಾದರೆ ಆ ಮತವು ಉತ್ತಮವಾದುದಲ್ಲ. ಮತ್ತು ಆ ಸಮಾಜವು ಚೈತನ್ಯಮಯವಾದುದಲ್ಲ ಎಂದು ಹೇಳಬಹುದು. ವೀರಶೈವ ಮತವು ಐತಿಹಾಸಿಕ ದೃಷ್ಟಿಯಿಂದ ವಿಚಾರಮಾಡಿ ನೋಡಿದರೆ, ಜೈನ, ಬೌದ್ಧಾದಿ ಮತಗಳಂತೆ ಭಾರತದಲ್ಲಿ ಬಹಳ ಹಿಂದಿನದೆಂದು ತೋರುತ್ತದೆ. ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಎಂಬ ಮತತ್ರಯಗಳಿಗೆ ವೀರಶೈವ ಮತವು-ಸಮಕಾಲೀನವೋ ಪ್ರಾಚೀನವೋಎಂದು ನಿರ್ಧರಿಸಿ ಹೇಳಲು ಹೆಚ್ಚು ಐತಿಹಾಸಿಕ ಸಂಗತಿಗಳ ಬೆಂಬಲ ಬೇಕಾಗಿದೆ. ಆದರೆ ವೀರಶೈವಮತದ ಮೊಟ್ಟಮೊದಲನೆಯ ಭಾಷ್ಯಕಾರನಾದ ಶ್ರೀ ನೀಲಕಂಠ ಶಿವಾಚಾರ್ಯನು ಗೋಕರ್ಣ ಕ್ಷೇತ್ರದಲ್ಲಿ ಇದ್ದನೆಂದೂ, ಅವನ ಸನ್ನಿ

ಧಿಯಲ್ಲಿ ಇನ್ನೂರುಮಂದಿ ಜಂಗಮರು ವಿದ್ಯಾಭ್ಯಾಸ ಮಾಡುತ್ತಿದ್ದರೆಂದು ಶ್ರೀ ಶಂಕರಾಚಾರ್ಯರ ಸಂಗಡ ಶ್ರೀ ನೀಲಕಂಠ ಶಿವಾಚಾರ್ಯನು ಶೈವಮತದ ವಿಚಾರವನ್ನು ಕುರಿತು ವಾದಮಾಡಿದನೆಂದೂ ಕೆಲವು ಚಾರಿತ್ರಿಕ ಆಧಾರಗಳಿಂದ ತಿಳಿದುಬರುತ್ತದೆ. * ನಮ್ಮ ದುರದೃಷ್ಟದಿಂದ ಈ ನೀಲಕಂಠ ಭಾಷ್ಯ ನಮಗೆ ಸಿಕ್ಕಿಲ್ಲ. ಅದರ ಕಾರಿಕಾರೂಪವಾದ 'ಕ್ರಿಯಾಸಾರ' ಮಾತ್ರ ದೊರೆಯುತ್ತದೆ. ಅಂದಮೇಲೆ ಕ್ರಿ.ಶ. ಎಂಟನೇ ಶತಮಾನದಲ್ಲಿಯೇ ಕರ್ನಾಟಕದಲ್ಲಿ ವೀರಶೈವ ಮತವಿತ್ತೆಂದು ತೋರಿಬಂದ ಹಾಗಾಯಿತು. A ಅಲ್ಲಿಂದ ಮುಂದೆ ಬಸವೇಶ್ವರರ ಕಾಲದವರೆಗೆ ಕರ್ಣಾಟಕದಲ್ಲಿ ಸಂಕರ ದಾಸಿಮಯ್ಯ, ಜೇಡರ ದಾಸಿಮಯ್ಯ ಎಂಬ ಶಿವಶರಣರೂ, ಆಂಧ್ರದೇಶದಲ್ಲಿ ಅನ್ನಮಾಮಾತ್ಯ, ನನ್ನಚೋಡ ಎಂಬ ಕವಿಗಳೂ ವೀರಶೈವಮತ ಪ್ರಕಾಶಕರಾಗಿದ್ದಾರೆ. ಅಂದರೆ ಬಸವೇಶ್ವರನಿಗಿಂತ ಹಿಂದೆಯೇ ವೀರಶೈವಮತವು ಪ್ರಕಾಶಮಾನವಾಗಿತ್ತೆಂದೂ ಆತನಿಗಿಂತಲೂ ಮೊದಲೇ ಕೆಲವುಮಂದಿ ಶರಣರೂ ಆಚಾರ್ಯರೂ ಆಗಿ ಹೋಗಿರುವರೆಂದೂ ಸಂಶೋಧನೆಗಳಿಂದ ತಿಳಿದು ಬರುತ್ತದೆ. ಒಂದೇ ಮಾತಿನಲ್ಲಿ ಹೇಳುವುದಾದರೆ ಶಿವಾಗಮಗಳನ್ನುಳಿದರೆ ವೀರಶೈವ ಮತಕ್ಕೆ ಮೊದಲನೇ ಭಾಷ್ಯಕಾರನಾದ ಗೋಕರ್ಣದ ನೀಲಕಂಠ ಶಿವಾಚಾರ್ಯನೇ ಬುನಾದಿಯೆಂದು ತೋರುತ್ತದೆ. ಈತನೇ ವೀರಶೈವ ಸಿದ್ಧಾಂತವನ್ನು ಭಾಷ್ಯ ಮೂಲಕವಾಗಿ ಸ್ಥಾಪಿಸಿದ ಮೊದಲನೇ ಆಚಾರ್ಯನು. ಇವನಾದ ಮೇಲೆ ವಾಯು ೧೨ನೆಯ ಶತಮಾನದಲ್ಲಿ ಶ್ರೀಪತಿ ಪಂಡಿತಾಚಾರ್ಯನು ವೀರಶೈವ ಮತದ ಪರವಾಗಿ ಮತ್ತೊಂದು ಭಾಷ್ಯವನ್ನು ಬರೆದಿದ್ದಾನೆ. ಶ್ರೀಕರಭಾಷ್ಯವು ಸಂಸ್ಕೃತ ಮತ್ತು ಇಂಗ್ಲೀಷ್ ಭಾಷೆಗಳಲ್ಲಿ ಪ್ರಕಟವಾಗಿ ಲೋಕಪ್ರಸಿದ್ಧವಾಗಿದೆ. ಗುಬ್ಬಿಯ ಮಲ್ಲಣಾಚಾರ್ಯನ ವಾತುಲಾಗಮ ವೀರಶೈವ ವ್ಯಾಖ್ಯಾನವೂ, ವೃಷಭ ಪಂಡಿತ ಶಿವಾಚಾರ್ಯನ ಮಹಾನಾರಾಯಣೋಪನಿಷತ್ ಭಾಷ್ಯವೂ ವೀರಶೈವ ಸಿದ್ಧಾಂತ ಬೋಧಕಗಳಾಗಿವೆ. ಶ್ರೀಕಂಠಭಾಷ್ಯವೂ ಅಪ

*ಆನಂದಗಿರಿ ಮತ್ತು ಮಾಧವಾಚಾರ್ಯರ ಶಂಕರ ವಿಜಯಗಳಲ್ಲಿ ಈ ವಿಷಯವಿದೆ.

A. ತಮಿಳುನಾಡಿನ ತಿರುವಳ್ಳುವರ್ ವೀರಶೈವನೆಂಬ ನಂಬಿಕೆಯಿದೆ. ಇವನ ಕಾಲ ಕ್ರಿಸ್ತಪೂರ್ವ. ಇವನ ಸಮಾಧಿ ಮೈಲಾಪುರದಲ್ಲಿದೆ.

ವ್ಯಾಖ್ಯಾನವಾದ ಅಪ್ಪಯ್ಯ ದೀಕ್ಷಿತರ 'ಶಿವಾರ್ಕಮಣಿ ದೀಪಿಕೆ'ಯೂ ಕೆಲ ಮಟ್ಟಿಗೆ ವೀರಶೈವ ಸಿದ್ಧಾಂತಕ್ಕೆ ಹೊಂದಿಕೆಯಾಗುವುದೆಂದು ವಿದ್ವಾಂಸರು ಹೇಳಿದ್ದಾರೆ.

ವೀರಶೈವ ಮತವು ವೇದಾಗಮಗಳ ಕಾಲದಲ್ಲಿ ಇತ್ತೆಂಬುದನ್ನು ಸಿದ್ಧ ಮಾಡುವುದು ಅಗತ್ಯವಾಗಿದೆ. ಐತಿಹಾಸಿಕ ದೃಷ್ಟಿಯಿಂದ ಪ್ರಮಾಣಗಳನ್ನು ಕಂಡು ಹಿಡಿಯಬೇಕಾಗಿದೆ. ಅಥರ್ವಣ ವೇದದಲ್ಲಿ ಬರುವ 'ವ್ರಾತ್ಯರು' ವೀರಶೈವರೇ ಆಗಿರಬೇಕೆಂದು ಕೆಲವು ಪಂಡಿತರ ಅಭಿಪ್ರಾಯ. ಚಾರಿತ್ರಕ ಮಾರ್ಗವೇ ಇಂದಿನ ಜಗತ್ತಿನ ನಾಗರಿಕ ವಿದ್ವಾಂಸರು ಒಪ್ಪುವ ಮಾರ್ಗ. ಅದನ್ನು ತರ್ಕಪ್ರಧಾನವಾದ ಮಾರ್ಗವೆಂದು ಕರೆಯುತ್ತಾರೆ. ತಮ್ಮ ಮತವು ಎಷ್ಟು ಹಳೆಯದೆಂದೆನಿಸಿದರೆ ಅಷ್ಟೂ ಶ್ರೇಷ್ಠವೆಂದು ಭಾವಿಸುವವರ ತಂಡವು ಬಹುಕಾಲದಿಂದ ಈ ದೇಶದಲ್ಲಿ ನೆಲೆಸಿದೆ. ಈ ಜನರನ್ನು ಶ್ರದ್ಧಾ ಪ್ರಧಾನರೆಂದು ಕರೆಯುತ್ತಾರೆ. ನಮ್ಮವರೇ ಆದ ದ್ವೈತಾದ್ವೈತಾದಿ ಪಂಡಿತರು ತಮ್ಮ ಮತ ತತ್ವಗಳೂ ತಮ್ಮ ಸಿದ್ಧಾಂತವೂ ವೇದಾಗಮ ಗಳಲ್ಲಿಯೇ ಪ್ರತಿಪಾದಿತವಾಗಿದೆಯೆಂದು ನಿರೂಪಿಸುತ್ತಿದ್ದಾರೆ. ಹೀಗೆಯೇ ಪ್ರಾಚೀನ ವೀರಶೈವ ವಿದ್ವಾಂಸರೂ ತಮ್ಮ ಸಿದ್ಧಾಂತವು ನಿಗಮಾಗಮ ಸಮ್ಮತವೆಂಬುದನ್ನು ತಮ್ಮ ವಿದ್ವತ್ ಪ್ರಭಾವದಿಂದ ಪ್ರತಿಪಾದಿಸಿದ್ದಾರೆ. ಈ ಬಗ್ಗೆ ಅನೇಕ ಗ್ರಂಥಗಳನ್ನು ಬರೆದಿದ್ದಾರೆ. ಚತುರ್ವೇದ ಪಾರಂಗತನಾದ ಶಿವಪೂಜಾ ಶಿವಯೋಗೀಂದ್ರನೆಂಬ ಪ್ರಾಚೀನ ವಿದ್ವಾಂಸನು 'ಶ್ರುತಿಸಾರ ಭಾಷ್ಯಮ್' ಎಂಬ ಗ್ರಂಥದಲ್ಲಿ ನಾಲ್ಕು ವೇದಗಳಲ್ಲಿನ ೭೫ ಮಹಾಮಂತ್ರ ಗಳಿಗೆ ವೀರಶೈವ ಮತ ಪರವಾಗಿ ಅರ್ಥವನ್ನು ಬರೆದು ವೀರಶೈವ ಮತವು ವೇದ ಪ್ರತಿಪಾದಿತವೆಂದು ಸಿದ್ಧ ಮಾಡಿದ್ದಾನೆ. ನಂದಿಕೇಶ್ವರ ಶಿವಚಾರ್ಯ ನೆಂಬ ಪ್ರಾಚೀನ ಪಂಡಿತನು 'ಲಿಂಗಧಾರಣ ಚಂದ್ರಿಕಾ' ಎಂಬ ಒಂದು ಪ್ರಚಂಡವಾದ ಗ್ರಂಥವನ್ನು ಸಂಸ್ಕೃತದಲ್ಲಿ ಬರೆದಿದ್ದಾನೆ. ಅದರಲ್ಲಿ

ಪವಿತ್ರಂತೇ ವಿತತಂ ಬ್ರಹ್ಮಣಸ್ಪತೆ
ಪ್ರಭುರ್ಗಾತ್ರಾಣಿ ಪರ್ಯೇಷಿ ವಿಶ್ವತಃ ।
ಅತಪ್ತತನೂರ್ನತದಾಮೋ ಅಶ್ನುತೇ ।
ಶೃತಾಸ ಇದ್ವಹಂ ತಸ್ಸತ್ಸಮಾಶತ ॥

(ಋಗ್ವೇದ ಅ. ೭. ಅ. ೩. ವ. ೮. ಮಂತ್ರ ೧) ಈ ಮಂತ್ರಕ್ಕೆ ವೀರಶೈವ ಮತದ ಪರವಾಗಿ ಅರ್ಥಮಾಡಿದ್ದಾನೆ. ಹೀಗೆಯೇ ಆ ಗ್ರಂಥದಲ್ಲಿ ಬೇಕಾದಷ್ಟು ಮಂತ್ರಗಳನ್ನು ಉದಾಹರಿಸಿ, ಅವು ವೀರಶೈವ ಮತಬೋಧಕವಾದವುಗಳೆಂದು ಸಿದ್ಧಾಂತಮಾಡಿದ್ದಾನೆ. ಅಲ್ಲದೆ ಹರದತ್ತಾಚಾರ್ಯನು 'ಚತುರ್ವೇದ ಸಾರಸಂಗ್ರಹ' ಎಂಬ ಗ್ರಂಥವನ್ನೂ, ಮರಿತೋಂಟದಾರ್ಯನು 'ವೀರಶೈವಾನಂದ ಚಂದ್ರಿಕಾ' ಎಂಬ ಗ್ರಂಥವನ್ನೂ, ಪಾಲ್ಕುರಿಕೆ ಸೋಮನಾಥನು 'ಬಸವರಾಜೀಯಂ' ಎಂಬ ಗ್ರಂಥವನ್ನೂ ಸಂಸ್ಕೃತದಲ್ಲಿ ಬರೆದು ವೀರಶೈವದ ಸನಾತನತ್ವವನ್ನು ಸಮರ್ಥಿಸಿದ್ದಾರೆ. 'ಸಿದ್ಧಾಂತ ಶಿಖಾಮಣಿ' ಗ್ರಂಥದಲ್ಲಿ-

ವೇದಶಾಸ್ತ್ರ ಪುರಾಣೇಷು ಕಾಮಿಕಾದ್ಯಾಗಮೇಷು ಚ ।
ಲಿಂಗಧಾರಣಮಾಖ್ಯಾತಂ ವೀರಶೈವಸ್ಯ ನಿಶ್ಚಯಾತ್ ॥

ಅಂದರೆ, ವೀರಶೈವವು ವೇದ ಶಾಸ್ತ್ರ ಪುರಾಣಗಳಲ್ಲಿಯೂ, ಕಾಮಿಕಾದಿ ಆಗಮುಗಳಲ್ಲಿಯೂ ಪ್ರತಿಪಾದಿತವಾಗಿದೆ ಎಂಬ ಅಭಿಪ್ರಾಯಪಟ್ಟಿದ್ದಾನೆ. ಅಷ್ಟೇ ಅಲ್ಲದೆ ಆ ಗ್ರಂಥಕಾರನಾದ ಶಿವಯೋಗಿ ಶಿವಚಾರ್ಯನು

ವಿಷ್ಣುಬ್ರಹ್ಮಾದಯೋ ದೇವಾ ಮುನಯೋ ಗೌತಮಾದಯಃ ।
ಧಾರಯಂತಿ ಸದಾಲಿಂಗಂ ಉತ್ತಮಾಂಗೇ ವಿಶೇಷತಃ ॥

ಎಂಬ ಶ್ಲೋಕದಲ್ಲಿ ವಿಷ್ಣು-ಬ್ರಹ್ಮಾದಿ ದೇವತೆಗಳೂ, ಗೌತಮಾದಿ ಮುನಿಗಳೂ ಲಿಂಗಧಾರಿಗಳಾಗಿದ್ದರೆಂದು ಹೇಳಿದ್ದಾನೆ. A ಸಿದ್ಧಾಂತ ಶಿಖೋಪನಿಷತ್, ವೀರ ಲೈಂಗ್ಯೋಪನಿಷತ್, ಲಿಂಗಧಾರಣೋಪನಿಷತ್ ಮೊದಲಾದುವುಗಳಲ್ಲಿ ವೀರಶೈವ ಮತವು ಪ್ರತಿಪಾದಿತವಾಗಿದೆ. ಮಹಾನಾರಾಯಣೋಪನಿಷತ್ತಿಗೆ ವೃಷಭಪಂಡಿತ ಶಿವಾಚಾರ್ಯನೆಂಬ ಓರ್ವ ಲಿಂಗವಂತ ಪ್ರಾಚೀನ ವಿದ್ವಾಂಸನು ವೀರಶೈವ ಮತಪರವಾಗಿ ಭಾಷ್ಯವೊಂದನ್ನು ಬರೆದಿದ್ದಾನೆ.

ವಾತುಲಾಗಮ, ಪಾರಮೇಶ್ವರಾಗಮ, ವೀರಾಗಮ, ಸೂಕ್ಷ್ಮಾಗಮ ಮೊದಲಾದ ಶಿವಾಗಮಗಳಲ್ಲಿ ವೀರಶೈವ ಮತವು ಹೃದಯಂಗಮವಾಗಿ ಪ್ರತಿಪಾದಿತವಾಗಿದೆ. ವೀರಶೈವರು ವೇದದ ಜ್ಞಾನಕಾಂಡವನ್ನು ಮನ್ನಿಸು

A ಪಂಡರಾಪುರದ ಪಾಂಡುರಂಗ, ಅನಂತಶಯನದ ಪದ್ಮನಾಭ, ತುಳಜಾಪುರದ ಭವಾನೀದೇವಿ, ಕೊಲ್ಲಾಪುರದ ಲಕ್ಷ್ಮೀದೇವಿ, ಬೆಂಗಳೂರು ಗವಿಪುರದ ಆಂಜನೇಯ ವಿಗ್ರಹಗಳ ತಲೆಗಳಲ್ಲಿ ಲಿಂಗಧಾರಣೆ ಇದ್ದುದುಂಟು.

ತ್ತಾರೆ. ಶಿವಾಗಮಗಳನ್ನು ವೇದದಂತೆಯೇ ಗೌರವಿಸುತ್ತಾರೆ. ಆಗಮಗಳು ವೇದಕ್ಕಿಂತಲೂ ಪ್ರಾಚೀನವಾದುವುಗಳೆಂದು ಹಲವು ಮಂದಿ ಪ್ರಾಚ್ಯ ಮತ್ತು ಪಾಶ್ಚಾತ್ಯ ಸಂಶೋಧಕರು ಹೇಳಿದ್ದಾರೆ. ಪಾರಮೇಶ್ವರಾಗಮದಲ್ಲಿ

ನವೀರಶೈವ ಸದೃಶಂ ಮತಮಸ್ತಿ ಜಗತ್ರಯೇ ।
ಸರ್ವ ಭೋಗ ಪ್ರದಂ ಪುಣ್ಯಂ ಶಿವಸಾಯುಜ್ಯದಾಯಕಂ ॥

ಎಂಬುದಾಗಿ ಹೇಳಿದೆ. ಇದಕ್ಕೆ ಮೂರು ಲೋಕಗಳಲ್ಲಿ ವೀರಶೈವ ಮತವೇ ಶ್ರೇಷ್ಠವಾದುದೆಂದು ಅರ್ಥವಾಗುತ್ತದೆ. ಅಲ್ಲದೆ ಸುಪ್ರಸಿದ್ಧ ಪುರಾಣಗಳಲ್ಲಿಯೂ ವೀರಶೈವ ಮತದ ವಿಚಾರವು ಲಭಿಸುತ್ತದೆ. ಶಿವ ಪುರಾಣ, ಲಿಂಗಪುರಾಣ, ಸ್ಕಾಂದಪುರಾಣ, ಪದ್ಮಪುರಾಣ ಮೊದಲಾದುವು ಗಳಲ್ಲಿ ವೀರಶೈವಮತ ವಿಚಾರವು ಹಲವು ಕಡೆ ಬಂದಿದೆ. ಉದಾಹರಣೆಗಾಗಿ ಸ್ಕಾಂದಪುರಾಣದ ಶಂಕರ ಸಂಹಿತೆಯಲ್ಲಿ

ಯತ್ರಮಾಹೇಶ್ವರಃ ಕುರ್ಯಾಚ್ಛಿವಲಿಂಗಾರ್ಚನಂ ಸಕೃತ್ ।
ವಸಂತಿ ತತ್ರ ತೀರ್ಥಾಣಿ ಸರ್ವಾಣಿ ಸತತಂ ಗುಹ.॥

ಎಂಬ ಶ್ಲೋಕದಲ್ಲಿ 'ವೀರಶೈವ ಮಾಹೇಶ್ವರರು ಎಲ್ಲಿ ಶಿವಪೂಜೆಯನ್ನು ಮಾಡುತ್ತಾರೋ ಆ ಸ್ಥಳದಲ್ಲಿ ಸಮಸ್ತ ಪುಣ್ಯತೀರ್ಥಗಳೂ ಇವೆ' ಎಂದು ಪರಮೇಶ್ವರನು ಹೇಳಿದ್ದಾನೆ. ಸ್ಮೃತಿಗಳಲ್ಲಿಯೂ ವೀರಶೈವ ಮತವು ಸನಾತನವೆಂಬುದಕ್ಕೆ ಆಧಾರಗಳಿವೆ. ಉದಾಹರಣೆಗಾಗಿ ಗೌತಮ ಸ್ಮೃತಿಯಲ್ಲಿ.

ಮುಖೇಮಂತ್ರಂ ಹೃದಿಧ್ಯಾನಂ ಮಸ್ತಕೇ ಲಿಂಗಧಾರಣಂ ।
ಶಿಖಾರುದ್ರಾಕ್ಷಭಸ್ಮಾನಿ ಇತಿ ಬ್ರಾಹ್ಮಣ ಲಕ್ಷಣಂ ॥

ಎಂಬುದಾಗಿ ಹೇಳಿ ವೀರಶೈವರ ಅಪ್ರಾಕೃತ ಸ್ವರೂಪವನ್ನು ಈ ಸ್ಮೃತಿಕಾರನು ನಿರೂಪಿಸಿದ್ದಾನೆ. ಮುಖ್ಯವಾಗಿ ಶಬ್ದಾಪ್ರಧಾನರಾದ ವೈದಿಕರ ಮಾರ್ಗದಿಂದ ವೀರಶೈವ ಮತವು ನಿಗಮಾಗಮ ಪ್ರಸಿದ್ಧವಾದು ದೆಂಬುದನ್ನು ಇದುವರೆಗೆ ಉದಾಹರಿಸಿದ ಶಾಸ್ತ್ರಾಧಾರಗಳಿಂದ ತಿಳಿಯ ಬಹುದಾಗಿದೆ. ಈ ದೃಷ್ಟಿಯಿಂದ ವೀರಶೈವಮತವು ಭಾರತದಲ್ಲಿ ಸನಾತನ ವೆಂದು ಹೇಳಿದಂತಾಯಿತು. ಅದರ ಸನಾತನತ್ವದ ನಿದರ್ಶನಗಳನ್ನು ತಿಳಿದುದಾಯಿತು.

ಈ ಲೇಖನದ ಪ್ರಾರಂಭದಲ್ಲಿಯೇ ಹೇಳಿದಂತೆ ಒಂದು ಮತವು ಬಹಳ ಕಾಲದಹಿಂದೆ ಲೋಕದಲ್ಲಿ ಅಸ್ತಿತ್ವಕ್ಕೆ ಬಂದಿದ್ದರೆ ಆ ಮತವು ಸನಾತನವೆಂದು ಕರೆಯುವುದುಂಟು. ಮತ್ತೊಂದು ದೃಷ್ಟಿಯಿಂದ ಯಾವ ಮತದ ತತ್ವಗಳು ಸನಾತನವೂ ವಿಶ್ವವ್ಯಾಪಕವೂ ಆಗಿವೆಯೋ ಆ ಮತವನ್ನು ಸನಾತನ ಎಂದು ಕರೆಯುವುದು ಯುಕ್ತಿಯುಕ್ತವಾಗಿದೆ. ಈ ದೃಷ್ಟಿಯಿಂದಲೂ ವೀರಶೈವ ಮತವು ಸನಾತನವಾದುದೆಂದೂ ವಿಶ್ವವ್ಯಾಪಕವಾದುದೆಂದೂ ಈ ಮುಂದೆ ಹೇಳುವ ಕಾರಣಗಳಿಂದ ನಿರ್ಧರಿಸಬಹುದಾಗಿದೆ. ಮುಖ್ಯವಾಗಿ ಒಂದು ಮತ ತತ್ವಗಳ ಮೇಲಿನಿಂದಲೇ ಆ ಮತಕ್ಕೆ ಬಹು ಮಟ್ಟಿನ ಗೌರವ ಪ್ರಾಪ್ತವಾಗುತ್ತದೆ.

## ಸಿದ್ಧಾಂತ ಸ್ವರೂಪ

ವೀರಶೈವ ಮತವು ಸಿದ್ಧಾಂತವರ್ಗಕ್ಕೆ ಸೇರಿದುದು ; ಈ ಲಿಂಗವಂತ ಮತತತ್ವಗಳು ಶಿವೋಕ್ತಗಳಾದ ಕಾಮಿಕಾದಿ ವಾತುಲಾಂತ ಶಿವಾಗಮಗಳಲ್ಲಿ ಸ್ಪಷ್ಟವಾಗಿ ಉಕ್ತವಾಗಿವೆ. ವಾತುಲಾಗಮದ ಉತ್ತರ ಭಾಗದಲ್ಲಿ ಷಟ್‌ಸ್ಥಲ ವಿದ್ಯೆಯು ವಿಸ್ತಾರವಾಗಿ ಹೇಳಲ್ಪಟ್ಟಿದೆಯೆಂದು ಮಗ್ಗೆ ಮಾಯಿದೇವ, ಗುಬ್ಬಿ ಮಲ್ಲಣ್ಣಗಳು ಹೇಳಿದ್ದಾರೆ. ಆದುದರಿಂದ ಇದಕ್ಕೆ ದ್ವೈತಾದಿ ತ್ರಿಮತಗಳಂತೆ ಪ್ರಸ್ಥಾನತ್ರಯದ ಅವಶ್ಯಕತೆ ಹೆಚ್ಚಾಗಿ ತೋರಲಿಲ್ಲ. ಆದರೂ ವೈದಿಕರ ಸಮಾಧಾನಾರ್ಥವಾಗಿಯೂ, ಸ್ವಮತದ ಸನಾತನತ್ವವನ್ನು ತೋರಿಸುವ ಸಲುವಾಗಿಯೂ, ಈ ಹಿಂದೆ ಹೇಳಿದ ಲಿಂಗವಂತ ವಿಭೂತಿಗಳಿಬ್ಬರು ವ್ಯಾಸ ಸೂತ್ರಗಳಿಗೆ ವೀರಶೈವ ಮತಪರವಾದ ಭಾಷ್ಯಗಳನ್ನು ಬರೆದಿದ್ದಾರೆ.

ವೀರಶೈವ, ಶಿವಾದ್ವೈತ, ಶುದ್ಧಾದ್ವೈತ, ವಿಶೇಷಾದ್ವೈತ, ದ್ವೈತಾದ್ವೈತ, ಶಕ್ತಿವಿಶಿಷ್ಟಾದ್ವೈತ ಎಂಬಿವು ಪರ್ಯಾಯಪದಗಳು. ಶಕ್ತಿವಿಶಿಷ್ಟಾದ್ವೈತ ಎಂದರೆ ಶಕ್ತಿವಿಶಿಷ್ಟನಾದ ಜೀವನಿಗೂ ಶಿವನಿಗೂ ಸಾಮರಸ್ಯವೆಂದರ್ಥ. 'ಶಕ್ತಿಶ್ಚಶಕ್ತಿಶ್ಚ ಶಕ್ತೀ ತಾಭ್ಯಾಂ ವಿಶಿಷ್ಟೌ ಜೀವೇಶೌ ತಯೋಃ ಅದ್ವೈತಂ ಶಕ್ತಿವಿಶಿಷ್ಟಾದ್ವೈತಂ' ಎಂದು ಅದರ ನಿರ್ವಚನ. ಶಿವಾದ್ವೈತವೆಂದರೆ 'ದ್ವಯೋರ್ಭಾವಃ ದ್ವಿತಾ ದ್ವಿತೈವ ದ್ವೈತಂ ನಾ ದ್ವೈತಂ ಅದ್ವೈತಂ ಶಿವಸ್ಯ ಅದ್ವೈತಂ ಶಿವಾದ್ವೈತಂ' ಎಂದು ಅದರ ನಿರ್ವಚನ.

ವೀರಶೈವ ಮತದಲ್ಲಿ ಜೀವನನ್ನು ಅಂಗವೆಂದೂ, ಬ್ರಹ್ಮನನ್ನು ಲಿಂಗವೆಂದೂ ಕರೆಯುತ್ತಾರೆ. ಜೈನ, ಬೌದ್ಧ ಗ್ರಂಥಗಳಲ್ಲಿರುವಂತೆಯೇ ವೀರಶೈವ ಮತ ಗ್ರಂಥಗಳಲ್ಲಿಯೂ ಪಾರಿಭಾಷಿಕ ಶಬ್ದಗಳಿವೆ. ವೀರಶೈವ ಸಿದ್ಧಾಂತರೀತಿಯಾಗಿ ಪರಬ್ರಹ್ಮನು ಲಿಂಗರೂಪ ಶಿವನೆಂಬುದಾಗಿಯೂ, ಶಕ್ತಿವಿಶಿಷ್ಟನಾದ ಶಿವನು ಶಬ್ದಾರ್ಥಗಳಂತೆ, ಮಧುರುಚಿಯಂತೆ, ಚಂದ್ರಿಕಾ ಶೈತ್ಯದಂತೆ, ದೀಪ ಪ್ರಕಾಶದಂತೆ, ಕುಸುಮುಸೌರಭದಂತೆ ಭಿನ್ನವಾಗಿ ತೋರಿದರೂ ಅಭಿನ್ನನಾಗಿರುತ್ತಾನೆಂದೂ ಸಿದ್ಧವಾಗುತ್ತದೆ. ಇದರಿಂದ ವೀರಶೈವ ಸಿದ್ಧಾಂತಕಾರರು ಜಗತ್ತಿನ ಮೂಲರೂಪವು ಅದ್ವೈತ ರೂಪವಾದ ಶಿವ ಮತ್ತು ಶಕ್ತಿ ಎಂದು ಹೇಳಿದಂತಾಯಿತು. ವೀರಶೈವ ಮತವು ತಾತ್ವಿಕವಾಗಿಯೇ ಅಲ್ಲದೆ ವೈಜ್ಞಾನಿಕವಾಗಿಯೂ ಸಮಂಜಸವಾಗಿದೆ. Veerasiva reli gion is a Scientific Religion ಎಂದು ಪ್ರಾಜ್ಞರು ಹೇಳಿದ್ದಾರೆ. 'ವೀರಶೈವ' ಎಂಬುದರ ಅರ್ಥವನ್ನು ಲಿಂಗವಂತ ಪ್ರಾಚೀನ ಪಂಡಿತರು ಬಹಳ ಸ್ವಾರಸ್ಯವಾಗಿ ಹೇಳಿದ್ದಾರೆ.

ವೀರಶೈವ ಸಿದ್ಧಾಂತ ದೃಷ್ಟಿಯಿಂದ ಜೀವನು ಸಾಧಕಾವಸ್ಥೆಯಲ್ಲಿ ದ್ವೈತಿಯಾಗಿಯೂ, ಸಿದ್ಧಾವಸ್ಥೆಯಲ್ಲಿ ಅದ್ವೈತಿಯಾಗಿಯೂ ಪರಿಗಣಿಸಲ್ಪಟ್ಟಿದ್ದಾನೆ. ಇತರ ಸಿದ್ಧಾಂತಗಳಲ್ಲಿ ಪರಸ್ಪರ ವಿರುದ್ಧವೆಂದು ಭಾವಿಸಲ್ಪಟ್ಟಿರುವ 'ದ್ವೈತಾದ್ವೈತ'ಗಳು ವೀರಶೈವ ತತ್ವದಲ್ಲಿ ಅವಿರೋಧವಾಗಿ ಸಮನ್ವಯವಾಗಿವೆ. ಇದು ವೀರಶೈವ ಷಟ್ಸ್ಥಲವನ್ನು ತಿಳಿದವರಿಗೆ ಸುಲಭವಾಗಿ ಅರ್ಥವಾಗುತ್ತದೆ. ಈ ಅರ್ಥವೇ 'ದ್ವೈತಾದ್ವೈತ ಸಮಾಯುಕ್ತಂ ವೀರಶೈವಸ್ಯಲಕ್ಷಣಂ' ಎಂಬ ಸೂತ್ರದಲ್ಲಿ ಲಿಂಗಾಂಗಿ ಪಂಡಿತರಿಂದ ನಿರೂಪಿಸಲ್ಪಟ್ಟಿದೆ. ವೀಶೈವಮತವು ಕರ್ಮ ಮತ್ತು ಜ್ಞಾನ ಎರಡನ್ನೂ ಒಪ್ಪುತ್ತದೆ. ಯಜ್ಞಯಾಗಾದಿ ಹಿಂಸಾ ಪ್ರಧಾನವಾದ ಕರ್ಮಗಳನ್ನು ವೀರಶೈವರು ಅಂಗೀಕರಿಸುವುದಿಲ್ಲ. 'ಆತ್ಮವತ್ ಸರ್ವಭೂತೇಷು' ಎಂಬ ತತ್ವವನ್ನು ಅಕ್ಷರಶಃ ಪಾಲಿಸುವುದೇ ವೀರಶೈವ ಧರ್ಮವು. ಆದುದರಿಂದಲೇ ವೇದದ ಕರ್ಮಕಾಂಡವನ್ನು ಬಿಟ್ಟು ಜ್ಞಾನಕಾಂಡವು ಮಾತ್ರ ವೀರಶೈವ ಮತದಿಂದ ಅಂಗೀಕರಿಸಲ್ಪಟ್ಟಿದೆ. ದಾನ ಧರ್ಮ ಪರೋಪಕಾರ ಭೂತತೃಪ್ತಿ ಶಿವಧ್ಯಾನ ಶಿವಪೂಜಾದಿ ಸತ್ಕರ್ಮಗಳನ್ನು ವೀರಶೈವರು ಅವಶ್ಯವಾಗಿ ಅಂಗೀ

ಕರಿಸುತ್ತಾರೆ. 'ಕ್ರಿಯಾಜ್ಞಾನ ಸಮಾಯುಕ್ತಂ ವೀರಶೈವಸ್ಯ ಲಕ್ಷಣಂ' ಎಂಬ ವಾಕ್ಯದಲ್ಲಿ ಇದೆಲ್ಲವೂ ಅಡಕವಾಗಿದೆ.

ವೀರಶೈವಮತವು ಅಹಿಂಸಾ ಪ್ರಧಾನವಾದುದು. ಈ ವಿಷಯದಲ್ಲಿ ಜೈನ ಮತವನ್ನು ಸರಿಗಟ್ಟುವ ಯೋಗ್ಯತೆ ಹಿಂದೂ ಮತಗಳಲ್ಲಿ ವೀರಶೈವಕ್ಕಲ್ಲದೆ ಮತ್ತಾವುದಕ್ಕೂ ಇಲ್ಲ. ಆದುದರಿಂದಲೇ ಅದು ಪ್ರಚಂಡವಾದ ವೇದಕ್ಕೂ ಕೂಡ ತಲೆಬಾಗದೆ ತನ್ನ ತರ್ಕ ಮತ್ತು ಅನುಭವಗಳನ್ನು ಮುಂದಿಟ್ಟು ಅಹಿಂಸಾ ನಿಷ್ಠೆಯನ್ನು ತೋರಿಸಿದೆ. ವೀರಶೈವಮತದಲ್ಲಿ ಸ್ತ್ರೀ ಪುರುಷರಿಬ್ಬರೂ ಮೋಕ್ಷಕ್ಕೆ ಸಮಾನಾಧಿಕಾರಿಗಳಾಗಿದ್ದಾರೆ. ಬೌದ್ಧಮತವನ್ನುಳಿದು ಮತ್ತಾವ ಹಿಂದೂ ಮತದಲ್ಲಿಯೂ ಸ್ತ್ರೀಯರಿಗೆ ಈರೀತಿ ಮೋಕ್ಷಾಧಿಕಾರವಿದ್ದಂತೆ ತೋರುವುದಿಲ್ಲ. ಈಗಿನ ನವನಾಗರಿಕ ಸುಧಾರಕರ ಮುಂದಾದರೂ ವೀರಶೈವವು ಈ ಬಗ್ಗೆ ತಲೆ ಬಾಗಿಸಬೇಕಾಗಿಲ್ಲ. ವೀರಶೈವ ಮತದಲ್ಲಿ ಸ್ತ್ರೀ ಸ್ವಾತಂತ್ರ್ಯದಂತೆ ವ್ಯಕ್ತಿ ಸ್ವಾತಂತ್ರ್ಯವೂ ಉಂಟು. ಆದುದರಿಂದಲೇ ಅದು ವರ್ಣಾಶ್ರಮಗಳನ್ನು ಒಪ್ಪುವುದಿಲ್ಲ. ವರ್ಣಾಶ್ರಮವೆಂಬ ಕಟ್ಟುಗಳು ಹಲವರ ಆತ್ಮೋನ್ನತಿಗೆ ಬಾಧಕಗಳೆಂದು ಈ ಮತವು ತಿಳಿಯುತ್ತದೆ. ಚತುರ್ವರ್ಣ ಚತುರಾಶ್ರಮದ ಅನುಯಾಯಿಗಳ ಮತ ಪ್ರಕಾರ ಸ್ತ್ರೀ ಶೂದ್ರಾದಿಗಳಿಗೆ ವೇದಾಧಿಕಾರವೂ ದೇವತಾರ್ಚನಾಧಿಕಾರವೂ ಇಲ್ಲ. ಶೂದ್ರನಿಗೆ ಸಂನ್ಯಾಸಾಧಿಕಾರವಿಲ್ಲ. ಗೃಹಸ್ಥನಿಗೆ ಸಂನ್ಯಾಸವನ್ನು ಸ್ವೀಕರಿಸುವವರೆಗೂ ಬ್ರಹ್ಮೋಪದೇಶವಿಲ್ಲ. ಇತ್ಯಾದಿ ಅಡಚಣೆಗಳು ಸರ್ವಜೀವಿಗಳ ಕಲ್ಯಾಣಕ್ಕೆ ಬಾಧಕಗಳಾಗಿವೆಯೆಂದೂ ಯಾವುದೋ ಕಾಲದಲ್ಲಿ ಯಾರಹಿತಕ್ಕಾಗಿಯೋ ಯಾರಿಂದಲೋ ಏರ್ಪಡಿಸಲ್ಪಟ್ಟ ಈ ಚಿನ್ನದ ಸರಪಣಿಗಳಿಂದ ಬಂಧಿಸಲ್ಪಡಲು ವೀರಶೈವಮತವು ಇಷ್ಟಪಡುವುದಿಲ್ಲ. ಆದುದರಿಂದಲೇ ವೀರಶೈವ ಮತೋದ್ಧಾರಕನಾದ ಶ್ರೀ ಬಸವೇಶ್ವರನು ತನ್ನ ಷಟ್‌ಸ್ಥಲ ವಚನಗಳಲ್ಲಿ

ಸಪ್ತಧಾತು ಸಮಂಪಿಂಡಂ ಸಮಯೋನಿ ಸಮುದ್ಭವಂ ।
ಆತ್ಮಜೀವ ಸಮುತ್ಪನ್ನಂ ವರ್ಣಾನಾಂ ಕಿಂ ಪ್ರಯೋಜನಂ ? ॥

ಎಂದು ಸನಾತನ ಶಿವಾಗಮ ಸಿದ್ಧಾಂತವನ್ನೇ ಉದ್ಘೋಷಿಸಿರುವನು. ಲಿಂಗವಂತರ ಮತವು ಅಪ್ರಾಕೃತವೆಂದು ಶಿವಾಗಮಗಳಲ್ಲಿ ಹೇಳಿದೆ. ಅಂದರೆ

ಬ್ರಹ್ಮನಿಂದ ಸೃಷ್ಟಿಸಲ್ಪಟ್ಟವರು ವರ್ಣಾಶ್ರಮಿಗಳೆಂದೂ, ಶಿವನಿಂದ ಸೃಷ್ಟಿಸಲ್ಪಟ್ಟವರು ಅತಿವರ್ಣಾಶ್ರಮಿಗಳೆಂದೂ ಇದರ ಅರ್ಥ. ವೀರಶೈವಮತವು ಸ್ವರ್ಗಾದಿ ಫಲಗಳನ್ನು ಅಪೇಕ್ಷಿಸದೆ ಕೇವಲ ಮೋಕ್ಷವನ್ನು ಮಾತ್ರ ಇಚ್ಛಿಸುತ್ತದೆ. ಅದು ನಿಮಿತ್ತವೇ ಇಂದ್ರಲೋಕದ ಸುಖವನ್ನು ಕೊಡುವ ಯಜ್ಞಯಾಗಾದಿಗಳಿಗೆ ಲಿಂಗವಂತಿಕೆಯು ಶರಣು ಹೊಡೆದಿದೆ. ಈ ಮೊದಲೇ ನಿರೂಪಿಸಿದ ವೀರಶೈವ ಶಬ್ದಾರ್ಥದ ಶ್ಲೋಕಾಭಿಪ್ರಾಯದ ಪ್ರಕಾರ ವೀರಶೈವ ಮತವು ಮೋಕ್ಷೈಕಗಮ್ಯವಾಗಿದೆ ಎಂದು ತಾತ್ಪರ್ಯ.

ವೀರಶೈವಮತವು 'ಸಕಲ ಜೀವಾಳಿಯ ಲೇಸನೇ ಬಯಸುವ' ಸಲುವಾಗಿ ಮುಮುಕ್ಷುಗಳಾದ ಯಾವ ಮನುಷ್ಯರಾದರೂ ತನ್ನಲ್ಲಿ ಪ್ರವೇಶಿಸಲಿಕ್ಕೆ ಅವಕಾಶಕೊಟ್ಟಿದೆ. ಪೂರ್ವಕಾಲದಲ್ಲಿ, ಜೈನ, ಬೌದ್ಧ, ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಮೊದಲಾದ ಎಲ್ಲ ಮತಗಳ ಆಚಾರ್ಯರೂ ಹೀಗೆಯೇ ಉದಾರ ಧೋರಣವನ್ನು ಸ್ವೀಕರಿಸಿದ್ದರೆಂದು ತೋರುತ್ತದೆ.

ವೇದಾಂತಿಗಳು ನಿತ್ಯಾನಿತ್ಯವಸ್ತು ವಿವೇಕ, ಇಹಾಮುತ್ರಾರ್ಥ ಫಲಭೋಗ ವಿರಾಗ, ಶಮಾದಿ ಷಟ್ಕಸಂಪತ್ತಿ, ಮುಮುಕ್ಷುತಾ ಎಂಬಿವುಗಳನ್ನು ಸಾಧನ ಚತುಷ್ಟಯಗಳೆಂದು ಕರೆಯುವಂತೆ, ವೀರಶೈವ ಮತದಲ್ಲಿ'ಶಿವದೀಕ್ಷೆ, ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲ ರೂಪವಾದ ಲಿಂಗಾಂಗ ಸಾಮರಸ್ಯ ಎಂಬಿವು ಸಾಧನಚತುಷ್ಟಯವಾಗಿವೆ. 'ಶಿವದೀಕ್ಷಾ' ಎಂಬುದು ವೀರಶೈವ ಮತದ ಅತಿಮುಖ್ಯವಾದ ಸಂಸ್ಕಾರವಾಗಿದೆ. ವೈದಿಕರು ಪ್ರಧಾನವಾಗಿ ಗಣಿಸಿರುವ ನಾಲ್ವತ್ತು ಸಂಸ್ಕಾರಗಳಲ್ಲಿ ದಶಸಂಸ್ಕಾರಗಳನ್ನು ಮಾತ್ರ ವೀರಶೈವ ಮತವು ಅಂಗೀಕರಿಸುತ್ತದೆ. ಗರ್ಭಾದಾನ, ಪುಂಸವನ, ಸೀಮಂತ, ಜಾತಕರ್ಮ (ಲಿಂಗಧಾರಣ) ನಾಮಕರಣ, ಅನ್ನಪ್ರಾಶನ, ಚೌಲ, ಉಪನಯನ, (ಶಿವದೀಕ್ಷಾ) ವಿವಾಹ, ಅಂತ್ಯೇಷ್ಟಿ ಎಂಬಿವೇ ಆ ದಶಸಂಸ್ಕಾರಗಳು. ಮುಮುಕ್ಷುವಾದ ಮಾನವನು ಸ್ಥೂಲ, ಸೂಕ್ಷ್ಮ, ಕಾರಣ ಎಂಬ ಶರೀರತ್ರಯಗಳಲ್ಲಿ, ಇಷ್ಟ,ಪ್ರಾಣ, ಭಾವ ಎಂಬ ಲಿಂಗತ್ರಯಗಳನ್ನು ಸಂಯೋಜಿಸಿಕೊಂಡು, ಏಕೋತ್ತರ ಶತಸ್ಥಲ ಎಂಬ ಸೋಪಾನಗಳನ್ನು ಹತ್ತಲಿಕ್ಕೆ ಕರುಣಾಳುವಾದ ಗುರುವಿನಿಂದ 'ಶಿವದೀಕ್ಷೆ' ಎಂಬ ಸಂಸ್ಕಾರವನ್ನು ಹೊಂದ

ಬೇಕಾಗುತ್ತದೆ. ಈ ಶಿವದೀಕ್ಷೆಯು ವೈದಿಕರ ಉಪನಯನ—ಬ್ರಹ್ಮೋಪದೇಶಗಳ ಫಲಗಳೆರಡನ್ನೂ ಒಂದೇಬಾರಿಗೆ ಅನುಗ್ರಹಿಸುತ್ತದೆ. ಇದು ಬಹು ಮುಖ್ಯ ಸಂಸ್ಕಾರವಾಗಿದೆ. ಶಿವದೀಕ್ಷೆಯ ಮಹಿಮೆಯನ್ನು ಕೆರೆಯ ಪದ್ಮರಸನ ದೀಕ್ಷಾಬೋಧೆಯಲ್ಲಿ ಓದಬಹುದು. ಸಿದ್ಧಾಂತ ಶಿಖಾಮಣಿಯಲ್ಲಿ

ದೀಯತೇಚ ಶಿವಜ್ಞಾನಂ ಕ್ಷೀಯತೇ ಪಾಶಬಂಧನಂ ।
ಯಸ್ಮಾದತಃ ಸಮಾಖ್ಯಾತ ದೀಕ್ಷೇತೀಯಂ ವಿಚಕ್ಷಣೈಃ ॥

ಎಂಬುದಾಗಿ ಶ್ರೀ ರೇಣುಕಾಚಾರ್ಯರು ಹೇಳಿದ್ದಾರೆ. ಅಂದರೆ ಆಣವ, ಮಾಯಾ, ಕಾರ್ಮಿಕ ಮಲತ್ರಯಗಳನ್ನು ಕಳೆಯುವುದೇ ಶಿವದೀಕ್ಷೆಯು. ಈ ಶಿವದೀಕ್ಷೆಯು ವೇಧಾ, ಕ್ರಿಯಾ, ಮನು ಎಂಬ ಮೂರು ರೂಪವಾಗಿದೆ. ಶಿವದೀಕ್ಷೆಯಿಲ್ಲದೆ ವೀರಶೈವತ್ವ ಸಿದ್ಧಿಸಲಾರದು. ವೀರಶೈವ ಮತೋದ್ಧಾರಕನಾದ ಕೆರೆಯ ಪದ್ಮರಸನೆಂಬ ಮಹಾತ್ಮನು ತನ್ನ ದೀಕ್ಷಾಬೋಧೆ ಎಂಬ ಗ್ರಂಥದಲ್ಲಿ ದೀಕ್ಷಾರಹಿತನು ಶಿವಪೂಜೆಯ ಅಧಿಕಾರಕ್ಕೂ, ದೀಕ್ಷಾರಹಿತವಾದ ಶಿವಲಿಂಗವು ಅರ್ಚನಾಧಿಕಾರಕ್ಕೂ ಸಲ್ಲದು ಎಂಬುದನ್ನು

ಯಥಾಮೃಗಪತಿಂ ದೃಷ್ಟ್ವಾ ವಧಾ ಭೀತೋ ಮನೇಗಜಃ ।
ಆದೀಕ್ಷಿತೋರ್ಚಯೇಲ್ಲಿಂಗಾತ್ ತಥಾಭೀತೋ ಮಹೇಶ್ವರಃ ॥

ಎಂಬ ಶ್ಲೋಕದಲ್ಲಿ ಹೇಳಿದ್ದಾನೆ.

ಪರಿಶುದ್ಧನೂ ಮುಮುಕ್ಷುವೂ ಅಲ್ಲದವನಿಗೆ ಶಿವದೀಕ್ಷೆಯನ್ನು ಮಾಡಲಾಗದೆಂದು ಶಾಸ್ತ್ರಕಾರರು ವಿಧಿಸಿದ್ದಾರೆ. "ಎಲ್ಲರ ದೀಕ್ಷೆಯ ಪರಿಯಂತಲ್ಲ ಎಮ್ಮಯ್ಯನ ದೀಕ್ಷೆ, ನಡೆನುಡಿ ಶುದ್ಧವಾದವರಿಗಲ್ಲದೆ ಅನುಗ್ರಹಿಸನೋಡಾ, ಪಾರಮಾರ್ಥಿಕರಲ್ಲದ ಜಡನರರನೊಲ್ಲನೊಲ್ಲ, ದೀಕ್ಷೆಯಕೊಡನು ಭವಭಾರಿಗಳ ಮುಖದತ್ತ ನೋಡನಯ್ಯ ನಮ್ಮ ಕೂಡಲ ಚೆನ್ನಸಂಗಯ್ಯನೆಂಬ ಜ್ಞಾನಗುರುವು" ಎಂದು ಶ್ರೀ ಚೆನ್ನಬಸವೇಶ್ವರನೂ, "ಕುಂಬಳಕಾಯಿಗೆ ಕಬ್ಬಿನದ ಕಟ್ಟು ಕೊಟ್ಟರೆ, ಕೊಳೆವುದಲ್ಲದೆ ಬಲುವಾಗಬಲ್ಲುದೆ ? ಅಳಿಮನದರಿಗೆ ಶಿವದೀಕ್ಷೆಯ ಕೊಟ್ಟರೆ ಭಕ್ತಿ ಎಂತಹುದೋ ಮುನ್ನಿನಂತೆ ಕೂಡಲಸಂಗಯ್ಯ ಮಾನಹೀನನ ಮಿಾಸಲ ಕಾಯ್ದಿರಿಸಿದಂತೆ" ಎಂದು ಶ್ರೀ ಬಸವೇಶ್ವರನೂ ಹೇಳಿದ್ದಾರೆ. ಅಯೋಗ್ಯರಿಗೆ ಶಿವದೀಕ್ಷೆಯನ್ನು ಕೊಡಲಾಗ

ದೆಂಬುದೇ ಇದರ ತಾತ್ಪರ್ಯ. "ಎತ್ತಿಗೆ ಉತ್ತಮ ಲಿಂಗಮುದ್ರೆಯನು ಒತ್ತಿದರೆ ಅದ ಬಸವನೆಂಬರು, ಕತ್ತೆಯನು ಹಿಡಿತಂದು ಮುದ್ರೆಯ ನೊತ್ತಲು ಆ ಕತ್ತೆ ಕತ್ತೆಯಲ್ಲದೆ ಬಸವನಪ್ಪದೆ' ಎಂಬ ಅನುಭವಾಮೃತ ಕಾರನ ಮಾತು ಈ ಸಂದರ್ಭದಲ್ಲಿ ಸ್ಮರಣಾರ್ಹವಾಗಿದೆ.

ಶಿವದೀಕ್ಷಾಪೂರ್ವಕವಾದ ಲಿಂಗಧಾರಣವೇ ವೀರಶೈವ ಮತದ ಅಸಾಧಾರಣ ಲಕ್ಷಣ. A ಲಿಂಗವಂತರು ದೇವರಿದ್ದಾನೆಂದು ನಂಬುವ ಆಸ್ತಿಕ ವರ್ಗಕ್ಕೆ ಸೇರಿದವರು. ಆರ್ಯರ ಏಕೇಶ್ವರವಾದ, ದ್ರಾವಿಡರ ಭಕ್ತಿ ಮಾರ್ಗ, ಎರಡೂ ವೀರಶೈವರ ಲಿಂಗಪೂಜೆಯಲ್ಲಿ ಅಡಗಿವೆ. ವೇದಾಗಮ ಗಳಲ್ಲಿ ಅಭಿವರ್ಣಿತವಾಗಿರುವ ಪರಬ್ರಹ್ಮನನ್ನು ವೀರಶೈವರು ಲಿಂಗವೆಂದು ಪೂಜಿಸುತ್ತಾರೆ. ವೀರಶೈವ ಮತವು ಶೈವಧರ್ಮದ ಶಾಖೆಗಳಾದ ಸಾಮಾನ್ಯ ಶೈವ, ಮಿಶ್ರಶೈವ, ಶುದ್ಧಶೈವ, ಅನುಶೈವ, ಮಹಾಶೈವ ಎಂಬ ಪ್ರಭೇದ ಗಳಲ್ಲಿ ಸೇರಿದೆ. ಇತರ ಶೈವರಂತೆ ವೀರಶೈವರು ಸ್ಥಾವರ ಲಿಂಗಗಳನ್ನೂ ಬಗೆಬಗೆಯ ವಿಗ್ರಹಗಳನ್ನೂ ಪೂಜಿಸುವುದಿಲ್ಲ. ಪತಿವ್ರತಾ ಸ್ತ್ರೀಯು ತನ್ನ ಗಂಡನೊಬ್ಬನಲ್ಲಿಯೇ ನಿಷ್ಠಳಾಗಿರುವಂತೆ, ಲಿಂಗವಂತರು ಲಿಂಗರೂಪಿ ಪರಶಿವ ನೊಬ್ಬನನ್ನೇ ನೆಚ್ಚಿಮೆಚ್ಚಿ ಪೂಜಿಸುತ್ತಾರೆ. ವೀರಶೈವರು ಪೂಜಿಸುವ ಲಿಂಗವು ಗುಂಡಾಗಿಯೂ ಶ್ಯಾಮಲಾಕಾರವಾಗಿಯೂ ಇದೆ. ಪರಶಿವನ ಗುರುತು ವೃತ್ತ. ಬಣ್ಣ ಶ್ಯಾಮಲ ಎಂದು ಇದರ ತಾತ್ಪರ್ಯ ಲಿಂಗಪೂಜೆಯು ಸಾಧಕರಿಗೆ ಅತ್ಯಂತ ಉಪಯುಕ್ತವಾಗಿದೆ ಎಂಬುದು ಅನುಭವದಿಂದ ತಿಳಿದು ಬರುತ್ತದೆ.

ತಾ॥ ೧೨-೧೨-೧೯೩೪ ರಲ್ಲಿ ಧರ್ಮಸ್ಥಲದ ಸಕಲಮತ ಸಮ್ಮೇಳನದಲ್ಲಿ ನಿರೂಪಿಸಿದ ಭಾಷಣದ ಸಂಗ್ರಹ.

---

A ಶಿವದೀಕ್ಷೆಯಿಲ್ಲದ ಲಿಂಗಧಾರಿಗಳು ಹಿಂದುಗಳಲ್ಲಿ ಬಹು ಜನರಿದ್ದಾರೆ. ಆದರೆ, ಅವರೆಲ್ಲರೂ ವೀರಶೈವರೆನಿಸಿಕೊಂಡಿಲ್ಲ. ಸಮಾಜದಲ್ಲಿ ಸಂಪರ್ಕಪಡೆದಿಲ್ಲ.

# ಲಿಂಗವಂತ ಸಂಸ್ಕೃತಿ

ಒಂದು ದೇಶದ ಜನರಿಗಾಗಲಿ, ಒಂದು ಧರ್ಮದ ಜನರಿಗಾಗಲಿ ಒಂದು ಸಂಸ್ಕೃತಿಯಿರುತ್ತದೆ. ಭರತವರ್ಷದಲ್ಲಿ ಜನತೆಯ ಸಂಸ್ಕೃತಿಗೂ, ಧರ್ಮಕ್ಕೂ ನಿಕಟ ಸಂಬಂಧವಿದೆ. ಹಿಂದೂ ಧರ್ಮವು ವಿಶ್ವದಲ್ಲಿ ಉದಾತ್ತವೂ ವಿಚಿತ್ರವೂ ಆದುದು. ಈ ಧರ್ಮವೃಕ್ಷದಲ್ಲಿ ಅನಂತ ಮತ ಪಂಥಗಳಿವೆ. ಅದುಕಾರಣವೇ ಹಿಂದೂ ಸಮಾಜದಲ್ಲಿ ಅಪರಿಮಿತ ಕುಲ ಜಾತಿಗಳಿವೆ. ಹೀಗಿದ್ದರೂ ಪರ್ಯವಸಾನದಲ್ಲಿ ಈ ಧರ್ಮವೂ, ಸಮಾಜವೂ ಒಂದೇ ಸಂಸ್ಕೃತಿಯುಳ್ಳುದು ಎಂದು ಪರಿಗಣಿತವಾಗಿದೆ.

ಹಿಂದೂ ಸಮಾಜದ ಬೇರೆ ಬೇರೆ ವರ್ಣ, ಜಾತಿಯವರಿಗೂ ವಿಶಿಷ್ಟವಾದ ಸಂಸ್ಕೃತಿಯಿದೆ. ಈ ಎಲ್ಲ ಸಂಸ್ಕೃತಿಯ ವಿವಿಧತೆಯನ್ನೂ ಹಿಂದೂ ಧರ್ಮ ಎಂಬ ಸಮುದ್ರವು ಅಡಗಿಸಿಕೊಂಡಿದೆ. ಆದುದರಿಂದಲೇ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ವರ್ಣಬದ್ಧರೂ, ಹರಿಜನರೆಂದು ಕರೆಸಿಕೊಳ್ಳುತ್ತಿರುವ ಆದಿಜನರೂ, ಸ್ವತಂತ್ರ ವಿಚಾರಿಗಳಾದ ಜೈನ, ಬೌದ್ಧರೂ, ಉದಾತ್ತರಾದ ಲಿಂಗವಂತರೂ, ಸಿಖ್ಖರೂ ಈ ಹಿಂದೂ ಸಮಾಜವೆಂಬ ಹಿಮಾಲಯದಲ್ಲಿಯೇ ಸೇರಿಹೋಗಿದ್ದಾರೆ. ಹಿಮಾಲಯದಲ್ಲಿ ಪಂಚವಲಯದ ಗುಣವೂ ಇದೆ. ಆದರೂ ಅದು ಉಷ್ಣವಲಯದ ಪರ್ವತವೆಂದೇ ಕರೆಯಲ್ಪಟ್ಟಿದೆ. ಆದುದರಿಂದಲೇ ಹಿಮಾಲಯದಂತೆಯೇ ಹಿಂದೂ ಸಮಾಜವೆಂದು ಇಲ್ಲಿ ಹೇಳಿದುದು.

ಭಾರತ ಧರ್ಮದಲ್ಲಿ ಜೈನ, ಬೌದ್ಧ, ಶೀಖ ಮತಗಳು ಹೇಗೆ ಸ್ವತಂತ್ರವಾಗಿವೆಯೋ ವೀರಶೈವ ಮತವೂ ಹಾಗೆಯೇ ಸ್ವತಂತ್ರವಾಗಿದೆ. ಹಿಂದೂ ಧರ್ಮದ ತಿರುಳು ಲಿಂಗವಂತಿಕೆಯಲ್ಲಿದೆ. ಆದರೆ ಕೆಲವು ವಿಚಾರಗಳಲ್ಲಿ ಅದು ಭಿನ್ನವಾಗಿದೆ. ಹಿಂದೂಸ್ಥಾನದಲ್ಲಿ ಕರ್ಣಾಟಕವು ಹಲವು ಕಾರಣಗಳಿಂದ ಪ್ರಾಮುಖ್ಯವಾಗಿರುವಂತೆ, ಹಿಂದೂ ಸಮಾಜದಲ್ಲಿ ವೀರಶೈವ ಸಮಾಜವು ಕೆಲವು

ನಿಮಿತ್ತಗಳಿಂದ ಗಣನೀಯವಾಗಿದೆ. ಆ ಪ್ರಾಮುಖ್ಯತೆಯನ್ನು ತಿಳಿಯಲಿಚ್ಛಿಸುವವರು ಲಿಂಗವಂತ ಸಂಸ್ಕೃತಿಯ ಪರಿಚಯವನ್ನು ಮಾಡಿಕೊಳ್ಳಬೇಕಾಗುತ್ತದೆ.

ಒಂದು ಜನಾಂಗದ ಧರ್ಮ, ಮತ, ಆಚಾರ, ನಡೆ, ನುಡಿ, ವೇಷ. ಭಾಷೆ, ವ್ರತ, ನಿಯಮ, ಊಟ, ಉಪಚಾರ, ಸುಖ, ದುಃಖ, ಮದುವೆ, ಮುಂಜಿ ಇತ್ಯಾದಿಗಳಲ್ಲಿ ತೋರುವ ಚಲನವಲನಗಳನ್ನು ಸಂಸ್ಕೃತಿಯೆನ್ನುತ್ತಾರೆ. ಚಿನ್ನದ ಗುಣವನ್ನು ಬಣ್ಣದಿಂದ, ರತ್ನದ ಗುಣವನ್ನು ಕಾಂತಿಯಿಂದ, ಹೂವಿನ ಗುಣವನ್ನು ವಾಸನೆಯಿಂದ, ಆಕಳ ಗುಣವನ್ನು ಹಾಲಿನಿಂದ, ನಾಟಕದ ಗುಣವನ್ನು ಪರಿಣಾಮದಿಂದ, ಗುರುವಿನ ಗುಣವನ್ನು ಶೀಲದಿಂದ, ಕವಿಯ ಯೋಗ್ಯತೆಯನ್ನು ಶೈಲಿಯಿಂದ, ಶಿಲ್ಪದ ಗುಣವನ್ನು ಹೃದಯಂಗಮತೆಯಿಂದ ನಿರ್ಣಯಿಸುವಂತೆ ಜನತೆಯ ಯೋಗ್ಯತೆಯನ್ನು ಅದರ ಸಂಸ್ಕೃತಿಯಿಂದ ನಿರ್ಣಯಿಸಬೇಕಾಗುತ್ತದೆ. 'ಸಂಸ್ಕೃತಿ' ಎಂಬುದನ್ನು ಕನ್ನಡದಲ್ಲಿ 'ಹುಟ್ಟುಗುಣ' ಎಂದೂ, ಇಂಗ್ಲೀಷಿನಲ್ಲಿ Culture ಎಂದೂ ಹೇಳುತ್ತಾರೆ.

ವೀರಶೈವ ಸಂಸ್ಕೃತಿಯನ್ನು ತಿಳಿಯಬೇಕೆಂಬ ಜಿಜ್ಞಾಸುಗಳು ಮೊದಲು ಅದರ ಸಿದ್ಧಾಂತ, ಸಾಹಿತ್ಯ, ಚರಿತ್ರೆ, ಸಮಾಜರಚನೆ ಮತ್ತು ಸಂಪ್ರದಾಯಗಳನ್ನು ತಿಳಿದುಕೊಳ್ಳಬೇಕು. ಈ ಸಂಸ್ಕೃತಿ ಸುಲಭವಾಗಿ ಅರ್ಥವಾಗುವುದಿಲ್ಲ. ಈಗ ವೀರಶೈವರಲ್ಲಿ ಹಲವು ಗಡಿಬಿಡಿಗಳು ಕಂಡು ಬರುವುದಕ್ಕೆ ಬಹು ಜನರು ತಮ್ಮ ಸಂಸ್ಕೃತಿಯ ಜ್ಞಾನರಹಿತರಾಗಿರುವುದೇ ಕಾರಣವಾಗಿದೆ.

ಲಿಂಗವಂತರ ಸಂಸ್ಕೃತಿಯು ಜೇನುತುಪ್ಪದಂತೆ. ಹಲವು ದುಂಬಿಗಳು ವಿವಿಧ ಪುಷ್ಪಗಳ ರಸವನ್ನು ಹಲವು ಕಾಲ ಶ್ರಮಿಸಿ ತಂದು ಕೂಡಿಹಾಕಿದರೆ ಆಗ ಜೇನುತುಪ್ಪವಾಗುವುದು. ಅಂತೆಯೇ ಲಿಂಗವಂತ ಸಂಸ್ಕೃತಿಯಾಗಿದೆ. ಹಲವು ಮಂದಿ ಆಚಾರ್ಯರ, ಪ್ರಮಥರ, ಕವಿಗಳ, ರಾಜರ, ತ್ಯಾಗಿಗಳ, ಪುಣ್ಯಶ್ಲೋಕರ, ಕಲಾವಿದರ, ಶರಣೆಯರ, ಹದಿಬದೆಯರ, ವೀರರ, ಧೀರರ, ಶ್ರೀಮಂತರ, ಧೀಮಂತರ, ಬುದ್ಧಿ, ಅನುಭವ, ಪ್ರತಿಭೆ, ಘನತೆ, ತ್ಯಾಗ,

ಸುಕೃತ, ಕಲೆ, ನಿಷ್ಠೆ, ಪವಿತ್ರತೆ, ವೀರ್ಯ, ಶೌರ್ಯ, ಧೈರ್ಯ ಇವುಗಳ ಸಾರಸರ್ವಸ್ವವೇ ವೀರಶೈವ ಸಂಸ್ಕೃತಿಯಾಗಿದೆ.

ಒಂದು ಜನಾಂಗದ ಸಂಸ್ಕೃತಿಯನ್ನು ಅಥವಾ ಸಭ್ಯತೆಯನ್ನು ಪರೀಕ್ಷಿಸಲು ನಾವು ಮುಂದೆ ಹೇಳಿರುವ ಮಾರ್ಗವನ್ನು ಅನುಸರಿಸಬೇಕಾಗುತ್ತದೆ.

೧. ಆ ಸಮಾಜವು ಅನುಸರಿಸುವ ತತ್ವಜ್ಞಾನ

೨. ಆ ಸಮಾಜದ ಸಾಹಿತ್ಯ, ಕಲೆ, ವಿದ್ಯೆ.

೩. ಆ ಸಮಾಜದ ಚರಿತ್ರೆ ಮತ್ತು ಪರಂಪರೆ

೪. ಆ ಸಮಾಜದ ಆಚಾರ-ವಿಚಾರ, ಆಹಾರ-ವ್ಯವಹಾರ, ಗುಣ-ಶೀಲ, ಮಾತುಕತೆಗಳು.

೫. ಆ ಸಮಾಜದ ರಚನೆ, ಸ್ವರೂಪ ಇತ್ಯಾದಿ.

ಮೇಲೆ ಹೇಳಿರುವ ಐದು ದೃಷ್ಟಿಗಳಿಂದ ನಾವು ವೀರಶೈವ ಸಂಸ್ಕೃತಿಯನ್ನು ವಿಮರ್ಶಿಸಬೇಕಾಗಿದೆ.

## ವೀರಶೈವ ತತ್ವಜ್ಞಾನ

ಯಾವುದೊಂದು ಸಮಾಜಕ್ಕಾದರೂ ತತ್ವಜ್ಞಾನದ ಬೆಂಬಲವಿರಬೇಕು. ಇಲ್ಲವಾದರೆ ಆ ಸಮಾಜವು ಕಾಡುಜನಗಳ A ಗುಂಪಿಗೆ ಸೇರಬೇಕಾಗುತ್ತದೆ. ವೀರಶೈವರು ಉದಾತ್ತವಾದ ಪರಂಪರೆ ಮತ್ತು ತತ್ವಜ್ಞಾನದ ಸಂಬಂಧವನ್ನು ಪಡೆದಿದ್ದಾರೆ. ಹಿಂದೂದೇಶದಲ್ಲಿ ಉತ್ತಮ ತತ್ವಜ್ಞಾನವುಳ್ಳ ಸಮಾಜವನ್ನೇ ಸುಸಂಸ್ಕೃತವೆನ್ನುವ ಪರಿಪಾಠವಿದೆ. ಲಾವಣ್ಯವುಳ್ಳ ರಮಣಿಯ ಮುಖದಂತೆ ಆ ತತ್ವಜ್ಞಾನವುಳ್ಳ ಸಮಾಜವು ಕಂಗೊಳಿಸುತ್ತದೆ.

---

A ಕಾಡುಕುರುಬರು, ಲಂಬಾಣಿಗರು, ಚೊಂಚರು, ಕೊರಮರು ಮೊದಲಾದ ಅರಣ್ಯವಾಸಿ ಜನರಿಗೆ ಯಾವ ತತ್ವಜ್ಞಾನದ ಸಂಪರ್ಕವೂ ಇಲ್ಲ.

ಲಿಂಗವಂತರ ಧಾರ್ಮಿಕ ಗ್ರಂಥಗಳನ್ನವಲೋಕಿಸಿದರೆ ವೀರಶೈವ, ಶಿವಾದ್ವೈತ, ದ್ವೈತಾದ್ವೈತ, ಶಕ್ತಿವಿಶಿಷ್ಟಾದ್ವೈತ, ವಿಶಿಷ್ಟಾದ್ವೈತ, ಎಂಬ ಮಾತುಗಳು ಪರ್ಯಾಯವಾಗಿ ತೋರುತ್ತವೆ. ಲಿಂಗವಂತ, ಲಿಂಗಧಾರಿ, ಶಿವಭಕ್ತ, ಲಿಂಗಾಂಗಿ, ಲಿಂಗಭಕ್ತ ಎಂಬೀ ನಾಮಗಳೂ ವೀರಶೈವರಿಗುಂಟು. ಕೆಲವು ವೀರಶೈವ ಕನ್ನಡ ಗ್ರಂಥಗಳಲ್ಲಿ ಈ ಹೆಸರುಗಳೇ ಲಭಿಸುತ್ತವೆ. ಮುಸಲ್ಮಾನರ ದೌಲತ್ತಿನಿಂದೀಚೆಗೆ ವೀರಶೈವರನ್ನು 'ಲಿಂಗಾಯತ' ಎಂದು ಕರೆದಂತೆ ತೋರುತ್ತದೆ. ಇತ್ತೀಚಿನ ಕೆಲವು ವೀರಶೈವ ವಿದ್ವಾಂಸರು 'ಲಿಂಗಾಯತ' ಎಂಬ ಮಾತನ್ನು ತಮ್ಮ ವೈದುಷ್ಯದ ಬಲದಿಂದ ಸಂಸ್ಕೃತವೆಂದು ಸಾಧಿಸಿ, "ಲಿಂಗೇ ಆಯತಃ ಅಥವಾ ಲಿಂಗೇನ ಆಯತಃ ಲಿಂಗಾಯತಃ" ಎಂದು ನಿರ್ವಚನ ಮಾಡಿದ್ದಾರೆ. ಆದರೆ ಇವರ ಸಾಹಸಕ್ಕೆ ಪ್ರಯೋಗದ ಬೆಂಬಲವಿಲ್ಲ. ನಮಗೆ ತಿಳಿದ ಮಟ್ಟಿಗೆ ಕನ್ನಡ, ತೆಲುಗು, ತಮಿಳು, ಸಂಸ್ಕೃತ ಭಾಷೆಯ ಯಾವ ವೀರಶೈವ ಗ್ರಂಥದಲ್ಲಿಯೂ ಈ ಪ್ರಯೋಗ ಸಿಗುವುದು ದುರ್ಲಭವಾಗಿದೆ. ಶಾಸನದಲ್ಲಾಗಲಿ, ವಚನಶಾಸ್ತ್ರದಲ್ಲಾಗಲಿ ಈ ಪದಪ್ರಯೋಗ ಕಾಣುತ್ತಿಲ್ಲ. ಆದಕಾರಣ ಲಿಂಗಾಯತ ಎಂಬ ಮಾತು ಬಾಗಾಯತ್, ಪಂಚಾಯತ್‌ಗಳಂತೆ ಆಧುನಿಕವೂ ವ್ಯಾವಹಾರಿಕವೂ ಆಗಿದೆಯೆಂದು ತಾನಾಗಿಯೇ ಸಿದ್ಧವಾಗುತ್ತದೆ.

ಕೆಲವರ ಅಭಿರುಚಿಯಲ್ಲಿ 'ಲಿಂಗವಂತ' ಎಂಬುದು ಹೆಚ್ಚು ಸುಂದರವಾಗಿ ತೋರುತ್ತದೆ. 'ವೀರಶೈವ' ಎಂಬುದು ಶಾಸ್ತ್ರೀಯ ಪ್ರಯೋಗವೆಂಬುದು ನಿಜ. ಆದರೆ ವೀರಶೈವವು ವೀರವೈಷ್ಣವಕ್ಕೆ ಪ್ರತಿಸ್ಪರ್ಧಿಯೆಂದು ಕೆಲವರು ತಿಳಿದಿದ್ದಾರೆ. ಹಿಂದೂ ದೇಶದಲ್ಲಿ ಶೈವ, ವೈಷ್ಣವ ಮತಗಳ ಕಲಹವು ಹೆಚ್ಚು ಪ್ರಬಲವಾಗಿದ್ದಾಗ ಈ ಹೆಸರುಗಳು ಬಳಕೆಗೆ ಬಂದಿರಬೇಕೆಂದು ಹಲವರ ತರ್ಕ. 'ವೀರವೈಷ್ಣವ' ಎಂಬುದನ್ನು ಕೇಳಿದಾಗ ವೀರಶೈವನಿಗೂ, 'ವೀರಶೈವ' ಎಂಬ ಹೆಸರನ್ನುಕೇಳಿದಾಗ ವೀರವೈಷ್ಣವನಿಗೂ ಕಳವಳವಾಗುತ್ತದೆಂಬುದು ಅನುಭವದಿಂದ ತಿಳಿದುಬರುವ ವಿಚಾರ. ಆದುದರಿಂದ 'ಲಿಂಗವಂತ' ಎಂಬುದು ಸರಲವೆಂದು ಕೆಲವುಮಂದಿ ಜಾಣರ ವಾದ. ಅವರಿಗೆ 'ವೀರಶೈವ' ಎಂಬುದು ಅಪ್ರಿಯವೆಂದಲ್ಲ, ಇದಕ್ಕಿಂತ ಅದು ಪ್ರಿಯವೆಂದು ಮಾತ್ರ. ಇವೆರಡೂ ಪರ್ಯಾಯ ಪದಗಳಾದುದರಿಂದ ಈಗ ಅದರ ಚರ್ಚೆಯೇ ಬೇಡ.

ವೀರಶೈವವು ವೇದಾಂತಸಾರವೆಂದೂ, ನಿಗಮಾಗಮ ಸಮ್ಮತವೆಂದೂ, ಪ್ರಾಚೀನ ವಿದ್ವಾಂಸರು ಹೇಳಿದ್ದಾರೆ. ಸಿದ್ಧಾಂತ ಶಿಖಾಮಣಿಯಲ್ಲಿ ಶ್ರೀ ರೇಣುಕಾಚಾರ್ಯರು ಅಗಸ್ತ್ಯ ಮುನಿಚಂದ್ರನನ್ನು ಕುರಿತು ಮುಂದೆ ಹೇಳುವಂತೆ ವೀರಶೈವದ ಅರ್ಥ ವಿವರಣೆ ಮಾಡಿದ್ದಾರೆ.

ಶ್ಲೋ॥ ವಿಶಬ್ದೇನೋಚ್ಯತೇ ವಿದ್ಯಾ ಶಿವಜೀವೈಕ್ಯ ಬೋಧಿಕಾ ।
ತಸ್ಯಾಂ ರಮಂತೇ ಯೇ ಶೈವಾ ವೀರಶೈವಾಸ್ತು ತೇ ಮತಾಃ ॥
ವೇದಾಂತ ಜನ್ಯಂ ಯದ್ ಜ್ಞಾನಂ ವಿದ್ಯೇತಿ ಪರಿಕೀರ್ತ್ಯತೇ ।
ವಿದ್ಯಾಯಾಂ ರಮತೇತಸ್ಯಾಂ ವೀರ ಇತ್ಯಭಿಧೀಯತೇ ॥
ವಿದ್ಯಾಯಾಂ ಶಿವರೂಪಾಯಾಂ ರಮಂತೇ ಯೇ ವಿಶೇಷತಃ ।
ತಸ್ಮಾದೇತೇ ಮಹಾಭಾಗಾ ವೀರಶೈವಾ ಇತಿಸ್ಮೃತಾ; ॥

(ಸಿದ್ಧಾಂತ ಶಿಖಾಮಣಿ)

ಇದೇ ವಿಚಾರವನ್ನು ಶ್ರೀ ನೀಲಕಂಠ ಶಿವಾಚಾರ್ಯನ ಬ್ರಹ್ಮಸೂತ್ರ ಪರ ವೀರಶೈವ ಭಾಷ್ಯವನ್ನು ಕಾರಿಕಾರೂಪವಾಗಿ ಸಂಗ್ರಹಿಸಿದ ಶ್ರೀ ನೀಲಕಂಠಾಚಾರ್ಯನು ತನ್ನ ಕ್ರಿಯಾಸಾರ ಎಂಬ ಗ್ರಂಥದಲ್ಲಿ ಕೂಡ ಹೇಳಿದ್ದಾನೆ.

ಶ್ಲೋ॥ ವಿಶಬ್ದೇನೋಚ್ಯತೇ ವಿದ್ಯಾ ಶಿವಜೀವೈಕ್ಯ ಬೋಧಿನೀ ।
ತಸ್ಯಾಂ ರಮಂತೇ ಯೇ ಶೈವಾ ವೀರಶೈವಾಃ ಪ್ರಕೀರ್ತಿತಾಃ॥
ವಿ ಶಬ್ದೋವಾ ವಿಕಲ್ಪಾರ್ಥೋ ರ ಶಬ್ದೋ ರಹಿತಾರ್ಥಕಃ ।
ವಿಕಲ್ಪ ರಹಿತಂ ಶೈವಂ ವೀರಶೈವಂ ಪ್ರಚಕ್ಷ್ಯತೇ ॥
ವಿರೋಧಾರ್ಥೋ ವಿಶಬ್ದಸ್ಯಾತ್ ರ ಶಬ್ದೋ ರಹಿತಾರ್ಥಕಃ ।
ವಿರೋಧ ರಹಿತಂ ಶೈವಂ ವೀರಶೈವಂ ವಿದುರ್ಬುಧಾಃ ॥
ತತ್ರಾಪ್ಯುತಸ್ಯ ವಾಕ್ಯೋಕ್ತಂ ಲಿಂಗಧಾರಣ ವೈಭವೇ ।
ಲಿಂಗಾಂಗ ಸಾಮರಸ್ಯೇಚ ಫಲಂ ಮೋಕ್ಷಂ ಪ್ರಚಕ್ಷ್ಯತೇ ॥

(ಕ್ರಿಯಾಸಾರ)

ಶಿವಜೀವೈಕ್ಯ ರೂಪವಾದ ವಿದ್ಯೆಯಲ್ಲಿ ಯಾರು ರಮಿಸುತ್ತಾರೋ ವಿಕಲ್ಪರಹಿತವೂ, ವಿರೋಧ ರಹಿತವೂ ಆದ ಶಿವಭಕ್ತಿಯಿಂದ ಯಾರು ಕೂಡಿ

ದ್ದಾರೋ; ಲಿಂಗಾಧಾರಣ ಲಿಂಗಪೂಜೆಯ ಮೂಲಕ ಯಾರು ಲಿಂಗಾಂಗ ಸಾಮರಸ್ಯವೆಂಬ ಮೋಕ್ಷರೂಪದ ಫಲವುಳ್ಳವರಾಗಿದ್ದಾರೋ ಅವರನ್ನೇ ವೀರ ಶೈವರೆಂದು ಉಭಯ ಗ್ರಂಥಕಾರರು ವರ್ಣಿಸಿದ್ದಾರೆ.

ವೇದವ್ಯಾಸನ ಬ್ರಹ್ಮಸೂತ್ರಗಳಿಗೆ ವೀರಶೈವ ಸಿದ್ಧಾಂತ ಪರವಾಗಿ ಭಾಷ್ಯವನ್ನು ಬರೆದು ಲೋಕ ವಿಖ್ಯಾತರಾಗಿರುವ ಭಗವತ್ಪಾದ ಶ್ರೀಪತಿ ಪಂಡಿತಾಚಾರ್ಯರು ಶ್ರೀಕರಭಾಷ್ಯದಲ್ಲಿ ವೀರಶೈವ ಮತವು ಸರ್ವ ಶ್ರುತಿ ಸಮನ್ವಯವಾದುದೆನ್ನುವರು.

ಶ್ಲೋಕ॥ ಶ್ರುತ್ಯೇಕದೇಶಪ್ರಾಮಾಣ್ಯಂ ದ್ವೈತಾದ್ವೈತಮತಾದಿಷು ।
ದ್ವೈತಾದ್ವೈತಮತೇ ಶುದ್ಧೇ ವಿಶೇಷಾದ್ವೈತ ಸಂಜ್ಞಕೇ ॥
ವೀರಶೈವೈಕ ಸಿದ್ಧಾಂತೇ ಸರ್ವಶ್ರುತಿಸಮನ್ವಯಃ.... ।

ಎಂಬೀ ಶ್ಲೋಕಗಳ ತಾತ್ಪರ್ಯದಿಂದ ದ್ವೈತ, ಅದ್ವೈತ, ವೈದಿಕ ಮತಗಳಂತೆ ಶ್ರುತ್ಯೇಕದೇಶ ಪ್ರಾಮಾಣ್ಯವನ್ನು ವೀರಶೈವವು ಒಪ್ಪದೆ, ಸರ್ವ ಶ್ರುತಿ ಸಮನ್ವಯತ್ವವನ್ನು ಅಂಗೀಕರಿಸಿ ವಿಖ್ಯಾತವಾಗಿದೆ ಎಂದು ಸಿದ್ಧವಾಗುತ್ತದೆ.

ಧರ್ಮ, ಮತ, ವರ್ಣ, ಜಾತಿ, ಕುಲ ಎಂಬೀ ಶಬ್ದಗಳು ಭಿನ್ನಾರ್ಥ ಬೋಧಕಗಳು. ಶಾಸ್ತ್ರಮೂಢರನೇಕರು ಇವನ್ನೆಲ್ಲಾ ಏಕಾರ್ಥದಲ್ಲಿ ಪ್ರಯೋಗಿಸುವರು. ವೀರಶೈವವು 'ಮತ' ಎಂದು ವ್ಯವಹರಿಸಲ್ಪಟ್ಟಿದೆ. ಜೀವಿಗಳು ಬ್ರಹ್ಮನನ್ನು ಕೂಡುವ ಮಾರ್ಗವನ್ನು ಹೇಳುವುದೇ ಮತವು. ಪೂರ್ವಾಚಾರ್ಯರು ತಮತಮಗೆ ಸರಿತೋರಿದಂತೆ ವಿವಿಧವಾದ ಜೀವ ಬ್ರಹ್ಮೈಕ್ಯ ಮಾರ್ಗವನ್ನು ಜಗತ್ತಿಗೆ ಬೋಧಿಸಿರುವರು. ಅಧಿಕಾರ ಅಭಿ ರುಚಿಗಳಿಗೆ ತಕ್ಕಂತೆ ಸಾಧಕರು ಆಯಾ ಮತಗಳನ್ನು ಅಂಗೀಕರಿಸಬಹುದು. ಸಿದ್ಧಾಂತ, ದರ್ಶನ, ಮಾರ್ಗ, ಸಮಯ ಇವು ಮತಶಬ್ದದ ಪರ್ಯಾಯ ಶಬ್ದಗಳಾಗಿವೆ.

ದ್ವೈತ, ಅದ್ವೈತ, ವಿಶಿಷ್ಟಾದ್ವೈತ, ಸಾಂಖ್ಯ, ಯೋಗ, ಪಾಶುಪತ ಗಳಂತೆ ವೀರಶೈವವೂ ಒಂದು ಮತವಾಗಿದೆ. ಇದು ದ್ವೈತಾದ್ವೈತಗಳಂತೆ

ಕೇವಲ ಶ್ರದ್ಧಾಪ್ರಧಾನವಾಗಿಲ್ಲ. ಜೈನ, ಬೌದ್ಧಗಳಂತೆ ತರ್ಕಪ್ರಧಾನವೂ ಅಲ್ಲ. ಚಾರ್ವಾಕದಂತೆ ತರ್ಕಾತಿರೇಕವೂ ಅಲ್ಲ. ಅದು ಕಾರಣವೇ ಈ ಮತವು ಇತರ ದರ್ಶನಗಳಲ್ಲಿ ಪರಸ್ಪರ ಭಿನ್ನವೆಂದು ಭಾವಿಸಲ್ಪಟ್ಟಿರುವ ದ್ವೈತಾದ್ವೈತ, ಕ್ರಿಯಾಜ್ಞಾನಗಳನ್ನು ತನ್ನಲ್ಲಿ ಅವಿರೋಧವಾಗಿ ಅಡಗಿಸಿ ಕೊಂಡಿದೆ. ಇದು ಶ್ರದ್ಧೆ ಮತ್ತು ತರ್ಕಗಳೆರಡಕ್ಕೂ ಪ್ರಧಾನವಾಗಿದೆ. ಸರ್ವಶ್ರುತಿಸಮನ್ವಯತ್ವದಂತೆಯೇ ಸರ್ವಯೋಗ ಸಮನ್ವಯತ್ವವೂ ಈ ಮತಕ್ಕುಂಟಾಗಿದೆ. ಅದು ನಿಮಿತ್ತವೇ ಇದು ಸಾಧಕರಿಗೆ ಸುಗಮವೂ ಫಲಪ್ರದವೂ ಆಗಿದೆ.

ವೀರಶೈವ ಸಿದ್ಧಾಂತದಲ್ಲಿ ಸಾಧಕಾವಸ್ಥೆಯಲ್ಲಿ ಜೀವನು ದ್ವೈತವನ್ನೂ, ಸಿದ್ಧಾವಸ್ಥೆಯಲ್ಲಿ ಅದ್ವೈತವನ್ನೂ ಅನುಸರಿಸುತ್ತಾನೆ. "ದ್ವೈತಾದ್ವೈತ ಸಮಾಯುಕ್ತಂ ವೀರಶೈವಸ್ಯ ಲಕ್ಷಣಂ" ಎಂದು ಗ್ರಂಥಗಳು ಹೇಳುತ್ತವೆ. ಉಪನಿಷತ್ತಿನಲ್ಲಿ ದ್ವೈತ ಮತ್ತು ಅದ್ವೈತದ ಅರ್ಥವುಳ್ಳ ಮಂತ್ರಗಳೆರಡೂ ಉಂಟೆಂದು ಪ್ರೊ॥ ರಾನಡೆ ಉಪನಿಷದ್ರಹಸ್ಯದಲ್ಲಿ ಹೇಳಿದ್ದಾರೆ. ಹಿಂಸಾ ಮಯವಾದ ಯಜ್ಞಯಾಗಾದಿಗಳು ವೀರಶೈವರಲ್ಲಿ ನಿಷೇಧಿಸಲ್ಪಟ್ಟಿವೆ. ಅವು ವೇದೋಕ್ತವೆಂಬ ಕಾರಣಮಾತ್ರದಿಂದ ಲಿಂಗವಂತರು ಅವುಗಳನ್ನು ಆಚರಿಸು ವುದಿಲ್ಲ. ಆದರೆ ಸತ್ಕರ್ಮಗಳನ್ನು ಅಂದರೆ ಶಿವಾರ್ಚನಾದಿಗಳನ್ನು ಬಿಟ್ಟಿಲ್ಲ. ವೀರಶೈವರಲ್ಲಿ ಕ್ರಿಯೆ ಮತ್ತು ಜ್ಞಾನಗಳೆರಡಕ್ಕೂ ಪ್ರಾಮುಖ್ಯತೆಯಿದೆ. "ಕ್ರಿಯಾಜ್ಞಾನ ಸಮಾಯುಕ್ತಂ ವೀರಶೈವಸ್ಯ ಲಕ್ಷಣಂ" ಎಂದು ಪ್ರಮಾಣ ವಿದೆ. ಇದರಲ್ಲಿ ಕರ್ಮ (ಸತ್ಕರ್ಮ) ಜ್ಞಾನ (ಶಿವಜ್ಞಾನ) ಭಕ್ತಿ (ಶಿವಭಕ್ತಿ) ಇವು ಮೂರೂ ಸಮನ್ವಯವಾಗಿವೆ. ಆದುದರಿಂದಲೇ ವೀರಶೈವ ಮತವು 'ಸಮನ್ವಯ ಯೋಗ' ಎಂದು ವಚನ ಶಾಸ್ತ್ರ ರಹಸ್ಯದಲ್ಲಿ ಶ್ರೀ ದಿವಾಕರರು ಹೇಳಿದ್ದಾರೆ. ವೀರಶೈವದಲ್ಲಿ ಸ್ತ್ರೀ-ಪುರುಷರಿಬ್ಬರೂ ಮೋಕ್ಷಾಧಿಕಾರಿಗಳು. ಭಾರತದಲ್ಲಿ ಹಲವು ಪ್ರಖ್ಯಾತವಾದ ಮತಗಳು ಸ್ತ್ರೀಯರಿಗೆ ಮೋಕ್ಷಾಧಿ ಕಾರವನ್ನು ಒಪ್ಪುವುದಿಲ್ಲ. ವೀರಶೈವ ಮತವು ಸ್ತ್ರೀಯರ ಬಗ್ಗೆ ತೋರಿ ಸಿರುವ ಈ ಔದಾರ್ಯವು ಶ್ಲಾಘನೀಯವಾಗಿದೆಯಲ್ಲವೆ ?

ಪ್ರಾಚೀನ ಭಾರತದಲ್ಲಿ ಉಪನಿಷತ್ಕಾಲದಲ್ಲಿಯೂ, ಬುದ್ಧ ದೇವನ ಕಾಲದಲ್ಲಿಯೂ ಸ್ತ್ರೀಯರಿಗೆ ಧಾರ್ಮಿಕ ಸ್ವಾತಂತ್ರ್ಯವಿದ್ದಂತೆ ತಿಳಿದು ಬಂದಿದೆ. ವೀರಶೈವ ಮತವು ಗುಣಪ್ರಧಾನವಾದುದು. ಶಿವಾಗಮಗಳಲ್ಲಿ ಇದಕ್ಕೆ ಬೇಕಾದಷ್ಟು ಪ್ರಮಾಣಗಳಿವೆ. ಸಿದ್ಧಾಂತಶಿಖಾಮಣಿಯಲ್ಲಿಯೂ ಈ ಅರ್ಥದ ಶ್ಲೋಕಗಳಿವೆ.

ಶ್ಲೋ॥ ಶಿವಸಂಸ್ಕಾರಯುಕ್ತೇಷು ಜಾತಿಭೇದೋ ನ ವಿದ್ಯತೇ
ಕಾಷ್ಠೇಷು ವಹ್ನಿ ದಗ್ಧೇಷು ಯಥಾ ರೂಪಂ ನ ವಿದ್ಯತೇ ॥
ತಸ್ಮಾತ್ ಸರ್ವ ಪ್ರಯತ್ನೇನ ಶಿವಸಂಸ್ಕಾರ ಸಂಯುತಃ ।
ಜಾತಿಭೇದಂ ನ ಕುರ್ವೀತ ಶಿವಭಕ್ತೇಕದಾಚನ ॥

ಇದೇ ವಿಚಾರದಲ್ಲಿ ವಚನಕಾರರೂ ಹೃದಯಂಗಮವಾಗಿ ಹೇಳಿರುವರು.

"ನೀರು ಗಟ್ಟಿಗೊಂಡು ಮುತ್ತಪ್ಪುದಲ್ಲದೆ ಮುತ್ತು ನೀರಪ್ಪು ದೇನಯ್ಯಾ, ಹಾಲು ಹೆಪ್ಪುಗೊಂಡು ತುಪ್ಪವಾಗುವುದಲ್ಲದೆ ತುಪ್ಪ ಹಾಲಪ್ಪುದೇನಯ್ಯಾ? ಹೀನ ಜಾತಿಯಲ್ಲಿ ಜನಿಸಿದ ನರನು ಗುರು ಕಾರುಣ್ಯದಿಂದ ಶಿವಜಾತಾಭರಣನಾದ ಬಳಿಕ ಮರಳಿ ನರನಪ್ಪನೇನಯ್ಯಾ ಅಖಂಡೇಶ್ವರಾ ?"

(ಅಖಂಡೇಶ್ವರ ವಚನ)

ಇತ್ಯಾದಿ ಪ್ರಮಾಣಗಳಿಂದ ವೀರಶೈವ ತತ್ವಜ್ಞಾನವು ಧಾರ್ಮಿಕದಲ್ಲಿ ಸ್ತ್ರೀ ಪುರುಷ ಭೇದವನ್ನು ಒಪ್ಪುವುದಿಲ್ಲ. ಚಾತುರ್ವರ್ಣ್ಯಗಳ ಗಡಿಬಿಡಿ ಯನ್ನೂ, ಜಾತಿ ಗೀತಿಗಳ ಹೊಡೆದಾಟವನ್ನೂ ಅಂಗೀಕರಿಸುವುದಿಲ್ಲ. ವರ್ಣಾಶ್ರಮಗಳ ಪಕ್ಷಪಾತ, ಯಜ್ಞಯಾಗಗಳಲ್ಲಿ ಪ್ರಾಣಿ ಹಿಂಸೆಗಳನ್ನು ಕಂಡು ವಿಚಾರಪರರಾದವರ ಮನಸ್ಸಿನಲ್ಲಾದ ಧಾರ್ಮಿಕ ಕ್ರಾಂತಿಯ ಫಲವೇ ವೀರಶೈವವೆಂದು ತೋರುತ್ತದೆ.

ವೀರಶೈವ ಸಿದ್ಧಾಂತ ಮಾರ್ಗದಲ್ಲಿ ಮುಂದೆ ಹೇಳುವ ತತ್ವಗಳೇ ಮುಖ್ಯವಾದುವು.

೧. ಶಿವದೀಕ್ಷಾ (ಜೀವನನ್ನು ಶಿವನನ್ನಾಗಿ ಮಾಡುವ ಸಂಸ್ಕಾರ)
೨. ಅಷ್ಟಾವರಣ (ಎಂಟುಸುತ್ತಿನ ಕ್ರಿಯಾತ್ಮಕ ಕೋಟೆ)
೩. ಪಂಚಾಚಾರ (ನೀತಿಯ ಐದು ದಾರಿಗಳು)
೪. ಷಟ್ಸ್ಥಲ (ಆರು ಅರಿವಿನ ಮೆಟ್ಟಲುಗಳು)

ಒಂದು ಭಾವನಾಚಿತ್ರ—ಜಿಜ್ಞಾಸುವಾದ ಅಂಗವು (ಜೀವ) ಲಿಂಗವನ್ನು ಕೂಡಬೇಕಾದರೆ (ಬ್ರಹ್ಮೈಕ್ಯ) ಶಿವದೀಕ್ಷೆಯೆಂಬ ಪವಿತ್ರ ಸರೋವರದಲ್ಲಿ ಸ್ನಾನಮಾಡಿ, ಆಣವಮಲ, ಕಾರ್ಮಿಕಮಲ, ಮಾಯಾಮಲ ಎಂಬ ತ್ರಿಮಲಗಳನ್ನು ನೀಗಿ, ವೇಧಾ, ಕ್ರಿಯಾ, ಮನು ಎಂಬ ದೀಕ್ಷಾತ್ರಯದಿಂದ ಪವಿತ್ರನಾಗಿ; ಇಷ್ಟ, ಪ್ರಾಣ, ಭಾವಗಳೆಂಬ ಲಿಂಗತ್ರಯಗಳನ್ನು, ಸ್ಥೂಲ ಸೂಕ್ಷ್ಮ ಕಾರಣ ಶರೀರತ್ರಯಗಳಲ್ಲಿ ಧರಿಸಿಕೊಂಡು; ಶ್ರೀ ಗುರುವಿನ ಆಶೀರ್ವಾದ ಎಂಬ ಯೋಗ್ಯತಾಪತ್ರ ಸಹಿತವಾಗಿ (Certificate) ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ಭಸ್ಮ, ರುದ್ರಾಕ್ಷ, ಮಂತ್ರ ಎಂಬ ಅಷ್ಟಾವರಣ ನಾಮಕ ಕೋಟೆಯಲ್ಲಿ ಅನುಭವಿಗಳ ಮತವಿಡಿದು ಹೊಕ್ಕು; ಲಿಂಗಾಚಾರ, ಸದಾಚಾರ, ಭೃತ್ಯಾಚಾರ, ಶಿವಾಚಾರ, ಗಣಾಚಾರ ಎಂಬ ಪಂಚಾಚಾರಾತ್ಮಕ ರಾಜಮಾರ್ಗಗಳಲ್ಲಿ ನಡೆದು; ಭಕ್ತ, ಮಾಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂಬ ಆರು ಸೋಪಾನಗಳನ್ನು ಹತ್ತಿ; ಲಿಂಗಾಂಗ ಸಾಮರಸ್ಯ ಎಂಬ ದ್ವಾರವನ್ನು ಹೊಕ್ಕು ಮೋಕ್ಷನಾಮಕ ಸ್ಥಾನವನ್ನು ಸೇರಿ ಶಾಂತಿ ಸುಖದಲ್ಲಿರಬೇಕು ಎಂಬುದು ವೀರಶೈವದ ಹಿರಿಯ ಗುರಿಯು.

ವೀರಶೈವ ಶಾಸ್ತ್ರದಲ್ಲಿ ಶಿವದೀಕ್ಷೆಯು ಸಂಸ್ಕಾರ ಪ್ರಧಾನ, ಅಷ್ಟಾವರಣವು ಕ್ರಿಯಾಪ್ರಧಾನ, ಪಂಚಾಚಾರವು ನೀತಿಪ್ರಧಾನ, ಷಟ್ಸ್ಥಲವು ಜ್ಞಾನಪ್ರಧಾನ, ಸಾಮರಸ್ಯವು ವೈರಾಗ್ಯಪ್ರಧಾನ–ಇಂತು ವೀರಶೈವವು ಕರ್ಮ, ಜ್ಞಾನ, ಭಕ್ತಿಗಳ ತ್ರಿವೇಣೀಸಂಗಮವಾಗಿ; 'ನ ವೀರಶೈವ ಸದೃಶಂ ಮತಮಸ್ತಿ ಜಗತ್ರಯೇ' ಎಂಬ ಆಗಮವಾಕ್ಯವನ್ನು ಸಾರ್ಥಕ ಮಾಡುವಂತಿದೆ.

## ಆಚಾರ ವಿಚಾರ ಇತ್ಯಾದಿ

ಲಿಂಗವಂತ ಸಮಾಜದ ಆಚಾರ, ವಿಚಾರ, ವೇಷ, ಭಾಷೆ, ಊಟ ಉಪಚಾರ ಇತ್ಯಾದಿಗಳನ್ನು ಪರಾಂಬರಿಸಿದರೆ ಇದರ ಸಂಸ್ಕೃತಿಯು ತಾನಾಗಿಯೇ ತಿಳಿಯುತ್ತದೆ. ವೀರಶೈವ ಸಮಾಜವು ಹಿಂದೂ ಜನಾಂಗದ ಒಂದು ಅಂಗವೆಂದು ತಿಳಿದೇ ನಾವೀ ವಿಚಾರವನ್ನು ಮುಂದುವರಿಸಬೇಕಾಗುತ್ತದೆ; ಇಲ್ಲವಾದರೆ ನಾವು ಮೋಸ ಹೋಗುತ್ತೇವೆ. ಕೆಲವರು ಲಿಂಗವಂತರು ಹಿಂದುಗಳೇ ಅಲ್ಲವೆಂದು ಹೇಳುವಷ್ಟು ದೂರ ಮುಂದೆ ಹೋಗಿರುವುದು ಸಾಧುವಲ್ಲ. A ಅವರ ವಾದ ನಿಲ್ಲತಕ್ಕುದಲ್ಲ.

ಇಂದಿನ ಹಿಂದೂ ಸಮಾಜವು ಆರ್ಯ, ದ್ರಾವಿಡ, ಆದಿದ್ರಾವಿಡ ಜನಾಂಗಗಳ ಸಮ್ಮಿಶ್ರಣವೆಂದು ಇತಿಹಾಸ ಪಂಡಿತರು ಹೇಳಿದ್ದಾರೆ. ಈಗಿನ ಹಿಂದುಗಳಲ್ಲಿ ಇವರು ಆರ್ಯರು, ಇವರು ದ್ರಾವಿಡರು ಎಂದು ವಿಭಾಗಿಸುವುದು ಸಾಧ್ಯವಿಲ್ಲವಾಗಿದೆ. ಅಂತೂ ಈಗಿನ ಹಿಂದೂ ಸಭ್ಯತೆಯು ಆರ್ಯ ಮತ್ತು ದ್ರಾವಿಡ ಸಂಸ್ಕೃತಿ ಸಮ್ಮಿಶ್ರಣವಾಗಿದೆ. ಅಷ್ಟೇ ಅಲ್ಲದೆ ಆದಿದ್ರಾವಿಡರೂ ಇಂದಿನ ಹಿಂದುಗಳಲ್ಲಿಯೇ ಬೆರೆತು ಹೋಗಿದ್ದಾರೆ.

ಲಿಂಗವಂತರು ಇದಕ್ಕೆ ಅಪವಾದವಲ್ಲ. ಇವರಲ್ಲಿ ಆರ್ಯರ ತತ್ವಜ್ಞಾನ, ಏಕೇಶ್ವರ ವಾದಗಳಿವೆ; ಶಿವಪಂಚಾಕ್ಷರಿಯು ವೇದಸಾರವೆನಿಸಿದೆ. ದ್ರಾವಿಡರ ಮೂರ್ತಿಪೂಜೆ, ಭಕ್ತಿಮಾರ್ಗ, ಸಮತಾ ಭಾವಗಳಿವೆ; ಇಷ್ಟೇ ಅಲ್ಲದೆ ಜೈನರ ಅಹಿಂಸಾ ಧರ್ಮವೂ, ಬೌದ್ಧರ ಸಮತಾ ವಾದವೂ, ಭಾಗವತರ ಭಕ್ತಿ ಪಂಥವೂ ಈ ಸಮಾಜದಲ್ಲಿ ಸೇರಿ ಕೊಂಡಿವೆ; ಲಿಂಗವಂತರು ವೇದದ ಜ್ಞಾನ ಕಾಂಡವನ್ನೂ, ದಶಸಂಸ್ಕಾರಗಳನ್ನೂ ಅಂಗೀಕರಿಸಿದ್ದಾರೆ. ಆದರೆ ಅವರ ಯಜ್ಞ ಯಾಗಾದಿಕರ್ಮಗಳನ್ನೂ, ವರ್ಣಾಶ್ರಮಗಳನ್ನೂ ತಿರಸ್ಕರಿಸಿದ್ದಾರೆ. ದ್ರಾವಿಡರ

---

A. ಆ ಸಿಂಧು ಸಿಂಧು ಪರ್ಯಂತಂ ಯಸ್ಯ ಭಾರತ ಭೂಮಿಕಾ ।
ಪಿತೃ ಭೂಃ ಪುಣ್ಯ ಭೂ ಶ್ಚೈವ ಸ ವೈ ಹಿಂದುರಿತಿ ಸ್ಮೃತಃ॥
ಎಂಬ ಶ್ಲೋಕಾಭಿಪ್ರಾಯವು ಇಂದು ಹಿಂದುಗಳೆಲ್ಲರಿಗೂ ಒಪ್ಪಿಗೆಯಾಗಿದೆ.

ಭಕ್ತಿ ಮಾರ್ಗವನ್ನೂ, ಮೂರ್ತಿಪೂಜೆಯನ್ನೂ ಒಪ್ಪಿದ್ದಾರೆ. ಆದರೆ ಇವರು ಬಹುದೇವತೋಪಾಸನೆ ಕ್ಷುದ್ರದೇವತೋಪಾಸನೆಗಳನ್ನು ತಿರಸ್ಕರಿಸಿದ್ದಾರೆ. ಆದುದರಿಂದ ವೀರಶೈವ ಮತವನ್ನು ಆರ್ಯ ದ್ರಾವಿಡ ಸಂಸ್ಕೃತಿಯ ಸಮ್ಮಿಶ್ರಣಫಲವೆಂದು ನಾವು ತಿಳಿಯ ಬಹುದಾಗಿದೆ.

ವೀರಶೈವರು ವೇದ ವಾಙ್ಮಯವನ್ನೂ, ಶರಣರ ವಚನವಾಙ್ಮಯವನ್ನೂ ಸಮಾನವಾಗಿ ಪ್ರೀತಿಸುತ್ತಾರೆ. ಕನ್ನಡದಂತೆಯೇ ಸಂಸ್ಕೃತವನ್ನೂ ಪ್ರೀತಿಸುತ್ತಾರೆ. ಇದರಿಂದಲೇ ಇವರು ಉಭಯ ಸಾಧಾರಣರಾಗಿರುತ್ತಾರೆ.

ವೀರಶೈವರು ಕೇವಲ ಸಸ್ಯಾಹಾರಿಗಳೆಂಬುದು ಪ್ರಸಿದ್ಧವಾಗಿಯೇ ಇದೆ. ಭರತವರ್ಷದಲ್ಲಿ ಹಲವು ಪ್ರಾಂತದಲ್ಲಿ ಉತ್ತಮ ವರ್ಣದವರೆನಿಸಿಕೊಳ್ಳುವ ಕೆಲವರಲ್ಲಿಯೂ ಮತ್ಸ್ಯಮಾಂಸಭಕ್ಷಣವಿದೆಯಂತೆ! ಆದರೆ ಆಸೇತು ಹಿಮಾಲಯ ಪರ್ಯಂತವಾಗಿ–ಲಂಕಾದ್ವೀಪದಲ್ಲಿ ಕೂಡ ಎಲ್ಲಿ ನೋಡಿದರೂ ಲಿಂಗವಂತರು ಪರಿಶುದ್ಧ ಸಸ್ಯಾಹಾರವುಳ್ಳವರಾಗಿದ್ದಾರೆ. ಯಜ್ಞಯಾಗಗಳ ನೆವದಿಂದಲಾದರೂ ಹಿಂಸೆಯಾಗಬಾರದೆಂದು ಲಿಂಗವಂತರು ತಿಳಿಯುತ್ತಾರೆ. ಅಹಿಂಸಾ ಧರ್ಮಪಾಲನೆಯಲ್ಲಿ ವೀರಶೈವರು ಜೈನರಿಗೆ ಸಮಾನವಾಗಿದ್ದಾರೆ. ಬೌದ್ಧರಿಗಿಂತ ನೂರು ಪಾಲು ಉತ್ತಮರಾಗಿದ್ದಾರೆ. ಇದು 'ಅಹಿಂಸಾ ಪರಮೋ ಧರ್ಮಃ ಯತೋ ಧರ್ಮ ಸ್ತತೋ ಜಯಃ' ಎಂಬ ಮಹಾಭಾರತದ ವಾಕ್ಯಕ್ಕೆ ಪೋಷಕವಾಗಿದೆಯಲ್ಲವೇ? ಕೊಲ್ಲದಿರ್ಪಾಧರ್ಮವೆಲ್ಲರಿಗೆ ಸಮ್ಮತವು.

ವೀರಶೈವರು ಪೂರ್ವಜನ್ಮವನ್ನು ನಂಬಿದರೂ, ಪುನರ್ಜನ್ಮವನ್ನು ನಂಬುವುದಿಲ್ಲ. ಏಕೆಂದರೆ ಲಿಂಗಭೋಗೋಪಭೋಗಿಗಳಾದ ಲಿಂಗವಂತರು ಸಮಸ್ತ ಕರ್ಮಗಳನ್ನೂ ಲಿಂಗಾರ್ಪಿತ ಭಾವದಿಂದ ಮಾಡುವುದರಿಂದ ಆಗಾಮಿ, ಸಂಚಿತ, ಪ್ರಾರಬ್ಧ ಕರ್ಮಗಳು ಇವರನ್ನು ಬಾಧಿಸುವುದಿಲ್ಲ. ಆದುದರಿಂದ ಲಿಂಗಧಾರಿಯು ಚರಮ ಶರೀರಿ, ಅತಿವರ್ಣಾಶ್ರಮಿ, ಪುನರ್ಜನ್ಮರಹಿತ, ಅಪ್ರಾಕೃತ ಶರೀರಿ ಆಗಿದ್ದಾನೆ. "ಏಕೇನ ಜನ್ಮನಾ ಮುಕ್ತಿರ್ವೀರಾಣಾಂ ತು ಮಹೇಶ್ವರಿ" ಎಂಬ ಆಗಮ ವಾಕ್ಯವೂ ಈ ಅರ್ಥವನ್ನೇ ಬೋಧಿಸುತ್ತದೆ.

ಈ ಮಾತು ತತ್ವದಂತೆ ನಡೆವ ಲಿಂಗವಂತರಿಗೆ ಮಾತ್ರ ಅನ್ವಯಿಸುತ್ತದೆ; ನಾಮ ಮಾತ್ರದ ಲಿಂಗಧಾರಿಯೆನಿಸಿದವರೆಲ್ಲರಿಗೂ ಅಲ್ಲ.

ಲಿಂಗಾಂಗಿಗಳು ಅದುಕಾರಣವೇ ಶ್ರಾದ್ಧ ಕರ್ಮವನ್ನು ಮಾಡುವುದಿಲ್ಲ. ಸ್ವರ್ಗದಲ್ಲಿ ಪಿತೃಗಳೇ ಇಲ್ಲದಿರುವಾಗ ಶ್ರಾದ್ಧಾದಿಗಳಾರಿಗೆ ? ತರ್ಪಣಾದಿಗಳಾರಿಗೆ? ಸ್ವರ್ಗ ಫಲಪ್ರದವಾದ ಯಜ್ಞ ಯಾಗಾದಿಗಳನ್ನಾದರೂ ಇದಕ್ಕಾಗಿಯೇ ಲಿಂಗವಂತರು ಬೇಡವೆನ್ನುತ್ತಾರೆ. ಅವರು ಕೇವಲ ಪುನರ್ಜನ್ಮ ರಹಿತವೂ ಆನಂದದಾಯಕವೂ ಆದ ಮೋಕ್ಷವನ್ನು ಮಾತ್ರ ಬಯಸತಕ್ಕವರು.

ಪ್ರಪಂಚದಲ್ಲಿ ಯಾವ ಮತೀಯನು ಸತ್ತರೂ ಆ ಜನರು ಶೋಕಿಸುತ್ತಾರೆ; ಲಿಂಗಾಂಗಿಯು ಸತ್ತರೆ ಅವನ ದೇಹವನ್ನು ಕೈವಲ್ಯ (ಚಟ್ಟ)ದಲ್ಲಿಟ್ಟು ಮಂಗಳವಾದ್ಯಗಳೊಂದಿಗೆ ಮೆರೆಸುತ್ತಾರೆ ; ಆ ಶವವನ್ನು ಪೂಜಿಸುತ್ತಾರೆ. ಇದು ಇತರರಿಗೆ ವಿಚಿತ್ರವಾದರೂ ಅಪ್ರಾಕೃತರೆನಿಸಿದ ವೀರಶೈವರಿಗೆ ಸಹಜವಾಗಿದೆ. ಇದಕ್ಕೆ ಲಿಂಗವಂತನ ಶರೀರವು ದೇವಾಲಯದಂತೆ ಪವಿತ್ರವೆಂದು ತಿಳಿಯುವುದೂ, ಸತ್ತವನು ಶಿವೈಕ್ಯ (ಮೋಕ್ಷ) ನಾದನೆಂದು ಭಾವಿಸುವುದೂ ಕಾರಣವಾಗಿದೆ. ವೀರಶೈವರು ವೈದಿಕ ದ್ವಿಜರಂತೆ ವ್ರತ, ನಿಯಮ, ಉಪವಾಸಾದಿಗಳನ್ನೂ, ಸ್ಥಾವರಲಿಂಗ ಪೂಜಾದಿಗಳನ್ನೂ, ವಿಗ್ರಹ ಪೂಜಾದಿಗಳನ್ನೂ ಮಾಡದೆ ವರ್ಜಿಸಿದ್ದಾರೆ. ಲಿಂಗವಂತರು ಅನ್ನವನ್ನು ಪ್ರಸಾದರೂಪವಾಗಿಯೂ ನೀರನ್ನು ತೀರ್ಥರೂಪವಾಗಿಯೂ ಸ್ವೀಕರಿಸುತ್ತಾರೆ. ಇದು ಇಷ್ಟಲಿಂಗಧಾರಿಗಳಾದ ಅವರ ಸಂಸ್ಕೃತಿಗೆ ಅನುಗುಣವಾಗಿದೆ.

ಶೈವ ಧರ್ಮವು ಅತಿ ಪ್ರಾಚೀನವಾದುದು. ಆಗಮಗಳ ಸಪ್ತ ಶೈವಗಳಲ್ಲಿ ವೀರಶೈವವು ಶ್ರೇಷ್ಠವೆಂದು ಶಿವಾಗಮಗಳು ಹೇಳುತ್ತವೆ. ಲಿಂಗವಂತರು ಆಸ್ತಿಕಮತೀಯರಾಗಿ ದೇವರನ್ನು ನಂಬುತ್ತಾರೆ. ದೇವರನ್ನು ನಿರಾಕಾರವಾಗಿಯೂ ಸಾಕಾರವಾಗಿಯೂ ಪೂಜಿಸುತ್ತಾರೆ. ಲಿಂಗಧಾರಣವು ವೀರಶೈವರ ಹೆಗ್ಗುರುತಾಗಿದೆ. ಲಿಂಗಪೂಜಾ ರಹಸ್ಯವು ಶ್ಲಾಘನೀಯವಾಗಿದೆ. ದೇವರನ್ನು ಹೀಗೆ ಗಂಟು ಹಾಕಿಕೊಂಡು ತಿರುಗುವವರು ಹಿಂದುಗಳಲ್ಲೇಕೆ ಲೋಕದ

ಮಾನವರಲ್ಲೇ ಸಿಗಲಾರರು. ವೇಷದಲ್ಲಿಯೂ ಲಿಂಗವಂತರು ಸರಳವಾಗಿಯೂ, ಆಡಂಬರ ರಹಿತವಾಗಿಯೂ ಇದ್ದಾರೆ. ಹೀಗೆ ವೀರಶೈವರ ಆಚಾರ ವಿಚಾರಗಳು ನಿರ್ಮಲವಾಗಿವೆ. ಲಿಂಗವಂತರು ಕಳವು, ಕೊಲೆ, ದ್ಯೂತ,ವ್ಯಭಿಚಾರ, ಅಪೇಯಪಾನ,ಅಭಕ್ಷ್ಯಭಕ್ಷಣ ಮೊದಲಾದ ದುರಾಚಾರಗಳನ್ನು ತೀಕ್ಷ್ಣವಾಗಿ ನಿಷೇಧಿಸುತ್ತಾರೆ. ಈ ಬಗೆಯಲ್ಲಿ ವೀರಶೈವರ ಆಚಾರ ವಿಚಾರಗಳು ಉದಾತ್ತವೂ, ಪವಿತ್ರವೂ ಆಗಿದ್ದು ; ತನ್ನ ಸಂಸ್ಕೃತಿಯ ಹಿರಿಯತನಕ್ಕೆ ಸಾಕ್ಷಿಯಾಗಿವೆ.

## ಸಮಾಜ ರಚನೆ

ವೀರಶೈವ ಸಮಾಜದಲ್ಲಿ ವರ್ಣಾಶ್ರಮಗಳಾಗಲಿ, ಜಾತಿಭೇದವಾಗಲಿ ಇಲ್ಲ. ಇದರಲ್ಲಿ ಭಕ್ತ,ಮಾಹೇಶ ಎಂಬ ಎರಡು ಕುಲಭೇದಗಳು ಮಾತ್ರ ಬಹು ದಿವಸಗಳಿಂದ ನಡೆದುಬಂದಿವೆ. ಇವನ್ನು ವಿಪ್ರರ ವೈದಿಕ, ಲೌಕಿಕ ವರ್ಗಗಳಿಗೆ ನಾವು ಹೋಲಿಸಬಹುದು. ಧರ್ಮಪ್ರಚಾರಕ್ಕಾಗಿ ಮಠಗಳೂ ಮಾನ್ಯಗಳೂ ಇವೆ. ಸಮಾಜದ ಲೌಕಿಕ ಕಾರ್ಯನಿರ್ವಾಹಕ್ಕೆ ಶೆಟ್ಟರು, ಯಜಮಾನರು, ಮೊದಲಾದ ಸಮಾಜ ಪ್ರಮುಖರು ನಿಯೋಜಿತರಾಗಿದ್ದಾರೆ. ಲಿಂಗಧಾರಣ, ಶಿವದೀಕ್ಷಾ, ಧರ್ಮಬೋಧಾದಿಗಳಿಗೆ ಮಠಾಧಿಕಾರಿಗಳಿದ್ದಾರೆ. ಬ್ರಹ್ಮಚಾರಿಗಳಾದ ಮಠಾಧಿಕಾರಿಗಳಲ್ಲಿ ಗುರುವರ್ಗ, ವಿರಕ್ತವರ್ಗ, ಶರಣವರ್ಗ, ಎಂಬ ಭೇದವಿದೆ. ಒಬ್ಬರು ಕ್ರಿಯಾಪ್ರಧಾನರಾಗಿಯೂ, ಒಬ್ಬರು ಜ್ಞಾನಪ್ರಧಾನರಾಗಿಯೂ, ಮಿಕ್ಕವರು ಭಕ್ತಿಪ್ರಧಾನರಾಗಿಯೂ ಇದ್ದಾರೆ. ಒಟ್ಟಿನಲ್ಲಿ ಈ ಮಠಗಳು ವೀರಶೈವ ಧರ್ಮರಕ್ಷಣ-ಪ್ರಚಾರಾರ್ಥವಾಗಿಯೇ ಆದುವು. ಈ ಪ್ರಾಚೀನ ಸಮಾಜ ಮಂದಿರವು ಸುಂದರವಾಗಿದೆ. ಈಗ ಕೆಲವರು ಇದನ್ನು ಬುಡಮೇಲುಮಾಡಲು ಹೆಣಗಾಡುತ್ತಿದ್ದಾರೆ. ಅಂಥವರು ಸಮಾಜಸ್ಥಾಪಕರ ಸದುದ್ದೇಶವನ್ನು ಅರಿಯುವುದು ಅಗತ್ಯವಾಗಿದೆ.

ಈಗಿನ ವೀರಶೈವರೆಲ್ಲರೂ ಒಂದೇ ಕಾಲದಲ್ಲಿ, ಒಂದು ವ್ಯಕ್ತಿಯಿಂದಲೇ ಲಿಂಗಧಾರಿಗಳಾದವರಲ್ಲ. ಸಾವಿರಾರು ವರ್ಷಗಳಿಂದ ಈ ಮತ ಬೆಳೆಯುತ್ತಿದೆ.

ಆದರೆ ಬಸವೇಶ್ವರರ ಕಾಲದಲ್ಲಿ ಈ ಸಮಾಜಕ್ಕೆ ಕಳೆಯೇರಿದಂತೆ ತೋರುತ್ತದೆ. ಬಸವೇಶನನ್ನು ವೀರಶೈವ ಸಮಾಜೋದ್ಧಾರಕನೆನ್ನುವುದು ಹೆಚ್ಚು ಸಮಂಜಸವಾಗಿದೆ. ಬಸವನ ಕ್ರಾಂತಿಯು ಹೆಚ್ಚು ಸಾಮಾಜಿಕವಾದುದೆಂದು ಕೆಲವರು ತರ್ಕಿಸುತ್ತಾರೆ. ಈಗಿನ ವೀರಶೈವ ಸಮಾಜಕ್ಕೆ ಎಲ್ಲ ವರ್ಣಜಾತಿ ಪಂಥದವರೂ ಸೇರಿದ್ದಾರೆ. ವೀರಶೈವ ಸಿದ್ಧಾಂತವು ವರ್ಣಾಶ್ರಮಕ್ಕೆ ವಿರೋಧವಾದುದು; ವರ್ಣಬಂಧನದಿಂದ ಜನರನ್ನು ಬಿಡಿಸುವುದೇ ಇದರ ಉದ್ದೇಶ. ಆದಕ್ಕಾಗಿಯೇ ಬಸವಣ್ಣನು "ವರ್ಣಾನಾಂ ಕಿಂ ಪ್ರಯೋಜನಂ" ಎಂಬ ಪ್ರಾಚೀನವಾದ ಆಗಮ ಸಿದ್ಧಾಂತವನ್ನು ೧೨ನೇ ಶತಮಾನದಲ್ಲಿ ಮತ್ತೆ ಮತ್ತೆ ಉದ್ಘೋಷಿಸಬೇಕಾಯಿತು. ಬಸವನ ಅನಂತರ ಕಾಕತೀಯರ ಕಾಲ, ವಿಜಯನಗರದ ಕಾಲ, ಕೆಳದಿರಾಜರ ಕಾಲದಲ್ಲಿ ಈ ಸಮಾಜ ತಲೆ ಎತ್ತಲು ಅವಕಾಶವಿದ್ದಿತು.

ವೀರಶೈವ ತತ್ವಜ್ಞಾನ, ಸಾಹಿತ್ಯ, ಲಲಿತಕಲೆ, ಚರಿತ್ರೆ, ಸಂಪ್ರದಾಯ, ಆಚಾರ, ವ್ಯವಹಾರ, ಸಮಾಜರಚನೆ ಇತ್ಯಾದಿ ಯಾವರೀತಿಯಿಂದ ನೋಡಿದರೂ ಲಿಂಗವಂತ ಸಂಸ್ಕೃತಿಯು ಉದಾತ್ತವಾಗಿದೆ. ಇಂದಿನ ಸಮಾಜದ ಬಹುಭಾಗವು ಸ್ವಸ್ವರೂಪಜ್ಞಾನವಿಲ್ಲದ ಜೀವನಂತೆ 'ನಾಹಂ ಕೋಹಂ' ಭ್ರಾಂತಿಗೆ ಈಡಾಗಿ, 'ಸೋಹಂ' ತತ್ವಕ್ಕೆ ದೂರವಾಗಿದೆ. ಚೆನ್ನಾಗಿ ವಿಚಾರ ಮಾಡಿದರೆ ಹಿಂದೂ ಸಂಸ್ಕೃತಿಯ ಸಾರಸರ್ವಸ್ವವೇ ಲಿಂಗವಂತ ಸಂಸ್ಕೃತಿಯಾಗಿದೆ. ಇದು ಇಹದಲ್ಲಿ ಏಳಿಗೆಯನ್ನೂ ಪರದಲ್ಲಿ ಶಾಂತಿಯನ್ನೂ ಕೊಡಲು ಸಮರ್ಥವಾಗಿದೆ.

ಕೂಡುಂಡು ಕುಲವನರಸುವರೆ? ಎಂಬ ಪೂಜ್ಯ ಬಸವೇಶ್ವರನ ಬೋಧೆಯು ಈ ಪ್ರಸಂಗದಲ್ಲಿ ಗಮನಾರ್ಹವಾಗಿದೆ. ಅಲ್ಲದೆ ಪ್ರಗತಿದಾಯಕವೂ ಪ್ರಕೃತೋಚಿತವೂ ಆಗಿದೆ.



# ವೀರಶೈವ ತತ್ವಜ್ಞಾನ

ಮಾನವನ ಜೀವನವನ್ನು ಐಹಿಕ, ಆಮುಷ್ಮಿಕ ಎಂದು ಎರಡುಭಾಗ ಮಾಡಬಹುದು. ಐಹಿಕ ಜೀವನವು ಅರ್ಥ ಮತ್ತು ಕಾಮುಗಳ ಸಂಗ್ರಹಕ್ಕೆ ಪ್ರಧಾನವಾದುದು; ಪಾರಮಾರ್ಥಿಕ ಜೀವನವು ಧರ್ಮ ಮತ್ತು ಮೋಕ್ಷಗಳ ಪ್ರಾಪ್ತಿಗೆ ಕಾರಣವಾದುದು. ಭಾರತೀಯರು ಪಾರಮಾರ್ಥಿಕ ಜೀವನ ಪ್ರಧಾನರು. ಪಾಶ್ಚಾತ್ಯರು ಐಹಿಕ ಜೀವನ ಪ್ರಧಾನರು. ಐಹಿಕ ಜೀವನದ ಸುಖ ಸೌಕರ್ಯಕ್ಕಾಗಿ ಮಾನವನಂತೆಯೇ ಇತರ ಪ್ರಾಣಿಗಳೂ ಪ್ರಯತ್ನಿಸುವುದನ್ನು ನಾವು ಲೋಕದಲ್ಲಿ ಪ್ರತಿದಿನವೂ ನೋಡುತ್ತಿದ್ದೇವೆ. ಆದರೆ ಮನುಷ್ಯೇತರ ಪ್ರಾಣಿಗಳು ಪಾರಮಾರ್ಥಿಕಜೀವನಕ್ಕೆ ಪ್ರಯತ್ನಿಸುವುದಾಗಲಿ, ಅಂತಹ ಸನ್ನಿವೇಶಗಳಿಂದ ಕೂಡಿರುವುದಾಗಲಿ ನಮಗೆ ದೃಗ್ಗೋಚರವಾಗಿಲ್ಲ. ಆದುದರಿಂದ ಮಾನವ ಪ್ರಾಣಿಯು ಮಾತ್ರ ಪಾರಮಾರ್ಥಿಕ ಜೀವನ ಸಂಪತ್ತಿನಿಂದ ಕೂಡಿರಲು ಸಾಧ್ಯವೆಂಬುದನ್ನು ನಾವು ತರ್ಕಿಸಬಹುದು.

ತತ್ವಜ್ಞಾನದ ಚರಿತ್ರೆಯನ್ನು ನೋಡಿದರೆ ಅದಕ್ಕೆ ಭಾರತವೇ ಬುನಾದಿಯೆಂದು ತೋರುತ್ತದೆ. ಆರ್ಯಾವರ್ತದ ಪ್ರಾಚೀನ ವಾಙ್ಮಯವೆನಿಸಿದ ವೈದಿಕ ಸಾಹಿತ್ಯವು ಜಗತ್ತಿನ ಎಲ್ಲ ಸಾಹಿತ್ಯರಾಶಿಯ ಮುತ್ತಜ್ಜನೆನಿಸಿದೆ. ಕನ್ನಡದಲ್ಲಿ ವೇದಗಳನ್ನು "ಪಳೆವಾತು" ಎಂದು ಕರೆವುದರಲ್ಲಿ ಅರ್ಥವಿದೆ. ಭಾರತೀಯರು ಪರದೇಶೀಯರ, ಪರಧರ್ಮೀಯರ ಪದಾಘಾತಗಳಿಗೆ ಅಡಿಗಡಿಗೆ ಈಡಾದರೂ, ಭಾರತವು ಭಯಂಕರವಾದ ದಾರಿದ್ರ್ಯದಿಂದ ತೊಳಲಿ ಬಳಲುತ್ತಿದ್ದರೂ ಇಂದಿಗೂ ಈ ದೇಶವು ತತ್ವಜ್ಞಾನದ ನೆಲೆವೀಡೆನಿಸಿದೆ. ತತ್ವಜಿಜ್ಞಾಸುವಿಗೆ ತಕ್ಕಂತಹ ಪ್ರಾಕೃತಿಕ ಸನ್ನಿವೇಶಗಳೂ, ಚಾರಿತ್ರಿಕ ಪರಂಪರೆಯೂ ಈ ದೇಶದಲ್ಲುಂಟು. ಇದು ಕೇವಲ ಈಶ್ವರೇಚ್ಛೆಯೆಂದು ತೋರುತ್ತದೆ ಎನ್ನಬಹುದು.

ಭರತವರ್ಷದಲ್ಲಿ ತತ್ವಶಾಸ್ತ್ರದ ಬಗ್ಗೆ ನಡೆದಷ್ಟು ಸಂಶೋಧನೆಗಳೂ, ವಾದ ವಿವಾದಗಳೂ ಖಂಡನ ಮಂಡನಗಳೂ ಸಿದ್ಧಾಂತ ರಾದ್ಧಾಂತಗಳೂ ಪ್ರಪಂಚದ ಮತ್ತಾವ ಭಾಗದಲ್ಲಿಯೂ ನಡೆದಂತೆ ತೋರುವುದಿಲ್ಲ. ಭಾರತದ ಮುಖ್ಯ ಧರ್ಮವೆನಿಸಿದ ಸನಾತನ ಧರ್ಮದಲ್ಲಿ ಪರಸ್ಪರ ವಿರೋಧವೆಂಬಂತೆ ತೋರುವ ಮತಮತಾಂತರಗಳು ಈ ಒಂದೇ ಸಂಸ್ಕೃತಿಯಲ್ಲಿ ಸಮನ್ವಯ ಗೊಂಡಿರುವುದು ಇದರ ಹಿರಿಯತನಕ್ಕೂ, ಉದಾರತನಕ್ಕೂ ಸಾಕ್ಷಿಯೆನಿಸಿದೆ. ದ್ವೈತ–ಅದ್ವೈತ, ವಿಶಿಷ್ಟಾದ್ವೈತ–ಶಕ್ತಿವಿಶಿಷ್ಟಾದ್ವೈತ ಮೊದಲಾದ ಸಿದ್ಧಾಂತಗಳೂ, ಸಾಂಖ್ಯ, ಯೋಗ, ನ್ಯಾಯ ಮೊದಲಾದ ದರ್ಶನಗಳೂ, ಜೈನ, ಬೌದ್ಧ, ಚಾರ್ವಾಕ ಮುಂತಾದ ಮತಗಳೂ ಸನಾತನ ಧರ್ಮ ವೃಕ್ಷದ ಶಾಖೋಪಶಾಖೆಗಳೆನಿಸಿವೆ.

ಭರತಖಂಡದ ಪ್ರತಿಯೊಂದು ಮತದಲ್ಲಿಯೂ ಎರಡು ಭಾಗವಿರುತ್ತದೆ.

೧. ತತ್ವಜ್ಞಾನ. ೨. ಸಾಧನಾಮಾರ್ಗ.

ಇವೆರಡೂ ವಿಚಾರ ಮತ್ತು ಆಚಾರಕ್ಕೆಯೋಗ್ಯವೆನಿಸಿವೆ. ತತ್ವಜ್ಞಾನವು ಮತವನ್ನು ಕುರಿತು ವಿಚಾರ ಮಾಡುತ್ತದೆ. ಸಾಧನಾ ಮಾರ್ಗಗಳು ತತ್ವ ಜಿಜ್ಞಾಸುವಿನ ಆಚರಣೆಗೆ ಸಹಾಯವೆನಿಸುತ್ತವೆ. ಈ ಆಚಾರ ವಿಚಾರಗಳು ಒಂದುಗೂಡಿದರೆ ಮತದ ಉದ್ದೇಶವು ಪರಿಪೂರ್ಣವಾಗುತ್ತದೆ. ಆದ್ದರಿಂದ, ಅನುಯಾಯಿಯು ಕೃತಾರ್ಥನಾಗುತ್ತಾನೆ. ಭಾರತೀಯರ ಇತರ ದರ್ಶನ ಗಳಂತೆಯೇ ವೀರಶೈವ ದರ್ಶನದಲ್ಲಿಯೂ ತತ್ವ ಸಂಪತ್ತು ಮತ್ತು ಸಾಧನ ಸಂಪತ್ತು ಎಂಬ ಎರಡು ಭಾಗಗಳಿವೆ. ದೇವ, ಜೀವ, ಜಗತ್ತು ಎಂಬ ಈ ಮೂರು ವಿಷಯುಗಳೂ ತತ್ವದರ್ಶಿಗಳಿಂದ ಬಗೆಬಗೆಯಾಗಿ ವಿವೇಚಿಸಲ್ಪಟ್ಟವೆ. ವೀರಶೈವ ಮತಪ್ರವರ್ತಕರು ಈ ವಿಷಯುಗಳ ಬಗ್ಗೆ ಅತ್ಯಂತ ಸೂಕ್ಷ್ಮವಾಗಿ ಚರ್ಚಿಸಿದ್ದಾರೆ. ಈ ಚರ್ಚೆಯು ಭಾರತೀಯ ದರ್ಶನ ಶಾಸ್ತ್ರದಲ್ಲಿ ಒಂದು ಪ್ರಚಂಡವಾದ ಕ್ರಾಂತಿಯನ್ನು ಉಂಟುಮಾಡಿದಂತೆ ತೋರುತ್ತದೆ. ಈ ತತ್ವ ಜ್ಞಾನವನ್ನು ವೀರಶೈವ ಮಾರ್ಗಾನುಯಾಯಿಯು ಅನುಷ್ಠಾನಕ್ಕೆ ತರಲು ಅಷ್ಟಾವರಣ, ಪಂಚಾಚಾರ, ಷಟ್ಸ್ಥಲ, ಲಿಂಗಾಂಗ ಸಾಮರಸ್ಯ ಎಂಬ

ಸಾಧನ ಸಂಪತ್ತು ನಿರೂಪಿಸಲ್ಪಟ್ಟಿದೆ. ಈ ನಾಲ್ಕನ್ನು ಶಿವಾದ್ವೈತಿಗಳ ಸಾಧನ ಚತುಷ್ಟಯವೆನ್ನಬಹುದು. ಲಿಂಗಧಾರಣ, ಶಿವದೀಕ್ಷಾದಿ ಸಂಸ್ಕಾರ ಗಳಿಂದ ಯುಕ್ತನಾದ ಪರಿಶುದ್ಧನಾದ ಜೀವನು ಕ್ರಿಯಾಪ್ರಧಾನವಾದ ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ಭಸ್ಮ, ರುದ್ರಾಕ್ಷ, ಮಂತ್ರ ಎಂಬ ಅಷ್ಟಾವರಣಗಳನ್ನೂ; ನೀತಿ ಪ್ರಧಾನವಾದ ಸದಾಚಾರ, ಶಿವಾಚಾರ, ಗಣಾಚಾರ, ಭೃತ್ಯಾಚಾರ, ಲಿಂಗಾಚಾರಗಳೆಂಬ ಪಂಚಾಚಾರಗಳನ್ನೂ; ಜ್ಞಾನಪ್ರಧಾನವೆನಿಸಿದ ಭಕ್ತ, ಮಾಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂಬ ಷಟ್‌ಸ್ಥಲಗಳನ್ನೂ; ವೈರಾಗ್ಯ ಪ್ರಧಾನವಾದ ಲಿಂಗಾಂಗ ಸಾಮರಸ್ಯವನ್ನೂ ಅನುವರ್ತಿಸಿ ಮೋಕ್ಷ ನಾಮಕ ಫಲವನ್ನು ಪಡೆಯಬಹು ದೆಂದು ಶಿವಾದ್ವೈತ ದರ್ಶನಕಾರರು ಸಿದ್ಧಾಂತ ಮಾಡಿದ್ದಾರೆ. ಪ್ರತಿಯೊಂದು ದರ್ಶನದಲ್ಲಿಯೂ ತತ್ವಜ್ಞಾನವು ತೆಂಗಿನಕಾಯಿನ ತಿರುಳು ಮತ್ತು ನೀರಿ ನಂತೆಯೂ, ಸಾಧನಮಾರ್ಗವು ಚಿಪ್ಪು ಮತ್ತು ನಾರಿನಂತೆಯೂ ಇರುತ್ತವೆ ಯೆಂದು ಅನುಭವಿಗಳ ಮತ. ತತ್ವ ಅಂದರೆ ನಿಜವೆಂದರ್ಥ; ಜ್ಞಾನ ವೆಂದರೆ ತಿಳಿವು ಎಂದರ್ಥ. ತತ್ವಜ್ಞಾನವೆಂದರೆ ನಿಜದ ತಿಳಿವು ಎಂದು ತಾತ್ಪರ್ಯ. ವೀರ ಎಂದರೆ ಶ್ರೇಷ್ಠನೆಂದರ್ಥ; ಶೈವ ಎಂದರೆ ಶಿವಭಕ್ತ ನೆಂದು ಭಾವ. ವೀರಶೈವ ತತ್ವಜ್ಞಾನವೆಂದರೆ ಶ್ರೇಷ್ಠರಾದ ಶಿವಭಕ್ತರಿಗೆ ತಿಳಿದ ಹೊಳೆದ ನಿಜದ ಅರಿವು ಎಂದು ತಾತ್ಪರ್ಯ. ಈ ಭಾವವನ್ನೇ ವೀರಶೈವ ಎಂಬ ಪದಕ್ಕೆ 'ಶಿವಜೀವೈಕ್ಯ ಸಂಧಾನ ಚತುರ' ಎಂಬರ್ಥದ ಅಭಿಪ್ರಾಯವನ್ನು ಸಿದ್ಧಾಂತಶಿಖಾಮಣಿ, ಕ್ರಿಯಾಸಾರ ಮುಂತಾದ ಗ್ರಂಥ ಕರ್ತರು ಹೇಳಿದ್ದಾರೆ.

ವೀರಶೈವ ದರ್ಶನಕಾರರು ತತ್ವಜ್ಞಾನ ಶಾಸ್ತ್ರದಲ್ಲಿ 'ದೇವರು' ಎಂಬ ವಿಚಾರವನ್ನು ಕುರಿತು ಮಾಡಿದ ಆಲೋಚನೆಯು ಪ್ರಶಂಸಾರ್ಹವಾಗಿದೆ. ಸಾಂಖ್ಯ, ಜೈನ, ಬೌದ್ಧ, ಚಾರ್ವಾಕ ದರ್ಶನಕಾರರು ದೇವರೆಂಬ ಮೂಲ ವಸ್ತುವೊಂದುಂಟೆಂದು ಒಪ್ಪುವುದಿಲ್ಲ. ವೇದಾಂತ ಮತಗಳೆನಿಸಿದ ಶಂಕರ ದರ್ಶನ, ರಾಮಾನುಜ ದರ್ಶನ, ಆನಂದತೀರ್ಥ ದರ್ಶನಗಳಲ್ಲಿ ದೇವರೆಂಬ ವಸ್ತುವಿನ ಅಸ್ತಿತ್ವವುಂಟು. ಭಾರತ ತತ್ವಶಾಸ್ತ್ರದಲ್ಲಿ ಬಹುಮುಖ್ಯ ಗ್ರಂಥ

ಗಳೆನಿಸಿದ ದಶೋಪನಿಷತ್ತುಗಳು, ಭಗವದ್ಗೀತೆ ಮತ್ತು ಉತ್ತರಮೀಮಾಂಸೆ ಇವು ದೇವರನ್ನು ಅಂಗೀಕರಿಸುತ್ತವೆ. ವೀರಶೈವ ದರ್ಶನಕಾರರು ಈ ವಿಚಾರದಲ್ಲಿ ಆಸ್ತಿಕ ಮತಗಳ ಗುಂಪಿಗೆ ಸೇರಿರುತ್ತಾರೆ. ಜಗತ್ತೆಂಬ ಕಾರ್ಯಕ್ಕೆ ದೇವರೆಂಬ ಕಾರಣವು ಇರಬೇಕೆಂಬುದೂ,ಆ ಕಾರಣಕ್ಕೆ ಕಾರಣವನ್ನು ಕೇಳ ಹೋಗುವುದು ಹುಚ್ಚುತನವೆಂದೂ ಪ್ರಾಜ್ಞರ ಅಭಿಪ್ರಾಯ. ಜಗತ್ತಿನ ಆ ಮೂಲವಸ್ತುವನ್ನು ವೀರಶೈವರು ಶಿವ,ಲಿಂಗ, ಶೂನ್ಯ ಎಂಬ ಅಭಿಧಾನದಿಂದ ಕರೆಯುತ್ತಾರೆ. ಆ ಮೂಲರೂಪನಾದ ಶಿವನು ತನ್ನದೇ ಆದ, ತನಗೀತ ಭಿನ್ನವಲ್ಲದ ಒಂದು ಶಕ್ತಿಯಿಂದ ಕೂಡಿದ್ದಾನೆಂದೂ; ಅಂತಹ ಶಕ್ತಿಯಿಂದ ವಿಶಿಷ್ಟನಾಗಿದ್ದರೂ ಅವನು ಅದ್ವೈತರೂಪನಾಗಿದ್ದಾನೆಂದೂ ಈ ಮತವು ಹೇಳುತ್ತದೆ. ಶಿವಶಕ್ತಿಯರು ತೋರಿಕೆಗೆ ಎರಡಾಗಿ ಕಂಡರೂ ವಿಚಾರಕ್ಕೆ ಒಂದೇ ವಸ್ತುವಾಗಿದ್ದಾರೆ. ಹೇಗೆಂದರೆ ಹೂ ಮತ್ತು ವಾಸನೆಯಂತೆ, ಸವಿ ಮತ್ತು ಸಕ್ಕರೆಯಂತೆ, ರತ್ನ ಮತ್ತು ಕಾಂತಿಯಂತೆ, ಶಬ್ದ ಮತ್ತು ಅರ್ಥ ಗಳಂತೆ, ಹಾಲು ಮತ್ತು ರುಚಿಯಂತೆ ಬೆಳುದಿಂಗಳು ಮತ್ತು ತಂಪಿನಂತೆ- ಎಂದು ಈ ದರ್ಶನಕಾರರು ನಿರೂಪಿಸಿದ್ದಾರೆ. ಹೀಗೆ ಲಿಂಗರೂಪವೆನಿಸಿದ ಮೂಲವಸ್ತುವು ಶಕ್ತಿಯಿಂದ ಕೂಡಿದ್ದರೂ ಅದ್ವೈತರೂಪವೆನಿಸುವುದರಿಂದ ಈ ಮತಕ್ಕೆ "ಶಕ್ತಿವಿಶಿಷ್ಟಾದ್ವೈತಮತ" ಎಂಬ ಹೆಸರೂ ಉಂಟು.

ಪ್ರಕೃತಿಯು ಪರಮಾತ್ಮನ ಕಾರ್ಯ. ಇದು ಸುಳ್ಳು ಎಂದು ಶಂಕರಾ ಚಾರ್ಯರ ಮತ. ಇದಕ್ಕೆ ಕಾರಣನಾದ ಬ್ರಹ್ಮನು ಮಾತ್ರ ಸತ್ಯ ಎಂಬುದು ಅವರ ವಾದ. ವೀರಶೈವ ದರ್ಶನಕಾರರು ಈ ವಿಷಯದಲ್ಲಿ ಭಿನ್ನಾಭಿಪ್ರಾಯ ವುಳ್ಳವರಾಗಿದ್ದಾರೆ. ಕಾರಣರೂಪನಾದ ಬ್ರಹ್ಮನು ಅಥವಾ ಶಿವನು ಸತ್ಯ ಸ್ವರೂಪನಾದರೆ, ಅವನ ಕಾರ್ಯರೂಪವಾದ ಜಗತ್ತೂ ಸತ್ಯವೆನಿಸಲೇ ಬೇಕು. ಕಾರಣದ ಗುಣವು ಕಾರ್ಯದಲ್ಲಿ ಕಾಣಬೇಕೆಂಬುದು ತರ್ಕಶಾಸ್ತ್ರದ ನಿಯಮ. ಸೂರ್ಯನ ಕಿರಣಗಳು ತಂಪಾಗಿರುವುದೂ, ಚಂದ್ರನ ಕಿರಣಗಳು ಉಷ್ಣ ವೆನಿಸುವುದೂ ಹೇಗೆ ಅಸಂಭವವೋ ಹಾಗೆ, ಸತ್ಯರೂಪನಾದ ಬ್ರಹ್ಮನಿಂದ ಅಸತ್ಯರೂಪವಾದ ಪ್ರಕೃತಿ ಹುಟ್ಟುವುದು ಅಸಂಭವ ಎಂಬುದು ಇವರ ವಾದ.

ರಜ್ಜುಸರ್ಪನ್ಯಾಯ, ಸ್ಥಾಣು ಚೋರನ್ಯಾಯ, ಶುಕ್ತಿ ರಜತನ್ಯಾಯ ಎಂಬಿವೇ ಮೊದಲಾದುವು ಅದ್ವೈತಿಗಳು ಜಗತ್ತು ಸುಳ್ಳೆಂಬ ವಾದಕ್ಕೆ ನೆರವಾಗಲಾರವು. ಅವು ತದ್ವಿರೋಧವಾಗಿ ವೀರಶೈವ ದರ್ಶನಕಾರರ ಬ್ರಹ್ಮ ಮತ್ತು ಜಗತ್ತು ಇವು ಸತ್ಯವೆಂಬ ಅಭಿಪ್ರಾಯವನ್ನೇ ಸಿದ್ಧಪಡಿಸುತ್ತವೆಯೆಂದು ಶಿವಾದ್ವೈತಿಗಳ ವಾದ. ರಜ್ಜು ಮತ್ತು ಸರ್ಪ, ಸ್ಥಾಣು ಮತ್ತು ಚೋರ, ಶುಕ್ತಿ ಮತ್ತು ರಜತ ಎಂಬ ಈ ಪದಾರ್ಥಗಳ ಪೂರ್ವ ಪರಿಚಿತನಲ್ಲದವನಿಗೆ ಭ್ರಾಂತಿಯುಂಟಾಗುವುದೂ ಆಮೇಲೆ ಅದರ ಪರಿಹಾರವಾಗುವುದೂ ಅಸಂಭವ. ಆದುದರಿಂದ ಆ ಮೂಲ ವಸ್ತುಗಳೆರಡೂ ಅಂದರೆ ಶಿವಶಕ್ತಿಗಳು ನಿಜವಾಗಿರಲೇಬೇಕು-ಎಂಬುದು ವೀರಶೈವರ ಸಿದ್ಧಾಂತ. ಶಿವಾದ್ವೈತ ಶಾಸ್ತ್ರಕಾರರು ಶಿವ ಮತ್ತು ಶಕ್ತಿ ಎಂಬ ಎರಡು ವಸ್ತುಗಳೂ ಜಗತ್ತಿನ ಬುನಾದಿಯೆಂದು ಅತ್ಯಂತ ಸ್ಪಷ್ಟವಾಗಿ ಹೇಳಿದ್ದಾರೆ. ಇಂದಿನ ವೈಜ್ಞಾನಿಕರು ಜಗತ್ತಿನ ಮೂಲವಸ್ತುಗಳು (Matter and Energy) ಎಂದು ಹೇಳುವ ಸಿದ್ಧಾಂತವು ಈ ದರ್ಶನಕ್ಕೆ ಸಹಾಯವೆನಿಸಿದೆ.

ಸಚ್ಚಿದಾನಂದ ರೂಪನಾದ ಪರಮಾತ್ಮನು ಒಬ್ಬನೇ ಎಂದೂ, ಅವನನ್ನೇ ಮುಮುಕ್ಷುಗಳು ಬಗೆಬಗೆಯ ಹೆಸರುಗಳಿಂದ ಸಂಬೋಧಿಸುವರೆಂದೂ "ಏಕಂಸತ್ ವಿಪ್ರಾ ಬಹುಧಾ ವದಂತಿ" "ಏಕಮೇವಾದ್ವಿತೀಯಂ ಬ್ರಹ್ಮ" ಇತ್ಯಾದಿ ವೇದವಾಕ್ಯಗಳು ಪ್ರಮಾಣಾರ್ಹವೆಂದೂ ಅನುಭವ ಸಮ್ಮತವೆಂದೂ ವೀರಶೈವ ದಾರ್ಶನಿಕರು ಭಾವಿಸಿದ್ದಾರೆ ಆದುದರಿಂದಲೇ ಲಿಂಗವಂತ ಸಮಾಜದಲ್ಲಿ ಇತರ ಹಿಂದೂ ಸಮಾಜದಲ್ಲಿರುವ ಬಹುದೇವತೋಪಾಸನೆ, ಬಗೆಬಗೆಯ ಪ್ರತೀಕಗಳ ಪೂಜೆ ಮೊದಲಾದ ಗೊಂದಲಗಳಿಲ್ಲ. ವೀರಶೈವ ದರ್ಶನಗಳಲ್ಲಿ ಪರಮಾತ್ಮನು ಸಗುಣನೂ ಅಹುದು, ನಿರ್ಗುಣನೂ ಆಹುದು. ವೀರಶೈವರ ತ್ರಿವಿಧ ಲಿಂಗಪೂಜೆಯಲ್ಲಿ ಇಷ್ಟಲಿಂಗವು ಸಗುಣಾತ್ಮಕವಾಗಿಯೂ, ಪ್ರಾಣಲಿಂಗ ಭಾವಲಿಂಗಗಳು ನಿರ್ಗುಣಾತ್ಮಕವಾಗಿಯೂ ಅರ್ಚಿಸಲ್ಪಡುತ್ತವೆ. ಲಿಂಗಪೂಜೆಯು ಸನಾತನವೇ ಅಲ್ಲದೆ ಉದಾತ್ತವೂ ಎನಿಸಿದೆ.

ವೀರಶೈವ ತತ್ತ್ವಜ್ಞಾನದ ದೃಷ್ಟಿಯಿಂದ ಜೀವನು ದೇವನಿಗೆ ಬೇರೆ

ಯೆನಿಸಿಲ್ಲ. ಶಂಕರಾಚಾರ್ಯರು ಹೇಳುವಂತೆ ಬ್ರಹ್ಮನೇಜೀವ, ಆದರೆ ಜೀವನು ಆಣವ, ಮಾಯಾ, ಕಾರ್ಮಿಕ ಎಂಬ ಮಲತ್ರಯಗಳಿಂದ ಬದ್ಧನಾಗಿ, ತಾನು ದೇವನೆಂಬುದನ್ನು ಮರೆತಿರುವನು. ಬೆಂಕಿಯ ಕಿಡಿಯು ಬೆಂಕಿಗೆ ಬೇರೆಯಲ್ಲದಿರುವಂತೆ, ಸೂರ್ಯನ ರಶ್ಮಿಯು ಅವನಿಗೆ ವಿಭಿನ್ನವೆನಿಸದಂತೆ, ಸಮುದ್ರದ ತರಂಗಗಳು ಸಾಗರಕ್ಕೆ ಬೇರೆಯೆನಿಸದಂತೆ ಜೀವನು ತೋರಿಕೆಗೆ ಬೇರೆಂಬಂತೆ ಕಂಡರೂ, ಅವನು ವಿಚಾರದಿಂದ ಪರಬ್ರಹ್ಮನೇ ಆಗಿರುವನೆಂಬುದು ವೀರಶೈವ ಸಿದ್ಧಾಂತಕಾರರ ಮತ. ಶ್ರೀ ಆನಂದ ತೀರ್ಥರು ಜೀವನು ಬ್ರಹ್ಮನಿಗೆ ಭಿನ್ನನೆಂದೂ, ಶ್ರೀರಾಮಾನುಜರು ಜೀವನು ಬ್ರಹ್ಮನ ಒಂದಂಶವೆಂದೂ ವಾದಿಸಿದ್ದಾರೆ. ಆದರೆ ವೀರಶೈವ ತತ್ವಜ್ಞಾನವು ಈ ವಿಚಾರದಲ್ಲಿ ಶಂಕರರ ಮತವನ್ನು ಹೋಲುತ್ತದೆ.

ಜೀವನು ಜನ್ಮತಃ ಉಚ್ಚನೀಚನೆನಿಸುವನೆಂದೂ, ಜೀವಗಳಲ್ಲಿ ತರತಮ ಭಾವವುಂಟೆಂದೂ, ಸ್ತ್ರೀಪುರುಷ ಆತ್ಮಗಳು ಭಿನ್ನಯೋಗ್ಯತೆಯವುಗಳೆಂದೂ ಕೆಲವು ಹಿಂದೂ ದರ್ಶನಕಾರರು ವಾದಿಸುವಂತೆ ವೀರಶೈವರು ಹೇಳುವುದಿಲ್ಲ. ಇವರು ಎಲ್ಲ ಜೀವಗಳೂ ಪ್ರಗತಿಗೆ ಯೋಗ್ಯತೆಯುಳ್ಳವುಗಳೆಂದೂ, ಅವುಗಳಲ್ಲಿ ಪುಂ ಸ್ತ್ರೀ ತರತಮ ಭಾವಗಳನ್ನು ಕಲ್ಪಿಸುವುದು ನ್ಯಾಯವಲ್ಲವೆಂದೂ; ಅದು ಕಾರಣವೇ ಹುಟ್ಟಿನಿಂದ ಮಾನವರ ಜಾತಿ, ಲಿಂಗ, ಆಶ್ರಮ, ವರ್ಣಗಳು ಮೋಕ್ಷಕ್ಕೆ ಪ್ರತಿಬಂಧಕವಾಗಲಾರದೆಂದೂ ಈ ಮತದಲ್ಲಿ ಹೇಳಲ್ಪಟ್ಟಿದೆ. ಈ ವಿಚಾರವು ವೀರಶೈವ ತತ್ವಜ್ಞಾನಕ್ಕೆ ಬುನಾದಿಯೆನಿಸಿದ ಶಿವಾಗಮಗಳಲ್ಲಿಯೂ, ಈ ಶಿವಾಗಮಗಳಿಂದ ಸ್ಫೂರ್ತಿಯನ್ನು ಹೊಂದಿದ ಶಿವಶರಣರ ವಚನಗಳಲ್ಲಿಯೂ ಅತ್ಯಂತ ಮನೋಹರವಾಗಿ ಚಿತ್ರಿಸಲ್ಪಟ್ಟಿದೆ. ಅಂದರೆ ಸ್ತ್ರೀಪುರುಷ ಜೀವಗಳೂ, ಬ್ರಾಹ್ಮಣ-ಶೂದ್ರ ಜೀವಗಳೂ ಶಿವ ಸಂಸ್ಕಾರದಿಂದ ಆಣವ, ಮಾಯಾ, ಕಾರ್ಮಿಕ ಎಂಬ ಮಲಗಳನ್ನು ಕಳೆದುಕೊಂಡು, ಮೋಕ್ಷಕ್ಕೆ ಸಮಾನಾಧಿಕಾರಿಗಳಾಗಿರುವರೆಂಬುದು ಈ ದರ್ಶನದ ತಾತ್ಪರ್ಯ. ಈ ಕಾರಣದಿಂದಲೇ ಇತರ ಹಿಂದೂ ಸಮಾಜದಲ್ಲಿರುವ ಜಾತಿ, ವರ್ಣ, ಆಶ್ರಮಗಳ ತರತಮ ಭಾವಗಳು ವೀರಶೈವ ಸಮಾಜದಲ್ಲಿ ಅನುಷ್ಠಾನಕ್ಕೆ ಬರಲಿಲ್ಲವೆಂದು ತೋರುತ್ತದೆ.

ವೀರಶೈವ ದರ್ಶನದಲ್ಲಿ ಪರಸ್ಪರ ವಿರೋಧವೆನಿಸಿದ ದ್ವೈತ ಮತ್ತು ಅದ್ವೈತಗಳು ಸಮನ್ವಯಗೊಂಡಿವೆ. ಸಾಧಕನಾದ ಅಂಗ (ಶುದ್ಧಜೀವ)ನು ಪರಬ್ರಹ್ಮ ರೂಪನಾದ ಲಿಂಗ (ಸರ್ವಜ್ಞ–ಪರಮೇಶ್ವರ)ನನ್ನು ಹೊಂದಲು ಈ ದ್ವೈತ–ಅದ್ವೈತಗಳೆರಡೂ ಅವನಿಗೆ ಸಹಾಯಗಳೆನಿಸುತ್ತವೆ. ಜೀವನು ಮೋಕ್ಷವನ್ನು ಪಡೆಯಲು ತಾನು ಅನುಕ್ರಮದಿಂದ ಅವರೋಹಿಸಬೇಕಾಗಿರುವ ಭಕ್ತ, ಮಾಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂಬ ಷಟ್ಸ್ಥಲಗಳಲ್ಲಿ ಮೊದಲಿನ ಐದು ದ್ವೈತವನ್ನೂ, ಕಡೆಯ ಐಕ್ಯಸ್ಥಲವು ಅದ್ವೈತವನ್ನೂ ಆಶ್ರಯಿಸುತ್ತವೆ. ಅದ್ವೈತವು ಪರಮಾವಧಿಯಲ್ಲಿ ಸತ್ಯವಾದರೂ ಸಾಧಕಾವಸ್ಥೆಯಲ್ಲಿ ಜಿಜ್ಞಾಸುವಾದ ಜೀವನು ದ್ವೈತವನ್ನು ಆಶ್ರಯಿಸುವುದು ಮೇಲೆಂದೂ, ಶಿಖಿ ಕರ್ಪೂರ ನ್ಯಾಯದಂತೆ ಆ ಸಾಧಕನ ದ್ವೈತವು ಪರಿಣಾಮದಲ್ಲಿ ಅದ್ವೈತದಲ್ಲಿ ಪರ್ಯವಸಾನವಾಗುವುದೆಂದೂ ಶಿವಾನುಭವಿಗಳ ಮತ. ಅಲ್ಲದೆ ದ್ವೈತಾದ್ವೈತಗಳ ಸಮನ್ವಯವು ವೀರಶೈವ ತತ್ವಜ್ಞಾನದಲ್ಲಿ ಅಂಗೀಕೃತವಾಗಿರುವುದರಿಂದ ಸರ್ವಶ್ರುತಿ ಸಮನ್ವಯತ್ವವು ಕೂಡ ಈ ಮತಕ್ಕೆ ಘಟಿಸುವುದೆಂದು ಶಾಸ್ತ್ರಕಾರರ ಅಭಿಪ್ರಾಯ.

ಕರ್ಮದಿಂದಲೇ ಮೋಕ್ಷವೆಂದು ಪೂರ್ವ ಮೀಮಾಂಸಾಕಾರರೂ, ಜ್ಞಾನವೊಂದೇ ಮೋಕ್ಷಕ್ಕೆಸಾಕೆಂದು ಉತ್ತರ ಮೀಮಾಂಸಾಕಾರರೂ ಹೇಳುತ್ತಿರುವರೆಂಬುದು ವೇದಾಂತದ ವಿದ್ಯಾರ್ಥಿಗಳಿಗೆಲ್ಲ ತಿಳಿದಿರುವ ಮಾತು. ವೀರಶೈವ ತತ್ವಜ್ಞಾನದಲ್ಲಿ ಕ್ರಿಯೆ, ಜ್ಞಾನಗಳೆರಡೂ ಸಮಾನವಾಗಿ ಅಂಗೀಕರಿಸಲ್ಪಟ್ಟಿವೆ. ಒಂದು ಪಕ್ಷಿಯು ಎರಡು ರೆಕ್ಕೆಗಳಿಂದ ತನ್ನ ಗಮ್ಯಸ್ಥಾನವನ್ನು ಸೇರುವಂತೆ ತತ್ವ ಜಿಜ್ಞಾಸುವಾದ ಜೀವನು ಕ್ರಿಯೆ ಮತ್ತು ಜ್ಞಾನಗಳೆಂಬ ಎರಡು ರೆಕ್ಕೆಗಳ ಸಹಾಯದಿಂದ ಮೋಕ್ಷನಾಮಕ ಸ್ಥಾನವನ್ನು ಸುಲಭವಾಗಿ ಸೇರುವನೆಂಬುದು ಈ ದರ್ಶನದ ತಾತ್ಪರ್ಯ. ಎಂತಹ ಜ್ಞಾನಿಯಾದರೂ, ಆತ್ಮ ಸಾಕ್ಷಾತ್ಕಾರವನ್ನು ಹೊಂದಿದವನಾದರೂ–ಪಂಚ ಭೂತಾತ್ಮಕವಾದ ಶರೀರವು ಇರುವವರೆಗೂ ಸತ್‌ಕರ್ಮವನ್ನು ಎಳ್ಳಷ್ಟೂ ಬಿಡಬಾರದೆಂಬುದೇ ಈ ಮತದ ಆಜ್ಞೆ. ವೇದಾಂತಿಯು ಜ್ಞಾನಸಿದ್ಧರು ಕರ್ಮವನ್ನು ಬಿಟ್ಟರೂ

ಚಿಂತೆಯಿಲ್ಲ ಅನ್ನುತ್ತಾರೆ. ಶ್ರೀ ಶಂಕರಾಚಾರ್ಯರು 'ಚಿತ್ತಸ್ಯ ಶುದ್ಧೈತ ಕರ್ಮ ನ ತು ವಸ್ತೂಪಲಬ್ಧಯೆ' ಎಂದು ವಿವೇಕ ಚೂಡಾಮಣಿಯಲ್ಲಿ ಹೇಳಿದ್ದಾರೆ. ಆದರೆ ವೀರಶೈವರು ಇದನ್ನು ಒಪ್ಪುವುದಿಲ್ಲ.

ವೀರಶೈವ ತತ್ವಜ್ಞಾನಿಗಳು ಜನನ, ಮರಣ, ಪಾಪ, ಪುಣ್ಯ ಮೊದಲಾದುವುಗಳನ್ನು ನಂಬುತ್ತಾರೆ. ಅವರು ಪಾಪಕ್ಕೆ ಹೆದರಿದರೂ, ಪುಣ್ಯವನ್ನು ಅಪೇಕ್ಷಿಸುವುದಿಲ್ಲ. ಏಕೆಂದರೆ ಪಾಪವು ಕಬ್ಬಿಣದ ಬೇಡಿಯಾದರೆ ಪುಣ್ಯವು ಚಿನ್ನದ ಸರಪಣಿಯೆಂದು ಅವರ ತಿಳಿವಳಿಕೆ. ಕೊಂಚಕಾಲದ ಸುಖಕ್ಕಾಗಿ ಸ್ವರ್ಗಸುಖವನ್ನು ಬಯಸುವುದು, ಅಲ್ಪಸುಖಕ್ಕಾಗಿ ಯಾಗಾದಿ ಹಿಂಸಾತ್ಮಕ ಕರ್ಮಗಳನ್ನು ಮಾಡುವುದು ಈ ದರ್ಶನಕ್ಕೆ ಖಂಡಿತವಾಗಿಯೂ ಸಮ್ಮತವಲ್ಲ "ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ" ಎಂಬ ಸನಾತನ ವಾಕ್ಯ ಈ ಭಾವವನ್ನೇ ಪರಿಪೋಷಿಸುತ್ತದೆ. ಅದು ಕಾರಣವೇ ವೀರಶೈವರಲ್ಲಿ ಯಜ್ಞ ಯಾಗಾದಿ ಕರ್ಮಗಳ ಆಚರಣೆಯಿಲ್ಲ. ಅವರು ವೇದಗಳ ಜ್ಞಾನಕಾಂಡಕ್ಕೆ ತಲೆಬಾಗಿದರೂ, ಅದರ ಕರ್ಮಕಾಂಡಕ್ಕೆ ಎಡೆಗೊಟ್ಟಂತೆ ತೋರುವುದಿಲ್ಲ. ಈ ವಿಚಾರವನ್ನು ವಚನಕಾರರು ಅತ್ಯಂತ ಕಟುವಾಗಿ ಟೀಕಿಸಿದ್ದಾರೆ.

ಜನನ ಮರಣಕ್ಕೆ ಕಾರಣೀಭೂತವಾದ ಆಗಾಮಿ, ಸಂಚಿತ, ಪ್ರಾರಬ್ಧ ಕರ್ಮಗಳು ಗುರು, ಲಿಂಗ, ಜಂಗಮಕ್ಕೆ ತನು, ಮನ, ಧನದಿಂದ ಸೇವೆಗೈದ ವೀರಶೈವ ಜೀವನಿಗೆ ಗಂಟುಬೀಳುವುದಿಲ್ಲ. ಆದುದರಿಂದ ವೀರಶೈವನು ಪೂರ್ವ ಜನ್ಮವನ್ನು ಒಪ್ಪಿದರೂ ಪುನರ್ಜನ್ಮವನ್ನು ಒಪ್ಪುವುದಿಲ್ಲ. ಇದೊಂದು ಈ ದರ್ಶನದ ವೈಶಿಷ್ಟ್ಯವೆನ್ನಬಹುದು. ಆದುದರಿಂದ ಶಿವಾದ್ವೈತಿಯು 'ಲಿಂಗ ಭೋಗೋಪಭೋಗಿ' ಎಂದು ಹೇಳಿಕೊಳ್ಳುವುದು ಅತ್ಯಂತ ಯುಕ್ತವೆನಿಸಿದೆ.

[ವೀರಶೈವ ಸಿದ್ಧಾಂತದಲ್ಲಿ ಪ್ರತ್ಯಕ್ಷ, ಅನುಮಾನ, ಶಬ್ದ ಎಂಬ ಮೂರು ಪ್ರಮಾಣಗಳನ್ನು ಮಾತ್ರ ಅಂಗೀಕರಿಸಿದೆ.] ಚಾರ್ವಾಕ ದರ್ಶನಕಾರರು ಪ್ರತ್ಯಕ್ಷ ಪ್ರಮಾಣವೊಂದನ್ನೂ, ವೈಶೇಷಿಕ ಮತ್ತು ಬೌದ್ಧರು ಪ್ರತ್ಯಕ್ಷ ಮತ್ತು ಅನುಮಾನವೆಂಬ ಎರಡು ಪ್ರಮಾಣಗಳನ್ನೂ, ಸಾಂಖ್ಯರು ಪ್ರತ್ಯಕ್ಷ, ಅನುಮಾನ, ಶಬ್ದ ಎಂಬ ಮೂರು ಪ್ರಮಾಣಗಳನ್ನು, ನೈಯ್ಯಾಯಿಕರು ಪ್ರತ್ಯಕ್ಷ,

ಅನುಮಾನ, ಉಪಮಾನ, ಶಬ್ದ ಎಂಬ ನಾಲ್ಕು ಪ್ರಮಾಣಗಳನ್ನೂ, ಪ್ರಾಭಾಕರರು ಈ ನಾಲ್ಕರೊಡನೆ ಅರ್ಥಾಪತ್ತಿ ಎಂಬ ಪ್ರಮಾಣವನ್ನೂ, ಅದ್ವೈತಿಗಳು ಈ ಐದರೊಡನೆ ಅನುಪಲಬ್ಧಿ ಎಂಬ ಪ್ರಮಾಣವನ್ನೂ, ಪೌರಾಣಿಕರು ಸಂಭವ ಮತ್ತು ಐತಿಹ್ಯಎಂಬ ಮತ್ತೆರಡು ಪ್ರಮಾಣಗಳನ್ನೂ ಅಂಗೀಕರಿಸಿರುವರೆಂಬುದು ತತ್ವ ಶಾಸ್ತ್ರಾಭ್ಯಾಸಿಗಳಿಗೆ ತಿಳಿದಿರುವ ವಿಚಾರ. ಶಿವಾದ್ವೈತ ದಾರ್ಶನಿಕರು ಪ್ರತ್ಯಕ್ಷ, ಅನುಮಾನ, ಶಬ್ದ ಎಂಬ ಮೂರು ಪ್ರಮಾಣಗಳಲ್ಲಿಯೇ ಮಿಕ್ಕವು ಅಂತರ್ಭೂತವಾಗುವುದೆಂದು ಅಭಿಪ್ರಾಯ ಪಟ್ಟಿದ್ದಾರೆ.

ವೀರಶೈವ ತತ್ವಜ್ಞರು ಸೃಷ್ಟಿಕ್ರಮವನ್ನು ಒಂದು ಸ್ವತಂತ್ರವಾದ ರೀತಿಯಿಂದ ಹೇಳಿದ್ದಾರೆ. ಅದನ್ನು ಅವರು ಅಪ್ರಾಕೃತ ಸೃಷ್ಟಿ ಎಂದೂ, ಇದು ಬ್ರಹ್ಮಸೃಷ್ಟಿಗೆ ವಿಭಿನ್ನವೆಂದೂ ಹೇಳಿ, ತಮ್ಮ ತತ್ವಜ್ಞಾನದ ವೈಶಿಷ್ಟ್ಯವನ್ನು ಸಾರುತ್ತಾರೆ. ಈ ವಿಷಯವನ್ನು ವೀರಶೈವ ಗ್ರಂಥಕಾರರು ಅತ್ಯಂತ ಸುಂದರವಾಗಿ ನಿರೂಪಿಸಿದ್ದಾರೆ. ಬ್ರಹ್ಮಸೃಷ್ಟಿಯು ಅಪೂರ್ಣವೆಂದೂ ಶಿವ ಸೃಷ್ಟಿಯು ಪೂರ್ಣವೆಂದೂ ಅದರ ತಾತ್ಪರ್ಯ.

ವೀರಶೈವ ತತ್ವಜ್ಞಾನದಲ್ಲಿ ೩೬ ಮೂಲತತ್ವಗಳು ನಿರೂಪಿಸಲ್ಪಟ್ಟವೆ. ಈ ತತ್ವಗಳು ಆ ಪರಬ್ರಹ್ಮನ ಅವಿನಾಭಾವ ಸಂಬಂಧದಿಂದಿರುವ ವಿಮರ್ಶಾ ಶಕ್ತಿಯ ಸ್ಫುರಣವೆಂದು ಇವರ ಅಭಿಪ್ರಾಯ. ೧. ಶಿವ, ೨. ಶಕ್ತಿ, ೩. ಸದಾಶಿವ, ೪. ಈಶ್ವರ, ೫. ಶುದ್ಧವಿದ್ಯಾ, ೬. ಮಾಯಾ, ೭. ಕಲಾ, ೮. ವಿದ್ಯಾ, ೯. ರಾಗ, ೧೦. ಕಾಲ, ೧೧. ನಿಯತಿ, ೧೨. ಪುರುಷ, ೧೩. ಪ್ರಕೃತಿ, ೧೪. ಬುದ್ಧಿ, ೧೫. ಅಹಂಕಾರ, ೧೬. ಮನಸ್ಸು, ೧೭. ಶ್ರೋತ್ರ, ೧೮. ತ್ವಕ್, ೧೯. ನೇತ್ರ, ೨೦. ಜಿಹ್ವಾ, ೨೧. ಘ್ರಾಣ, ೨೨. ವಾಕ್, ೨೩. ಪಾಣಿ, ೨೪. ಪಾದ, ೨೫. ಪಾಯು, ೨೬. ಉಪಸ್ಥ, ೨೭. ಶಬ್ದ, ೨೮. ಸ್ಪರ್ಶ, ೨೯. ರೂಪ, ೩೦. ರಸ, ೩೧. ಗಂಧ, ೩೨. ಆಕಾಶ, ೩೩. ವಾಯು, ೩೪ ಅಗ್ನಿ, ೩೫. ಜಲ, ೩೬. ಪೃಥಿವೀ, ಇವೇ ಆ ಷಟ್ತ್ರಿಂಶ ತತ್ವಗಳು. ವೇದಾಂತಿಗಳು ಕೇವಲ ೨೫ ಮೂಲತತ್ವ

ಗಳನ್ನು ಹೇಳಿದ್ದಾರೆಂಬುದು ಇಲ್ಲಿ ಸ್ಮರಣೆಯಲ್ಲಿಡಬೇಕಾದ ವಿಚಾರ. ಈ ಮೂವತ್ತಾರು ತತ್ವಗಳು ಶಿವಾಗಮಗಳಲ್ಲಿ ಅತ್ಯಂತ ವಿಸ್ತಾರವಾಗಿ ನಿರೂಪಿಸಲ್ಪಟ್ಟವೆ. ಇವುಗಳಲ್ಲಿ ೨೪ ಆತ್ಮತತ್ವಕ್ಕೂ, ೧೦ ವಿದ್ಯಾತತ್ವಕ್ಕೂ, ೧ ಶಿವತತ್ವಕ್ಕೂ ಸಂಬಂಧಪಟ್ಟವುಗಳೆಂದು ಶಿವಜ್ಞಾನಿಗಳ ಮತ. ಈ ೩೬ ತತ್ವಗಳ ನಿರೂಪಣೆಯಲ್ಲಿ ಸಾಂಖ್ಯದರ್ಶನ ಹಾಗೂ ಶೈವಸಿದ್ಧಾಂತದ ಪ್ರಭಾವವು ವೀರಶೈವ ದರ್ಶನದ ಮೇಲೆ ಚೆನ್ನಾಗಿ ಬಿದ್ದಿದೆಯೆಂದು ತೋರಿಬರುತ್ತದೆ.

ವೀರಶೈವ ಶಾಸ್ತ್ರಗಳಲ್ಲಿ ಬ್ರಹ್ಮನನ್ನು 'ಸ್ಥಲ' ಎಂಬ ಹೆಸರಿನಿಂದ ಕರೆದಿದ್ದಾರೆ. 'ಲಿಂಗ' ಎಂಬ ಶಬ್ದವು ಇದಕ್ಕೆ ಪರ್ಯಾಯವಾದುದು. ವಚನಕಾರರು 'ಶೂನ್ಯ' ಎಂಬ ಹೆಸರಿನಿಂದಲೂ ಬ್ರಹ್ಮನನ್ನು ಕರೆಯುತ್ತಾರೆ.

ಸ್ಥೀಯತೇ ಲೀಯತೇ ಯತ್ರ ಜಗದೇತಚ್ಚರಾಚರಂ ।
ತದ್ಬ್ರಹ್ಮಸ್ಥಲಮಿತ್ಯುಕ್ತಂ ಸ್ಥಲ ತತ್ವ ವಿಶಾರದೈಃ ॥

ಎಂಬ ಈ ಶ್ಲೋಕಾರ್ಥವು ಪರಬ್ರಹ್ಮನನ್ನೇ ನಿರ್ದೇಶಿಸುತ್ತದೆ. ಈ ಸ್ಥಲ ರೂಪಕ ಬ್ರಹ್ಮವು, ಅಂಗಸ್ಥಲ, ಲಿಂಗಸ್ಥಲ ಎಂದು ಎರಡು ವಿಭಾಗವಾಗುವುದೆಂದೂ, ಜೀವನು ಅಂಗಪದ ವಾಚ್ಯನೆಂದೂ, ಬ್ರಹ್ಮನು ಲಿಂಗಪದ ವಾಚ್ಯನೆಂದೂ ಹೇಳಲ್ಪಟ್ಟಿದೆ. ಲಿಂಗವು ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗ ಎಂಬ ಮೂರು ಬಗೆಯಾಗಿಯೂ, ಅಂಗವು ತ್ಯಾಗಾಂಗ, ಭೋಗಾಂಗ, ಯೋಗಾಂಗ ಎಂಬ ಮೂರು ಪ್ರಕಾರವಾಗಿಯೂ ವಿಭಾಗಿಸಲ್ಪಟ್ಟಿದೆ. ಮತ್ತೆ ಸಾಧಕರ ಅನುಕೂಲಕ್ಕಾಗಿ ಇಷ್ಟಲಿಂಗವು ಆಚಾರಲಿಂಗ, ಗುರುಲಿಂಗ ಎಂದೂ ಪ್ರಾಣಲಿಂಗವು ಶಿವಲಿಂಗ, ಚರಲಿಂಗ ಎಂದೂ, ಭಾವಲಿಂಗವು ಪ್ರಸಾದಿಲಿಂಗ ಮಹಾಲಿಂಗ ಎಂದೂ ಆರು ಪ್ರಕಾರವಾಗುವುವು. ಇದರಂತೆಯೇ ತ್ಯಾಗಾಂಗವು ಭಕ್ತ, ಮಾಹೇಶ ಎಂದೂ, ಭೋಗಾಂಗವು ಪ್ರಸಾದಿ, ಪ್ರಾಣಲಿಂಗಿ ಎಂದೂ ಯೋಗಾಂಗವು ಶರಣ, ಐಕ್ಯ ಎಂದೂ ಆರು ಪ್ರಕಾರವಾಗುವುವು. ಮುಂದೆ ಈ ಅಂಗಸ್ಥಲವು ೪೪ ಭಾಗಗಳಾಗಿಯೂ, ಲಿಂಗಸ್ಥಲವು ೫೭ ಭಾಗಗಳಾಗಿಯೂ ವಿಭಾಗಿಸಲ್ಪಡುವುದು. ಒಟ್ಟು ಈ ನೂರೊಂದು ಸ್ಥಲಗಳ ಜ್ಞಾನ ಮತ್ತು ಅನುಸಂಧಾನಗಳು ವೀರಶೈವ ದರ್ಶನದಲ್ಲಿ ಅತ್ಯಂತ ಪ್ರಾಮುಖ್ಯವೆನಿಸಿವೆ.

ಈ ಏಕೋತ್ತರ ಶತಸ್ಥಲದ ವಿಷಯವು ಸಿದ್ಧಾಂತ ಶಿಖಾಮಣಿ, ಏಕೋತ್ತರ ಶತಸ್ಥಲ (ವಚನ) ಮುಂತಾದ ಗ್ರಂಥಗಳಲ್ಲಿ ವಿಸ್ತಾರವಾಗಿ ವಿವೇಚಿಸಲ್ಪಟ್ಟಿದೆ.

ಪಾಶ್ಚಾತ್ಯ ವಿದ್ವಾಂಸರು, ಹಿಂದೂ ತತ್ವಜ್ಞಾನಿಗಳು ಜೀವನವು ದುಃಖ ಮಯವೆಂದು ಹೇಳುವುದನ್ನೂ, ಪ್ರಕೃತಿಯು ಸುಳ್ಳೆಂದು ವಾದಿಸುವುದನ್ನೂ, ವಿಷಯೋಪಭೋಗವುಬಂಧನಕಾರಿಯೆಂದುನಿರೂಪಿಸುವುದನ್ನೂ ಅಲ್ಲಗಳೆಯು ತ್ತಾರೆ. ಆದರೆ ಅವರು ವೀರಶೈವ ದರ್ಶನಕಾರರು ಲಿಂಗಭೋಗೋಪಭೋಗಿ ಯಾದವನವಿಷಯವನ್ನೂ,ಸುಖಾನುಭವವುಬಂಧನಕಾರಿಯಲ್ಲವೆಂಬುದನ್ನೂ, ಪರಮಾತ್ಮನ ಕಾರ್ಯರೂಪವಾದ ಜಗತ್ತು ಸತ್ಯವೆಂದು ವಾದಿಸುವುದನ್ನೂ, ಸಂಸಾರವು ಆನಂದಮಯವೆಂದು ಹೇಳುವುದನ್ನೂ, ಕೇಳಿದರೆ ನಿಜವಾಗಿಯೂ ಭಾರತೀಯತತ್ವಶಾಸ್ತ್ರಕ್ಕೆತಲೆಬಾಗುವರೆಂದು ಹೇಳಬಹುದು. ಆದುದರಿಂದಲೇ ವೀರಶೈವ ದರ್ಶನವು ಭಾರತೀಯ ದರ್ಶನ ಶಾಸ್ತ್ರವನ್ನು ಪರಿಪೂರ್ಣಗೊಳಿಸಿ ತೆಂದು ಕೆಲವು ಮಂದಿ ವಿಚಾರಪರರ ಅಭಿಪ್ರಾಯವಿದೆ.

ರೇಷ್ಮೆಯ ಹುಳುವು ತನ್ನ ಶರೀರದೊಳಗಣ ಅಂಟಿನಿಂದ ದಾರವನ್ನೂ, ತನ್ಮೂಲಕ ಗೂಡನ್ನೂ ಕಟ್ಟಿಕೊಂಡು ತನ್ನಿಂದಲೇ ಆದ ಆ ಬಂಧನದಲ್ಲಿ ತಾನು ಸಾಯುವಂತೆ ಪರಬ್ರಹ್ಮನೆಂಬ ಅಗ್ನಿಯ ವಿಸ್ಫುಲಿಂಗ ರೂಪನೆನಿಸಿದ ಜೀವನು ತನ್ನಿಂದಲೇ ನಿರ್ಮಾಣವಾದ, ಆಗಾಮಿ, ಸಂಚಿತ, ಪ್ರಾರಬ್ಧ ಕರ್ಮ ಪರಂಪರೆಗೆ ಸಿಕ್ಕಿ, ಜನನ ಮರಣಾತ್ಮಕ ಪ್ರವಾಹರೂಪವಾದ ಈ ಭವ ಮಾಲೆಯ ಜಂಜಡದಿಂದ ಬಹಳವಾಗಿ ಅನಂತಕಾಲ ತೊಳಲಿ ಬಳಲುವನು. ಅಂತಹ ಸ್ವಸ್ವರೂಪ ಜ್ಞಾನ ಶೂನ್ಯರೆನಿಸಿದ ಜೀವಿಗಳನ್ನು ಭಯಂಕರವಾದ ಆ ಭವಪಾಶದಿಂದ ನಿವೃತ್ತಿಮಾಡಲು ಕರುಣಾಳುಗಳಾದ ಪೂರ್ವಾಚಾರ್ಯರು ತಮತಮಗೆ ತಿಳಿದಂತೆ ಹೊಳೆದಂತೆ ಬೇರೆ ಬೇರೆ ಮತ ಸಿದ್ಧಾಂತಗಳನ್ನು ಬೋಧಿಸಿರುವರು. ಮಾನವ ಜನ್ಮದ ಜವಾಬ್ದಾರಿಯನರಿತವರೂ, ಮುಮುಕ್ಷುಗಳೂ ಆದ ಸಾಧಕರು ತಮತಮಗೆ ಉಚಿತಕಂಡ, ತಮ್ಮ ತಮ್ಮ ಅಭಿರುಚಿ ಮತ್ತು ಶಕ್ತಿಗಳಿಗೆ ಅನುಗುಣವಾದ, ಮತ ತತ್ವಗಳನ್ನು ಅನುಸರಿಸಿ ಕೃತಾರ್ಥರಾಗುವುದು ಅತ್ಯಾವಶ್ಯಕ. ಅಂತಹ ಉತ್ತಮವಾದ ಮತಗಳಲ್ಲಿ

ವೀರಶೈವ ಮತವೂ ಪರಿಗಣಿತವಾಗಿದೆ. ಈ ತತ್ವಜ್ಞಾನವು ದ್ವೈತ, ಅದ್ವೈತ, ಕರ್ಮ, ಜ್ಞಾನ ಮೊದಲಾದುವುಗಳನ್ನೆಲ್ಲ ತನ್ನಲ್ಲಿ ಸಮನ್ವಯ ಮಾಡಿಕೊಂಡು, ಮುಮುಕ್ಷುಗಳಿಗೆ ಸುಗಮವಾದ ಸಮನ್ವಯ ಮಾರ್ಗವನ್ನು ಕಲ್ಪಿಸಿಕೊಟ್ಟಿದೆ. ವೀರಶೈವ ಮತಾನುಯಾಯಿಗಳಿಗೆ ಅದರ ಸರಿಯಾದ ಅರಿವು ಆದ ಹೊರತು ಅವರು ತಮ್ಮ ಜೀವನವನ್ನು ಸಫಲಮಾಡಿಕೊಳ್ಳಲಾರರೆಂಬುದು ತಿಳಿದ ವಿಷಯವೇ ಆಗಿದೆ. ವೀರಶೈವ ವ್ರತಾಚರಣೆಯು 'ಖಡ್ಗಧಾರೆಯ ಮಧುವಿನೊಲ್' ಎಂದು ಚೆನ್ನಬಸವೇಶ್ವರ ಪುರಾಣದಲ್ಲಿ ಹೇಳಿರುವ ಮಾತು ಅಕ್ಷರಶಃ ಸತ್ಯವಾದುದು. ಕತ್ತಿಯ ಮೊನೆಯಲ್ಲಿರುವ ಜೇನುತುಪ್ಪವನ್ನು ನೆಕ್ಕಲಾಶಿಸುವ ಮನುಷ್ಯನು ಎಷ್ಟು ಎಚ್ಚರಿಕೆಯಿಂದ ಇರಬೇಕೋ ಹಾಗೆ, ಮತ್ತು ತನ್ನ ಪತಿಗಾಗಿ ಜೀವನವನ್ನು ಮೀಸಲು ಮಾಡಿದ ಸತಿ (ಪತಿವ್ರತೆ) ಹೇಗೆ ನಿಷ್ಠಳಾಗಿರಬೇಕೋ ಹಾಗೆ, ಶರಣಸತಿಯಾದ ವೀರಶೈವನು ಪತಿಯಾದ ಲಿಂಗದೇವನ ಬಗ್ಗೆ ಅಷ್ಟೊಂದು ನಿಷ್ಠೆಯಿಂದ ಇರಬೇಕೆಂದು ವೀರಶೈವಶಾಸ್ತ್ರ ಹೇಳಿದೆ. ಇಂತಹ ಸಂಯಮ ಜೀವನ ನಡೆಸಲು ತತ್ವಜ್ಞಾನದ ಅರಿವು ಅಗತ್ಯವಲ್ಲವೆ? ಈ ಲೇಖನವು ಅಂತಹ ಪಾರಮಾರ್ಥಿಕ ಪ್ರಯಾಣಿಕರಿಗೆ ಒಂದು ಕೈದೀಪವಾದರೆ ಅಷ್ಟೇ ಸಾಕು ಎಂಬುದು ನಮ್ಮ ಹೃದ್ಗತ.



# ಲಿಂಗಧಾರಣ ಮತ್ತು ಶಿವದೀಕ್ಷೆ

ಮಾನವರಿಗೆ ಸಾಮಾನ್ಯವಾಗಿ ಎರಡುಬಗೆಯ ಜೀವನಗಳು ಉಂಟೆಂದು ಹೇಳಬಹುದು. ಒಂದು ಧಾರ್ಮಿಕ; ಮತ್ತೊಂದು ಲೌಕಿಕ. ಮೊದಮೊದಲು ಮನುಷ್ಯ ಜಾತಿಯು ಲೌಕಿಕ ಜೀವನದ ಕಡೆಗೆ ಮನಸ್ಸನ್ನು ಕೊಟ್ಟು, ಕಡೆಗೆ ಅದರಿಂದುಂಟಾದ ಸುಖದುಃಖಗಳ ಪರಿಣಾಮವಾಗಿ ಪಾರಲೌಕಿಕ ಜೀವನದ ಕಡೆಗೆ ಮನಸ್ಸು ಮಾಡಿತೆಂದು ಊಹಿಸಬಹುದು. ಉದಾಹರಣೆಗಾಗಿ ಮಾನವನು ಲೋಕದಲ್ಲಿ ಹುಟ್ಟಿದ ಕೂಡಲೆ, ಶೈಶವ, ಬಾಲ್ಯ, ತಾರುಣ್ಯ-ಇತ್ಯಾದ್ಯವಸ್ಥೆಗಳಲ್ಲಿ ವಿಶೇಷವಾಗಿ ಲೌಕಿಕ ವಾಸನೆಗಳುಳ್ಳವನಾಗಿರುತ್ತಾ ನೆಂಬುದನ್ನು ನಾವು ಕಾಣುತ್ತಿದ್ದೇವೆ. ಕಡೆಕಡೆಗೆ ಜೀವನದ ಲಾಭನಷ್ಟಗಳೂ, ಮಾನಾಪಮಾನಗಳೂ, ರೋಗ ಭೋಗಗಳೂ, ಸಂಯೋಗ ವಿಯೋಗಗಳೂ ಅವನ ಮನಸ್ಸಿನ ಮೇಲೆ ಒಂದು ಬಗೆಯ ಪರಿಣಾಮವನ್ನುಂಟುಮಾಡಿ ಅವ ನನ್ನು ಧಾರ್ಮಿಕ ವಿಚಾರಗಳ ಕಡೆಗೆ ತಿರುಗಿಸುತ್ತವೆ. ವ್ಯಕ್ತಿಯ ಈ ವಿಚಾ ರವನ್ನೇ ಸಮಾಜಕ್ಕೂ, ಮಾನವ ಜಾತಿಗೂ ನಾವು ಅನ್ವಯಿಸಬಹುದು.

ಮಾನವ ಕುಲಕ್ಕೆ ಪಾರಮಾರ್ಥಿಕ ಜೀವನದ ಅವಶ್ಯಕತೆಯುಂಟೆಂಬು ದನ್ನು ಅನೇಕ ಸಾವಿರ ವರ್ಷಗಳ ಹಿಂದೆಯೇ ಲೋಕವು ಒಪ್ಪಿಕೊಂಡಿದೆ. ಮನುಷ್ಯನು ಹುಟ್ಟುವುದಕ್ಕಿಂತ ಮೊದಲಣ, ಆಮೇಲೆ ಬಾಳಿಬದುಕಿದ ನಂತರ ಸತ್ತಮೇಲಣ, ವಿಚಾರಗಳೇನೆಂಬುದನ್ನು ತರ್ಕಿಸಿದವರಿಗೆ ತತ್ವಜ್ಞಾನದ ಅರಿವು ಅವಶ್ಯಕತೆಯೂ ಸ್ಪಷ್ಟಗೊಳ್ಳುತ್ತದೆ. ಹೀಗೆ ಪಾರಮಾರ್ಥಿಕ ವಿಚಾರ ವನ್ನು ಜಗತ್ತಿನ ಎಲ್ಲ ಭಾಗದ ಜನಗಳೂ ಮಾಡಿರುವುದುಂಟು. ಆದರೆ ಮೊಟ್ಟ ಮೊದಲು ತತ್ವಜ್ಞಾನವು ಪ್ರಾಚೀನ ಭಾರತೀಯ ಮಹರ್ಷಿಗಳ ಮನಸ್ಸಿನಲ್ಲಿ ಸ್ಫುರಣಗೊಂಡಿತೆಂಬುದೂ, ಅವರ ಹೃದಯಾಂತರಾಳದಿಂದ ಹೊರಸೂಸಿದ ವೇದ, ಆಗಮ, ಉಪನಿಷತ್ತು, ದರ್ಶನಗಳು, ಗೀತೆಗಳು, ಮೊದಲಾದುವುಗಳೇ ಲೋಕದಲ್ಲಿ ತತ್ವಜ್ಞಾನಗ್ರಂಥಗಳ [illegible]ನಾದುವೆಂಬುದೂ ಇಲ್ಲಿ ನಾವು ನೆನಸಿ

ವೀರಶೈವ ಸಾಹಿತ್ಯ ಮತ್ತು ಇತಿಹಾಸ(ಭಾಗ-೧)

ಕನ್ನಡ ವಚನೋಪನಿಷತ್ ನಿರ್ಮಾಪಕರಾದ



ಮಹಾ ಶಿವಯೋಗಿನಿ ಅಕ್ಕಮಹಾದೇವಿಯವರು



ಉಡುತಡಿ

ನಲ್ಲಿಡಬೇಕಾದ ವಿಚಾರ. ಇದು ಭಾರತೀಯರಾದ ನಮಗೆ ಅಭಿಮಾನಪಡತಕ್ಕ ಸಂಗತಿಯಾಗಿದೆ.

'ಭಾರತೀಯರು ತತ್ವಜ್ಞಾನಪ್ರಧಾನವಾದ ಜೀವನವುಳ್ಳವರು. ಧರ್ಮ ವನ್ನು ಜೀವನಕ್ಕಿಂತ ಹೆಚ್ಚಾಗಿ ಪ್ರೀತಿಸತಕ್ಕವರು, ಎಂಬ ಒಂದು ಭಾವನೆ ಪಾಶ್ಚಾತ್ಯರಲ್ಲಿ ಮೂಡಿದೆ. ಅವರ ಈ ಭಾವನೆಯು ಕೇವಲ ಕಲ್ಪನೆಯಲ್ಲ. ಅದು ಭಾರತೀಯರಾದ ನಮ್ಮಲ್ಲಿ ನಿಜವಾಗಿಯೂ ಇರತಕ್ಕದ್ದೇ. ಆದರೆ ಈ ಬಿರುದನ್ನು ಮಾತ್ರ ಇಂದಿನ ಭಾರತೀಯರಾದ ನಾವು ಉಳಿಸಿಕೊಳ್ಳುವ ಸ್ಥಿತಿ ಯಲ್ಲಿಲ್ಲವೆಂಬುದೇ ವಿಷಾದಕರವಾದ ಸಂಗತಿ. ನಮ್ಮ ಪ್ರಾಚೀನರ ಉದಾತ್ತ ವಾದ ತತ್ವಜ್ಞಾನ ಮಾರ್ಗವು ಇಂದು ನಮ್ಮ ಜೀವನದಲ್ಲಿ ಅಳವಟ್ಟಿದ್ದರೆ ನಮ್ಮ ಭಾರತದೇಶಕ್ಕೆ ಪರಾಧೀನತೆಯಾಗಲಿ, ದಾರಿದ್ರ್ಯವಾಗಲಿ, ಬಂದೊದಗಲು ಕಾರಣವಿರಲಿಲ್ಲ. ಹೃದಯ ದೌರ್ಬಲ್ಯದಿಂದ ಕರ್ತವ್ಯ ವಿಮೂಢನಾದ ಅರ್ಜುನನನ್ನು ಹುರಿದುಂಬಿಸಿದುದು, ಅವನಿಂದ ಧರ್ಮ ಸಂಸ್ಥಾಪನೆಯನ್ನು ಮಾಡಿಸಿದುದು–ಮಹತ್ತಮವಾದ ಗೀತಾಗ್ರಂಥವೆಂಬುದೇ ಅಲ್ಲವೆ? ಅಂತಹ ಗೀತೆಯೂ ಅದರ ಉಪದೇಶಗಳೂ ಧರ್ಮಸ್ಫೂರ್ತಿಯನ್ನೂ ಉಂಟುಮಾಡಿ ಮಾನವಕುಲದ ಉದ್ಧಾರಮಾಡುತ್ತಿಲ್ಲವೆ ?

ಮೊದಮೊದಲು ಭಾರತೀಯರು ರಾಜಕೀಯ ಸ್ವಾತಂತ್ರ್ಯದಿಂದಲೂ, ವಿಚಾರ ಸ್ವಾತಂತ್ರದಿಂದಲೂ ಕೂಡಿದ್ದುದರಿಂದ, ಲೌಕಿಕ ಪಾರಲೌಕಿಕ ವಿಚಾರಗಳನ್ನು ಬಗೆಬಗೆಯಿಂದ ತರ್ಕಿಸುವುದರಲ್ಲಿ ಹೆಚ್ಚು ಕಾಲವನ್ನು ಕಳೆ ಯುತ್ತಿದ್ದರೆಂದು ತೋರುತ್ತದೆ. ನಮ್ಮ ನಾಡಿನ ಆ ಹಳೆಹಳೆಯ ಹಿರಿಯರ ವಿಚಾರದ, ಅನುಭವದ ಫಲವಾಗಿ ನಮ್ಮ ದೇಶದಲ್ಲಿ ಹಲವು ಮತಗಳೂ, ದರ್ಶನಗಳೂ, ಸಂಪ್ರದಾಯಗಳೂ ಹುಟ್ಟಲು ಕಾರಣವಾಯಿತು. ಈ ಎಲ್ಲ ಮತ ಸಂಪ್ರದಾಯಗಳೂ ಮೇಲೆಮೇಲೆ ಬೇರೆಬೇರೆ ಎಂಬಂತೆ ತೋರಿದರೂ ಅದರ ಬುನಾದಿಯೂ ಅದರ ಪರಮೋದ್ದೇಶವೂ ಒಂದೇ ಆಗಿದೆಯೆಂಬುದನ್ನು ಶ್ರೀ ರಾಮಕೃಷ್ಣ ಪರಮಹಂಸರು, ರಮಣಮಹರ್ಷಿಗಳು, ಅರವಿಂದಘೋಷರು, ಗಾಂಧಿ ಮಹಾತ್ಮರು ಇಂತಹ ಅನುಭವಿಗಳು ಮನಗಂಡು ಹೇಳಿದ್ದಾರೆ. ಈ

ಸಂದರ್ಭವನ್ನುಸ್ಪಷ್ಟಪಡಿಸುವುದಕ್ಕಾಗಿ ನಾವು ಸಂಗೀತ ಕಛೇರಿಯಲ್ಲಿ ಒಂದು ಆಶ್ಚರ್ಯಕರವಾದ ಸಂಗತಿಯನ್ನು ತಿಳಿದುಕೊಳ್ಳಬಹುದು; ಅದೇನೆಂದರೆ, ಅಲ್ಲಿ ನಮ್ಮ ಕಣ್ಣಿಗೆ ಕಾಣುವ,ಹಾಡುವವನು, ವೀಣೆಯುವನು, ಮೃದಂಗದವನು ವಿವಿಧ ವಾದ್ಯಗಳನ್ನು ನುಡಿಸುವವರು, ತಾಳ ಹಾಕುವವರು ಮೊದಲಾದವ ರೆಲ್ಲರೂ ನಮಗೆ ಬೇರೆಬೇರೆಯೆಂಬಂತೆ ಕಂಡರೂ, ಅಲ್ಲಿರುವ ವಾದ್ಯ ವಿಶೇಷ ಗಳು ಆಕಾರದಿಂದ ಸ್ವಭಾವದಿಂದ ಭಿನ್ನಭಿನ್ನವೆಂಬಂತೆ ತೋರಿದರೂ, ಅವು ಗಳೆಲ್ಲವೂ ಪರಿಣಾಮದಲ್ಲಿ ಒಂದೇ ಸ್ವರದಲ್ಲಿ. ಒಂದೇ ಗಾನ ಸುಖಕ್ಕಾಗಿ ಒಂದೆಡೆ ಕೂಡಿವೆಯೆಂಬುದನ್ನು ನೋಡಬಹುದು. ಮೇಳಗಾರರು ಬೇರೆ ಬೇರೆಯಾದರೂ, ವಾದ್ಯ ವಿಶೇಷಗಳು ಭಿನ್ನ ಭಿನ್ನವೆಂಬಂತೆ ತೋರಿದರೂ, ರಾಗಗಳು ಭಿನ್ನಭಿನ್ನವಾದರೂ,ಅವರೆಲ್ಲರ ಮತ್ತು ಅವೆಲ್ಲವುಗಳ ಪರಿಣಾಮವು ಸಂಗೀತ ಸುಖ ಅಥವಾ ನಾದಬ್ರಹ್ಮದ ಔಪಾಸನೆ ಎಂಬುದು ಇಲ್ಲಿ ನಾವು ಗ್ರಹಿಸಬೇಕಾದ ಸಂಗತಿಯಾಗಿದೆ. ನಮ್ಮ ಭಾರತದ ಪ್ರಾಚೀನ ದರ್ಶನಗಳೆಲ್ಲ ವನ್ನೂ ಈ ಬಗೆಯಿಂದ ಸಮನ್ವಯ ದೃಷ್ಟಿಯಿಂದ ವಿವರಿಸುವುದು ಅವಶ್ಯ ವೆಂದು ತಿಳಿಯುವುದೇ ವಿವೇಕಯುತ ಮಾರ್ಗವೆಂದು ಅನುಭವಿಗಳು ಹೇಳು ತ್ತಾರೆ.

ಹಿಂದೂದೇಶದಲ್ಲಿ ದ್ವೈತ, ಅದ್ವೈತ, ವಿಶಿಷ್ಟಾದ್ವೈತ, ಜೈನ, ಬೌದ್ಧ, ಚಾರ್ವಾಕ, ಸಾಂಖ್ಯ ಮೊದಲಾದ ಮತಗಳು ಹಲವು ಶತಮಾನಗಳಿಂದ ಪ್ರಸಿದ್ಧವಾಗಿವೆ. ವೀರಶೈವ ಅಥವಾ ಶಕ್ತಿವಿಶಿಷ್ಟಾದ್ವೈತ ಎಂಬ ಮತವೂ ಈ ಮೇಲೆ ಕಂಡ ದರ್ಶನಗಳಂತೆಯೇ ಒಂದು ಸ್ವತಂತ್ರವಾದ ತತ್ವಜ್ಞಾನವನ್ನೂ ಪರಂಪರೆಯನ್ನೂ ಉಳ್ಳದಾಗಿದೆ. ಎಲ್ಲ ತತ್ವಜ್ಞಾನಗಳೂ, ಜೀವ, ದೇವ ಮತ್ತು ಜಗತ್ತು ಇವುಗಳ ಸಂಬಂಧವನ್ನು ಕುರಿತು ವಿಚಾರಿಸುವಂತೆ ವೀರಶೈವ ದರ್ಶನವೂ ತನ್ನದೇ ಆದ ಒಂದು ಚರ್ಚೆಯನ್ನು ಬಹಳ ಚೆನ್ನಾಗಿ ನಡೆಸಿದೆ. ಅದರ ಪರಿಣಾಮವೇ ವೀರಶೈವ ದರ್ಶನ, ಮತ ಅಥವಾ ತತ್ವಜ್ಞಾನ ಎನಿಸಿ ಕೊಂಡಿದೆ. ಪ್ರಾಚೀನ ಭಾರತೀಯದರ್ಶನಗಳಲ್ಲಿ ಆಸ್ತಿಕ–ನಾಸ್ತಿಕ ಎಂಬೆರಡು ವಿಭಾಗಗಳುಂಟೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ದೇವರು ಮತ್ತು ವೇದ ಇವುಗಳನ್ನು ನಂಬತಕ್ಕ ಮತಗಳು ಆಸ್ತಿಕ ಮತಗಳೆಂದೂ,ಅವುಗಳನ್ನು

ನಂಬದವುಗಳು ನಾಸ್ತಿಕ ಮತಗಳೆಂದೂ ಪ್ರಾಚೀನರು ಅಭಿಪ್ರಾಯಪಟ್ಟಿದ್ದಾರೆ. ಆ ದೃಷ್ಟಿಯಿಂದ ನೋಡಿದರೆ, ದೇವರನ್ನು ನಂಬುವ ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಮತ್ತು ಶಕ್ತಿವಿಶಿಷ್ಟಾದ್ವೈತ ಮೊದಲಾದ ಮತಗಳು ಆಸ್ತಿಕ ಮತಗಳೆಂದೂ, ದೇವರೆಂಬ ತತ್ವದ ಅಸ್ತಿತ್ವವನ್ನೊಪ್ಪದ ಜೈನ, ಬೌದ್ಧ, ಚಾರ್ವಾಕ ಮತ್ತು ಸಾಂಖ್ಯ ಮತಗಳು ನಾಸ್ತಿಕ ಮತಗಳೆಂದೂ ಪರಿಭಾವಿಸಲ್ಪಡುತ್ತವೆ. ವೀರಶೈವ ಮತವು ದೇವರು, ಧರ್ಮ, ಜನನ, ಮರಣ, ಪಾಪ, ಪುಣ್ಯ ಮೊದಲಾದುವುಗಳನ್ನು ಅಂಗೀಕರಿಸುವುದರಿಂದಲೂ, ಅನುಭವಕ್ಕೆ ಸಮ್ಮತವಾದ ಶ್ರುತಿ, ಸ್ಮೃತಿ, ಪುರಾಣ, ದರ್ಶನ ಮೊದಲಾದುವುಗಳ ಪ್ರಾಮಾಣ್ಯವನ್ನು ಅಂಗೀಕರಿಸುವುದರಿಂದಲೂ, ಇದು ಆಸ್ತಿಕ ಮತಗಳ ಗುಂಪಿಗೆ ಸೇರತಕ್ಕದ್ದೆಂದು ನಾವು ಒಪ್ಪಿಕೊಳ್ಳಬೇಕಾಗುತ್ತದೆ.

ವೀರಶೈವ ಧರ್ಮದಲ್ಲಿ ನಿರೂಪಿಸಲ್ಪಟ್ಟಿರುವ 'ಲಿಂಗಧಾರಣ ಮತ್ತು ಶಿವದೀಕ್ಷೆ' ಎಂಬ ವಿಷಯಗಳನ್ನು ಕುರಿತು ಸಯುಕ್ತಿಕವಾಗಿಯೂ, ಸಶಾಸ್ತ್ರವಾಗಿಯೂ ಚರ್ಚಿಸುವುದೇ ಈ ಲೇಖನದ ಉದ್ದೇಶವಾಗಿದೆ. ವೀರಶೈವರಿಗೆ ಅಸಾಧಾರಣವಾದ ಧಾರ್ಮಿಕಲಾಂಛನವೆಂದರೆ ಲಿಂಗಧಾರಣ. ಈ ಜಗತ್ತಿನ ಮತ್ತಾವ ಮತೀಯರಲ್ಲಿಯೂ ಕಾಣದಿರುವ ಈ ಬಗೆಯ ಒಂದು ವೈಶಿಷ್ಟ್ಯವನ್ನು ಅವರು ಉಳ್ಳವರಾಗಿರುತ್ತಾರೆ. ವೀರಶೈವರು ಸಹಲಿಂಗಧಾರಿಗಳಾದುದರಿಂದಲೂ, ಅದು ಇವರ ಹೆಗ್ಗುರುತಾದುದರಿಂದಲೂ ಇವರನ್ನು ಲೋಕದಲ್ಲಿ 'ಲಿಂಗಧಾರಿ', 'ಲಿಂಗವಂತ', 'ಲಿಂಗಭಕ್ತ' ಮತ್ತು 'ಲಿಂಗಾಯತ' ಎಂಬ ಹೆಸರುಗಳಿಂದ ಕರೆಯುವ ವಾಡಿಕೆಯಿದೆ. ಆದರೆ ಈ ಪ್ರಸಂಗದಲ್ಲಿ ಒಂದು ಸ್ವಾರಸ್ಯವಾದ ಸಂಗತಿಯನ್ನು ನಾವು ಗಮನಿಸಬೇಕಾಗಿದೆ. ಲಿಂಗಧಾರಣವು ವೀರಶೈವರ ಮುಖ್ಯ ಚಿಹ್ನೆಯಾದರೂ, ಲಿಂಗಧಾರಿಗಳೆಲ್ಲರೂ ವೀರಶೈವರೆನಿಸುವುದಿಲ್ಲ. ಇದು ಚಮತ್ಕಾರವಾದ ಸಂಗತಿಯೇ ಸರಿ. ಯಾವನು ಶಿವದೀಕ್ಷಾ ಸಂಸ್ಕಾರದಿಂದ ಪರಿಶುದ್ಧನಾಗದೆ, ಲಿಂಗಧಾರಣ ವಿಧಿಯಿಂದ ಸಂಸ್ಕರಿಸಲ್ಪಡದೆ, ತನ್ನ ಮನಸ್ಸಿಗೆ ಬಂದಂತೆ ಲಿಂಗವೊಂದನ್ನು ಕಟ್ಟಿಕೊಂಡು ತಿರುಗುವನೋ, ಅವನು ಸಾಮಾನ್ಯ ಶೈವನೆನಿಸುವನು. ಬ್ರಾಹ್ಮ

ಣೋಚಿತವಾದ ಸಂಸ್ಕಾರಗಳಿಲ್ಲದೆ ಹಾಗೂ ಜನ್ಮತಃ ಬ್ರಾಹ್ಮಣನಲ್ಲದೆ ಕೇವಲ ಜನಿವಾರವನ್ನು ಹಾಕಿಕೊಳ್ಳುವ ಮಾತ್ರದಿಂದಲೇ ಹೇಗೆ ವ್ಯಕ್ತಿಯೊಬ್ಬನು ವೈದಿಕ ಬ್ರಾಹ್ಮಣನೆನಿಸಿಕೊಳ್ಳಲಾರನೋ, ಹಾಗೆಯೇ ಶಿವದೀಕ್ಷಾದಿ ಸಂಸ್ಕಾರ ಗಳೂ, ಅಷ್ಟಾವರಣ, ಪಂಚಾಚಾರ, ಷಟ್ಸ್ಥಲ, ಲಿಂಗಾಂಗ ಸಾಮರಸ್ಯ ಮೊದಲಾದ ಸಾಧನ ಸಂಪತ್ತುಗಳೂ ಇಲ್ಲದ ಸಾಧಕನು ವೀರ ಶೈವನೆನಿಸಲು ಅರ್ಹನೆನಿಸಿಕೊಳ್ಳಲಾರನು. ಅವನು ಸಾಮಾನ್ಯ ಶೈವನಾಗಿರ ಬಹುದು. ಅವನು ಕಟ್ಟಿಕೊಂಡ ಲಿಂಗವು ಕೇವಲ ಶಿಲಾಮಯ ಲಿಂಗವೇ ಹೊರತು ಸುಸಂಸ್ಕೃತವಾದ ಶಿವಲಿಂಗವಾಗಲಾರದು. ಶೈವಧರ್ಮವು ಭರತ ಖಂಡದಲ್ಲಿ ವೇದಕಾಲಕ್ಕಿಂತ ಪ್ರಾಚೀನವಾದುದೆಂದೂ, ಕಾಲಕ್ರಮದಲ್ಲಿ ಅದು ಅನೇಕಭಾಗಗಳಾಗಿ ಮುಂದುವರಿಯಿತೆಂದೂ ಚರಿತ್ರೆಯಿಂದ ಸಿದ್ಧವಾಗುತ್ತದೆ. ವೀರಶೈವವು ಶೈವಧರ್ಮದ ಒಂದು ಭಾಗ. ಶಿವಜ್ಞಾನಿಗಳ ಒಂದು ವಿಚಾರ ಕ್ರಾಂತಿಯ ಫಲ. ಶಿವಾಗಮಗಳು ಹೇಳುವ ಸಾಮಾನ್ಯಶೈವ, ಮಿಶ್ರಶೈವ, ಶುದ್ಧಶೈವ ಮೊದಲಾದ ಸಪ್ತ ಶೈವಗಳಲ್ಲಿ ಇದು ಅತ್ಯಂತ ಶ್ರೇಷ್ಠತಮ ವೆನಿಸಿದುದು.

ದೇವರಿದ್ದಾನೆಂಬ ಭಾವನೆಯನ್ನು ಒಪ್ಪಿಕೊಂಡು, ಮೂರ್ತಿ ಪೂಜೆಯು ಹೊರಟದೆಯಷ್ಟೆ. ಆ ಮೂರ್ತಿ ಪೂಜೆಯಲ್ಲಿ ಹೆಚ್ಚು ಸುಧಾರಣೆಯನ್ನೂ ಸೌಲಭ್ಯವನ್ನೂ ಕಲ್ಪಿಸಿಕೊಳ್ಳುವುದೇ ಲಿಂಗಾಯತ ಧರ್ಮದ ಪರಮೋದ್ದೇಶ ವೆಂದು ತೋರುತ್ತದೆ. ದೇವಸ್ಥಾನವೊಂದರಲ್ಲಿ ಲಕ್ಷಾಂತರ ಜನರು ಪೂಜೆಗಾಗಿ ಹೋಗಿ ಗಡಿಬಿಡಿಯಲ್ಲಿ ಸಿಕ್ಕಿಕೊಳ್ಳುವುದನ್ನೂ, ದೇವಾಲಯಗಳ ನಿರ್ಮಾಣ ಕ್ಕಾಗಿ ಅವುಗಳ ರಕ್ಷಣೆಗಾಗಿ ಆಗುವ ಕಷ್ಟನಷ್ಟಗಳನ್ನೂ, ತೀರ್ಥಯಾತ್ರೆ ಗಳಿಂದಾಗುವ ತೊಂದರೆಗಳನ್ನೂ ನಾವು ಗಮನಿಸಿದರೆ, ಪ್ರತಿಯೊಬ್ಬನೂ ಹೆಚ್ಚು ವೆಚ್ಚವಿಲ್ಲದೆ, ಇನ್ನೊಬ್ಬರ ತೊಡಕಿಲ್ಲದೆ ತನ್ನ ಮನಬಂದಂತೆ ದೇವರನ್ನು ಸ್ವತಂತ್ರವಾಗಿ ಪೂಜಿಸಲು ಅನುಕೂಲವಾದ ಇಷ್ಟಲಿಂಗಧಾರಣ ಪದ್ಧತಿಯನ್ನು ಕಂಡುಹಿಡಿದವರು ಬಹಳ ಜಾಣರಾಗಿರಬೇಕೆಂಬುದು ವಿಚಾರವಂತರಿಗೆ ಹೊಳೆಯದಿರದು. ವೀರಶೈವರು ಪೂಜಿಸತಕ್ಕ ಶಿವಲಿಂಗವು ತತ್ವಜ್ಞಾನದ

ದೃಷ್ಟಿಯಿಂದಲೂ, ಸಾಧನ ಸೌಲಭ್ಯದ ದೃಷ್ಟಿಯಿಂದಲೂ, ಅತ್ಯಂತ ಶ್ಲಾಘನೀಯವೆನಿಸಿದೆ. ಶಿವಲಿಂಗದ ಆಕಾರವು ಗುಂಡಾಗಿಯೂ, ಅದರ ಬಣ್ಣವು ಶ್ಯಾಮಲವರ್ಣವುಳ್ಳುದಾಗಿಯೂ ಇರುವುದು ಅದರ ಈಶ್ವರೀ ಸಂಪತ್ತಿಗೆ ನಿದರ್ಶನವೆನಿಸಿದೆ. ಈ ಶ್ಯಾಮಲವರ್ಣದ ಲಿಂಗವು ಮನಸ್ಸನ್ನು ಏಕಾಗ್ರಗೊಳಿಸಲು ನೆರವಾಗುವುದೆಂದು ಕೆಲವು ವೈಜ್ಞಾನಿಕರ ಅಂಬೋಣವಿದೆ. ವೀರಶೈವ ಗ್ರಂಥಗಳು "ಏಕಂ ಸತ್ ವಿಪ್ರಾ ಬಹುಧಾ ವದಂತಿ" ಎಂಬ ಉಪನಿಷದ್ವಾಕ್ಯವನ್ನು ಬಹಳವಾಗಿ ಸಮರ್ಥಿಸುತ್ತವೆ. 'ದೇವರು ಒಬ್ಬನೇ' ಎಂಬುದು ಲಿಂಗವಂತರ ಭಾವನೆ. ಶ್ರೀ ಬಸವೇಶ್ವರನು 'ದೇವನೊಬ್ಬ ನಾಮ ಹಲವು. ದೇವನೊಬ್ಬನೇ ಕಾಣಿರೋ ಇಬ್ಬರೆಂಬುದು ಪುಸಿ' ಎಂದು ಹೇಳಿದ್ದಾನೆ. ಆ ದೇವರು ನಾಮರೂಪಗಳಿಗೆ ಅತೀತನೆಂದು ಶರಣರು ತಿಳಿಯುತ್ತಾರೆ. ಅವನಿಗೆ ಕೈಕಾಲು ಕಣ್ಣು ಮೂಗುಗಳು ಮೊದಲಾದ ಆಕಾರವನ್ನೂ, ಹೆಂಡತಿ ಮಕ್ಕಳು ಮೊದಲಾದ ಸಂಸಾರವನ್ನೂ ಅವರು ಕಲ್ಪಿಸುವುದಿಲ್ಲ. ಆದುದರಿಂದಲೇ ಅವನನ್ನು "ಪರಬ್ರಹ್ಮ" ಎಂಬ ಅರ್ಥವುಳ್ಳ "ಪರಶಿವಲಿಂಗ" ಎಂಬ ಅಂಕಿತದಿಂದ ಅವರು ಕರೆಯುತ್ತಾರೆ. "ಲಿಂಗ" ಎಂಬ ಈಶ್ವರ ವಾಚಕವಾದ ಈ ಹೆಸರು ಪರಬ್ರಹ್ಮನಿಗೆ ಬಹು ಪ್ರಾಚೀನ ಕಾಲದಿಂದ ರೂಢಿಯಲ್ಲಿದೆ ಎಂಬುದನ್ನು ವ್ಯಾಕರಣ ಶಾಸ್ತ್ರವು ಅನುಮೋದಿಸುತ್ತದೆ. ಒಟ್ಟಿನಲ್ಲಿ ಸಚ್ಚಿದಾನಂದರೂಪನೂ, ಜನನ ಮರಣರಹಿತನೂ, ಜಗತ್ಕರ್ತೃವೂ ಆದ ಭಗವಂತನೊಬ್ಬನೇ ಎಂದೂ, ಆತನು ಪುರಾಣೋಕ್ತರಾದ ತ್ರಿಮೂರ್ತಿಗಳಿಗಿಂತ ಅತೀತನೆಂದೂ, ಎಲ್ಲ ದರ್ಶನಗಳ ಗಮ್ಯಸ್ಥಾನವೂ ಶಿವಲಿಂಗ ಸ್ವರೂಪನಾದ ಆತನೊಬ್ಬನೇ ಎಂದೂ ವೀರಶೈವ ದಾರ್ಶನಿಕರು ಅಭಿಪ್ರಾಯಪಡುತ್ತಾರೆ. ಈ ವಿಚಾರದಲ್ಲಿ ಲಿಂಗದ ಕಲ್ಪನೆ ಮತ್ತು ದೇವರ ಭಾವನೆ ಇವು ವೀರಶೈವರಲ್ಲಿ ಹೇಗುಂಟೆಂಬುದಕ್ಕಾಗಿ ಕೆಲವು ಪ್ರಮಾಣವಚನಗಳನ್ನು ಮುಂದೆ ಉದಾಹರಿಸಲಾಗಿದೆ:

ಬ್ರಹ್ಮೇತಿ ಲಿಂಗಮಾಖ್ಯಾತಂ ಬ್ರಹ್ಮಣಃ ಪತಿರೀಶ್ವರಃ ।
ಪವಿತ್ರಂ ಶುದ್ಧಮಾಖ್ಯಾತಂ ತಸ್ಮಾತ್ ಸರ್ವಾತ್ಮ ಮುಮುಕ್ಷುಭಿಃ ॥

ಲಯಂ ಗಚ್ಛತಿಯತ್ರೈವ ಜಗದೇತಚ್ಚರಾಚರಂ ॥
ಪುನಃ ಪುನಸ್ಸಮುತ್ಪತ್ತಿಂ ತಲ್ಲಿಂಗಂ ಬ್ರಹ್ಮಶಾಶ್ವತಂ ॥
ತಸ್ಮಾಲ್ಲಿಂಗ ಮಿತಿಖ್ಯಾತಂ ಸತ್ತಾನಂದ ಚಿದಾತ್ಮಕಂ ।
ಬೃಹತ್ವಾದ್ಬೃಹ್ಮಣತ್ವಾಚ್ಚ ಬ್ರಹ್ಮಶಬ್ದಾಭಿಧೇಯಕಂ ॥
ಲಿಂಗಂತು ತ್ರಿವಿಧಂ ಪ್ರೋಕ್ತಂ ಸ್ಥೂಲಂ ಸೂಕ್ಷ್ಮಂ ಪರಾತ್ಪರಂ ।
ಇಷ್ಟಲಿಂಗ ಮಿದಂ ಸ್ಥೂಲಂ ಯದ್ಬಾಹ್ಯೇಧಾರಯೇತ್ತನಾ ॥

—ಲಿಂಗಧಾರಣಸ್ಥಲ, ಸಿದ್ಧಾಂತ ಶಿಖಾಮಣಿ.

"ಸ್ವಾಮಿ, ನೀನು ಶಾಶ್ವತನು ; ಎತ್ತಿದೆ ಬಿರಿದು ಜಗವೆಲ್ಲವರಿಯಲು" ಮಹಾದೇವ, ಮಹಾದೇವ ಇಲ್ಲಿಂದ ಮೇಲೆ ಶಬ್ದವಿಲ್ಲ. ಪಶುಪತಿ ಜಗಕ್ಕೆ ಏಕೋದೇವ. ಸ್ವರ್ಗಮರ್ತ್ಯ ಪಾತಾಳದೊಳಗೆ ಒಬ್ಬನೇ ದೇವ ಕೂಡಲ ಸಂಗಮದೇವ"

"ಶ್ರುತಿ ಅಗಮ್ಯ; ದ್ವಾದಶಾದಿತ್ಯನ ಪ್ರತಿಮ ತತ್ವನ ಪ್ರತಿಮ ಮಹಿಮಂಗೆ ಪ್ರತಿಯುಂಟೇ ? 'ಸೋಮಃ ಪವತೇ' ಎಂಬ ಶ್ರುತಿಯನರಿದು 'ಶಿವಏಕೋದೇವ ರುದ್ರೋ ನದ್ವಿತೀಯ' ನೆಂಬುದು ಕಾಣಿರಣ್ಣ."

"ಇಬ್ಬರು ಮೂವರು ದೇವರೆಂದು ಉಬ್ಬುಬ್ಬಿ ಮಾತನಾಡಬೇಡ. ದೇವನೊಬ್ಬನೇ ಕಾಣಿರೋ ; ಇಬ್ಬರೆಂಬುದು ಹುಸಿನೋಡಾ. ಕೂಡಲ ಸಂಗಮದೇವನೊಬ್ಬನೇ ಅಲ್ಲದೆ ಇಬ್ಬರಿಲ್ಲವೆಂದಿತ್ತು ವೇದ."

—ವಚನಶಾಸ್ತ್ರ ಸಾರ, (ಭಾಗ ೧, ಪುಟ ೨೬.)

"ಲಿಂಗಕ್ಕೆ ಕಡೆಯೆಲ್ಲಿ, ಲಿಂಗಿಲ್ಲದೆಡೆಯೆಲ್ಲಿ ?
ಲಿಂಗದೊಳು ಜಗವು ಅಡಗಿಹುದು, ಲಿಂಗವನು
ಹಿಂಗಿದವರುಂಟೆ—ಸರ್ವಜ್ಞ ॥"
"ಆಗಿಲ್ಲ ಹೋಗಿಲ್ಲ ಮೇಗಿಲ್ಲ ಕೆಳಗಿಲ್ಲ ।
ತಾಗಿಲ್ಲ ತಪ್ಪುತಡೆಯಿಲ್ಲ, ಲಿಂಗಕ್ಕೆ ।
ದೇಗುಲವೆ ಇಲ್ಲ—ಸರ್ವಜ್ಞ ॥"
"ಒಬ್ಬನಲ್ಲದೆ ಜಗಕೆ ಇಬ್ಬರುಂಟೇ ಮತ್ತೆ ।
ಒಬ್ಬ ಸರ್ವಜ್ಞ ಕರ್ತನೀ ಜಗಕೆಲ್ಲ ।
ಒಬ್ಬನೇ ದೈವ ಸರ್ವಜ್ಞ ॥"
"ಆದೇವ ಈದೇವ ಮೂದೇವನೆನಬೇಡ ।
ದೇವರ ದೇವ ಭುವನದಾ ಪ್ರಾಣಿಗಳಿ ।
ಗಾದವನೆ ದೇವ ಸರ್ವಜ್ಞ ॥"

ಸರ್ವಜ್ಞ ವಚನಗಳು—ಲಿಂಗ ಪದ್ಧತಿ ಮತ್ತು ದೈವ ಪದ್ಧತಿ.

"ಮಡಕೆಯೇ ದೈವವು ಮರದಲ್ಲಿಯು ದೈವವು
ಬೀದಿಯ ಕಲ್ಲೇ ದೈವವು ; ಹಣಿತೆ ದೈವವು ;
ಬಿಲ್ಲು ನಾರಿ ದೈವವು ಕಾಣಯ್ಯ ; ಕೊಳಗನೇ
ದೈವವು ; ಗಿಣಿಲು ದೈವವು ಕಾಣಿರಯ್ಯ ;
ದೈವ ದೈವವೆಂದು ಕಾಲಿಡಲಿಂಬಿಲ್ಲವು. ದೇವರೊಬ್ಬನೇ
ಕೂಡಲ ಸಂಗಮದೇವ"

—ಬಸವೇಶ್ವರ ವಚನ.

ನಾವು ಇದುವರೆಗೆ ಉದಹರಿಸಿದ ಮೇಲೆ ಕಂಡ ಗ್ರಂಥಗಳ ಪ್ರಮಾಣ ವಾಕ್ಯಗಳಿಂದ ವೀರಶೈವರ ದೇವರ ಕಲ್ಪನೆಯು ಎಂತಹ ಉದಾತ್ತವಾದು ದೆಂದೂ, ಅವರು ಉಪನಿಷತ್ತಿನ ಸಂಪ್ರದಾಯ ಹಿಡಿದು ಏಕೇಶ್ವರವಾದವನ್ನು ಹೇಗೆ ಪ್ರತಿಪಾದಿಸಿರುವರೆಂದೂ, ಹಿಂದೂ ಸಮಾಜದಲ್ಲಿ ಇಂದು ರೂಢಿ ಯಲ್ಲಿರುವ ಕ್ಷುದ್ರಮತಗಳ ಉಪಾಸನಾಮಾರ್ಗಗಳನ್ನು ಹೇಗೆ ಹೇಗೆ ಖಂಡಿ ಸಿರುವರೆಂದೂ ಸ್ಪಷ್ಟಗೊಳ್ಳುವಂತಿದೆ. ಇದರಿಂದ ವೀರಶೈವರು, ಹಿಂದೂ ಸಮಾಜದಲ್ಲಿ ಮತ್ತೊಮ್ಮೆ ಉಪನಿಷತ್ತಿನ ಉಜ್ವಲ ಸಿದ್ಧಾಂತವನ್ನು ಸ್ಥಿರ ಗೊಳಿಸಲು ಪ್ರಯತ್ನಿಸಿದರೆಂದು ಧಾರಾಳವಾಗಿ ಹೇಳಬಹುದಾಗಿದೆ.

ಇಂದು ನಮ್ಮ ಹಿಂದೂ ಸಮಾಜದಲ್ಲಿ ರೂಢಿಯಲ್ಲಿರುವ ಹಲವು ಧಾರ್ಮಿಕ ಭಿನ್ನಾಭಿಪ್ರಾಯಗಳಿಗೆ ದೇವರ ಕಲ್ಪನೆಯಲ್ಲಿರುವ ತರತಮ ಭಾವನೆಗಳೇ ಕಾರಣವೆನ್ನಬಹುದು. ಗುಡಿಗೋಪುರಗಳ ನಿರ್ಮಾಣ, ತೀರ್ಥ ಕ್ಷೇತ್ರಗಳ ಅಲೆದಾಟ, ಪೂಜಾರಿಗಳ ಪಾರುಪತ್ಯ, ಧರ್ಮಾಧಿಕಾರಿಗಳ ಉಪಟಳ, ಕ್ಷುದ್ರದೇವತೋಪಾಸನೆಗಳಿಂದಾಗುವ ಆತ್ಮನಾಶ ಮೊದಲಾದವು ಗಳನ್ನೆಲ್ಲ ಲಿಂಗವಂತರ ಲಿಂಗಧಾರಣ ಕ್ರಮವೂ, ಏಕೇಶ್ವರವಾದವೂ ನಿವಾರಣೆಮಾಡಲು ಸುಲಭವಾದ ಮತ್ತು ಶ್ರೇಷ್ಠವಾದ ಮಾರ್ಗವಾಗಿದೆ.

ವೀರಶೈವ ಧರ್ಮದಲ್ಲಿ ಲಿಂಗವು ಇಷ್ಟಲಿಂಗ, ಪ್ರಾಣಲಿಂಗ, ಭಾವ ಲಿಂಗವೆಂಬ ಮೂರು ಹೆಸರುಗಳಿಂದ ಪ್ರಸಿದ್ಧವಾಗಿದೆಯಷ್ಟೆ. ದೀಕ್ಷಾಕಾಲದಲ್ಲಿ ಶ್ರೀ ಗುರುವು ಶಿಷ್ಯನ ಸ್ಥೂಲ, ಸೂಕ್ಷ್ಮ, ಕಾರಣ ತನುಗಳನ್ನು ಸಂಸ್ಕರಿಸಿ,

ಅವುಗಳಲ್ಲಿ ಅನುಕ್ರಮವಾಗಿ ಇಷ್ಟಲಿಂಗ, ಪ್ರಾಣಲಿಂಗ ಮತ್ತು ಭಾವಲಿಂಗಗಳನ್ನು ಅನುಗೊಳಿಸುತ್ತಾನೆ. ಆದುದರಿಂದ ಲಿಂಗಧಾರಿಯಾದವನು ಕ್ರಿಯಾ ಪ್ರಧಾನವಾದ ಇಷ್ಟಲಿಂಗ ಪೂಜೆಯನ್ನೂ, ಯೋಗಪ್ರಧಾನವಾದ ಪ್ರಾಣಲಿಂಗ ಪೂಜೆಯನ್ನೂ, ಧ್ಯಾನಪ್ರಧಾನವಾದ ಭಾವಲಿಂಗ ಪೂಜೆಯನ್ನೂ ಮಾಡುವುದರ ಮೂಲಕ ತನ್ನ ಲಿಂಗಧಾರಣದ ಸಾರ್ಥಿಕ್ಯವನ್ನು ಹೊಂದಬೇಕಾಗುತ್ತದೆ.

ಸಾಧಕನ ಸೌಕರ್ಯಕ್ಕಾಗಿ ವೀರಶೈವ ಧರ್ಮ ತತ್ವಜ್ಞರು ಲಿಂಗ ತತ್ವವನ್ನು ಬಹು ಸೂಕ್ಷ್ಮ ರೀತಿಯಿಂದ ವಿವೇಚನೆ ಮಾಡಿದ್ದಾರೆ. ವೀರಶೈವರ ಕ್ರಿಯಾಪ್ರಧಾನವಾದ ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ಭಸ್ಮ, ರುದ್ರಾಕ್ಷ, ಮಂತ್ರ—ಎಂಬ ಈ ಅಷ್ಟಾವರಣಗಳಲ್ಲಿ ಒಂದಾದ ಲಿಂಗವು, ಜ್ಞಾನಪ್ರಧಾನವಾದ ಭಕ್ತ, ಮಾಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ—ಎಂಬ ಷಟ್ಸ್ಥಲಗಳಲ್ಲಿ ಅನುಸಂಧಾನ ಸೌಕರ್ಯಕ್ಕಾಗಿ ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮ ಲಿಂಗ, ಪ್ರಸಾದಲಿಂಗ ಮತ್ತು ಮಹಾಲಿಂಗ ಎಂಬ ಆರು ನಾಮಗಳಿಂದ ವಿಕಾಸಗೊಂಡಿದೆ. ಮುಖ್ಯವಾಗಿ ಲಿಂಗವಂತರನ್ನು "ಲಿಂಗ ಭೋಗೋಪ ಭೋಗಿ" "ಸರ್ವಾಂಗ ಲಿಂಗಿ" 'ಲಿಂಗ ಸ್ವರೂಪಿ' ಯನ್ನಾಗಿ ಮಾಡುವುದೇ ವೀರಶೈವ ಧರ್ಮದ, ಲಿಂಗಧಾರಣ ಮತ್ತು ಆದರ ವಿವರಣದ ಮುಖ್ಯೋದ್ದೇಶವೆಂದು ಹೇಳಬಹುದಾಗಿದೆ.

ಭಾರತದ ಸಕಲ ದರ್ಶನಗಳೂ ಜೀವ, ದೇವ ಜಗತ್ತು ಎಂಬ ಮೂರು ವಸ್ತುಗಳನ್ನು ಕುರಿತು ಬಗೆಬಗೆಯಿಂದ ಚರ್ಚಿಸಿವೆಯೆಂದು ಈ ಹಿಂದೆಯೇ ಹೇಳಲಾಗಿದೆ. ಜೀವನನ್ನು ದೇವನನ್ನಾಗಿಮಾಡುವುದು, ಹಾಗೆಯೇ ಜೀವನು ಬ್ರಹ್ಮನಾಗಲು ಪ್ರಕೃತಿಯು ತಂದೊಡ್ಡುವ ಪಾಶವನ್ನು ತಪ್ಪಿಸಿಕೊಳ್ಳುವ ಉಪಾಯವನ್ನು ನಿರೂಪಿಸುವುದು—ಎಂಬಿವೇ ಎಲ್ಲ ತತ್ವಜ್ಞಾನಗಳ ಮುಖ್ಯೋದ್ದೇಶವೆಂದು ತೋರುತ್ತದೆ. ಆ ದೃಷ್ಟಿಯಿಂದ ವೀರಶೈವ ಧರ್ಮದ ಲಿಂಗಧಾರಣ ಪದ್ಧತಿಯು ಎಷ್ಟೊಂದು ದೊಡ್ಡ ಭಾವನೆಯಿಂದ ಪ್ರೇರೇಪಿತ

ವಾದುದೆಂಬುದನ್ನು ನಾವು ಇದುವರೆಗೆ ಹೇಳಿದ ವಿಚಾರಗಳಿಂದ ಸುಲಭವಾಗಿ ವಿಚಾರಪರರು ತಿಳಿಯಬಹುದಾಗಿದೆ.

ಶೈವಧರ್ಮವು ವೇದಕಾಲಕ್ಕಿಂತ ಮೊದಲನೆಯದಾದರೂ, ಆರ್ಯರು ಹಿಂದೂಸ್ಥಾನಕ್ಕೆ ಪ್ರವೇಶಮಾಡಿದ ಮೇಲೆ ವೇದದ ಪ್ರಾಬಲ್ಯವು ಈ ದೇಶದಲ್ಲಿ ಬಲಗೊಂಡ ಮೇಲೆ, ಆರ್ಯರ ವೇದ, ದ್ರಾವಿಡರ ಆಗಮ ಇವು ಪರಸ್ಪರ ಬಾಂಧವ್ಯವನ್ನು ಕಲ್ಪಿಸಿಕೊಂಡ ಮೇಲೆ, ಬಾದರಾಯಣನ ವೇದಾಂತ ಸೂತ್ರ, ಶ್ರೀಕೃಷ್ಣನ ಭಗವದ್ಗೀತೆ ಮತ್ತು ಪ್ರಾಚೀನಗಳಾದ ದಶೋಪನಿಷತ್ತುಗಳು ಪ್ರಸ್ಥಾನತ್ರಯಗಳೆಂದು ವಿಖ್ಯಾತಿಯನ್ನು ಪಡೆದ ಮೇಲೆ, ಭರತಖಂಡದ ಎಲ್ಲ ದರ್ಶನಗಳೂ ಒಂದಲ್ಲೊಂದು ರೀತಿಯಿಂದ ವೇದಕ್ಕೆ ತಲೆಬಾಗಬೇಕಾಯಿತು. ಕೇವಲ ವಿಚಾರ ಸ್ವಾತಂತ್ರ್ಯದಿಂದಲೂ, ಶೈವಧರ್ಮದ ಸ್ಫೂರ್ತಿಯಿಂದಲೂ, ಹೊರಹೊರಟ ವೀರಶೈವ ಧರ್ಮವು ಮತ್ತುಳಿದ ದರ್ಶನಗಳಂತೆಯೇ ವೇದದ ಬಾಂಧವ್ಯವನ್ನು ಗಂಟುಹಾಕಿಕೊಂಡದ್ದನ್ನು ನಾವು ಆ ಮತದ ಚರಿತ್ರೆಯಿಂದ ತಿಳಿಯಬಹುದಾಗಿದೆ. ಮೂರ್ತಿ ಪೂಜೆಯೇ ಇಲ್ಲದ ಈ ವೇದದಲ್ಲಿ ಲಿಂಗ ಧಾರಣಕ್ಕೆ ಪ್ರಾಮಾಣ್ಯವನ್ನು ಹುಡುಕಲು ಹೋಗುವುದು ಸಾಹಸದ ಮಾತೇ ಸರಿ. ವೈದಿಕರ ಶ್ರದ್ಧಾಪ್ರಧಾನವಾದ ಮಾತುಗಳಿಗೆ ಕಿವಿಗೊಟ್ಟು ವೀರಶೈವ ಪ್ರಾಚೀನ ಪಂಡಿತರು ವೀರಶೈವ ಮತದ ಪ್ರಾಚೀನತೆಯನ್ನು ವೇದದಷ್ಟು ಪೂರ್ವಕ್ಕೆ ಒಯ್ಯಲು ಹವಣಿಸಿದರು. ಲಿಂಗಧಾರಣವು ವೇದ ಸಮ್ಮತವೆಂದು ಸಾಧಿಸಿದರು. ಅವರ ಅತುಲವಾದ ಪಾಂಡಿತ್ಯ ಮತ್ತು ಪ್ರತಿಭೆಗಳ ಫಲವಾಗಿ ವೀರಶೈವ ಮತವು ವೈದಿಕ ಮತಗಳ ಗುಂಪಿಗೆ ಸೇರಿದ್ದೆಂದು ವಿದ್ವಾಂಸರು ಸಮ್ಮತಿಸಿದರು. ಈ ವಿಷಯಗಳನ್ನೆಲ್ಲ ಲಿಂಗಧಾರಣ ಚಂದ್ರಿಕೆ, ಶ್ರೀಕರ ಭಾಷ್ಯ, ಸಿದ್ಧಾಂತಶಿಖಾಮಣಿ, ಧರ್ಮಶಿರೋಮಣಿ, ಕ್ರಿಯಾಸಾರ, ಶ್ರುತಿಸಾರ ಭಾಷ್ಯ, ಶಿವಾದ್ವೈತ ಮಂಜರಿ, ವೀರಶೈವಾನಂದ ಚಂದ್ರಿಕೆ, ಬಸವರಾಜೀಯ ಮೊದಲಾದ ಪ್ರಾಚೀನ ಗ್ರಂಥಗಳಿಂದ ಮನಗಾಣ ಬಹುದು.

ಲಿಂಗಧಾರಣದ ವಿಚಾರವನ್ನು ಕುರಿತು ಮಾತನಾಡುವಾಗ ನಾವು ಶಿವ ದೀಕ್ಷೆಯ ವಿಚಾರವನ್ನು ಮನನಮಾಡಿಕೊಳ್ಳುವುದು ಅತ್ಯವಶ್ಯವೆನಿಸಿದೆ.

ಏಕೆಂದರೆ ಅವೆರಡಕ್ಕೂ ನಿಕಟವಾದ ಸಂಬಂಧವಿದೆ. ವೀರಶೈವರು ವೈದಿಕರ ಷೋಡಶಕರ್ಮಗಳಲ್ಲಿ ಶ್ರಾದ್ಧಾದಿ ಷಟ್ಕರ್ಮಗಳನ್ನು ಬಿಟ್ಟು, ನಾಮಕರಣ, ಲಿಂಗಧಾರಣ, ವಿವಾಹ, ಶಿವದೀಕ್ಷೆ (ಉಪನಯನ) ಮೊದಲಾದ ದಶ ಸಂಸ್ಕಾರಗಳನ್ನು ಅಂಗೀಕರಿಸಿದ್ದಾರೆ. ಈ ವಿಚಾರವು ಶಿವಾಗಮಗಳಲ್ಲಿ ಸ್ಪಷ್ಟಗೊಂಡಿದೆ. ಜನ್ಮತಃ ವೀರಶೈವನೆನಿಸಿದವನಾಗಲಿ, ಜಿಜ್ಞಾಸುತಾಬುದ್ಧಿಯಿಂದ ವೀರಶೈವ ಮತವನ್ನು ಸ್ವೀಕರಿಸಬೇಕೆಂಬ ವೀರಶೈವೇತರರಿಗಾಗಲಿ,- ಇವರೀರ್ವರಿಗೂ ಶಿವದೀಕ್ಷಾ ಸಂಸ್ಕಾರವು ಅತ್ಯವಶ್ಯವೇ ಸರಿ. ವೀರಶೈವ ಧರ್ಮದಲ್ಲಿ ಶಿವದೀಕ್ಷೆಗೆ ಅತ್ಯಂತ ಮಹತ್ವ ಕೊಡಲ್ಪಟ್ಟಿದೆ. ಈ ಶಿವದೀಕ್ಷೆಯು ಮಾನವನ ಜನನ ಮರಣಕ್ಕೆ ಕಾರಣೀಭೂತವಾದ ಆಣವಮಲ, ಮಾಯಾ ಮಲ, ಕಾರ್ಮಿಕ ಮಲಗಳೆಂಬ ಮಲತ್ರಯಗಳನ್ನು ನಾಶಮಾಡಿ; ಜೀವನನ್ನು ಪರಿಶುದ್ಧಗೊಳಿಸಿ ಅವನಿಗೆ ಶಿವಾರ್ಚನಾಧಿಕಾರವನ್ನುಂಟುಮಾಡಿ ಕೊಡುತ್ತದೆ.

"ಯಥಾಮೃಗಪತಿಂದೃಷ್ಟ್ವಾ ವಧಾಭೀತೋವನೇ ಗಜಃ |
ಅದೀಕ್ಷಿತೋರ್ಚಯಾಲ್ಲಿಂಗಾತ್ ತಥಾಭೀತೋ ಮಹೇಶ್ವರಃ ||"

ಎಂದು ಮಹಾತ್ಮನಾದ ಕೆರೆಯ ಪದ್ಮರಸನು ತನ್ನ ದೀಕ್ಷಾಬೋಧೆ ಎಂಬ ಗ್ರಂಥದಲ್ಲಿ ಶಿವಾಗಮಗಳ ಅಭಿಪ್ರಾಯವನ್ನು ನಿರೂಪಿಸಿದ್ದಾನೆ. ಇದರ ತಾತ್ಪರ್ಯವು ಶಿವದೀಕ್ಷೆಯಿಲ್ಲದೆ ವೀರಶೈವತ್ವ ಸಿದ್ಧಿಯಾಗಲಾರದೆಂಬುದೇ ಆಗಿದೆ. ಶಿವದೀಕ್ಷೆಯು, ಶಿಶುವು ಹುಟ್ಟಿದ ಎಂಟನೇ ವರ್ಷದಲ್ಲಿ ಆಗುವುದು ಉತ್ತಮವೆಂದೂ, ಹದಿನಾರು ವರ್ಷಗಳಿಗಾಗುವುದು ಮಧ್ಯಮವೆಂದೂ, ಅನಂತರ ಆಗುವುದು ಅಧಮವೆಂದೂ ವೀರಶೈವ ಧರ್ಮ ಗ್ರಂಥಗಳು ಸಾರಿ ಹೇಳುತ್ತವೆ. ಇಂದು ವೀರಶೈವ ಸಮಾಜದಲ್ಲಿ ಹಲವರು ದೀಕ್ಷಾಹೀನರಾಗಿರುವುದನ್ನು ನಾವುನೋಡುತ್ತಿದ್ದೇವೆ. ಇದು ನಿಜವಾಗಿಯೂ ದುಃಖಕರವಾದ ಸಂಗತಿಯೇ ಸರಿ. ಮತ್ತೆ ಕೆಲವರು ಲಿಂಗಧಾರಣವೇ ಶಿವದೀಕ್ಷೆಯೆಂದು ಭ್ರಾಂತಿಪಟ್ಟಿದ್ದಾರೆ. ಇದು ಆಶ್ಚರ್ಯಕರವಾದ ಸಂಗತಿಯೇ ಸರಿ. ಇದಕ್ಕೆಲ್ಲ ವೀರಶೈವ ಧರ್ಮದ ತಿಳಿವಳಿಕೆಯೂ ನಡೆವಳಿಕೆಯೂ ಹಲವು ಜನರಲ್ಲಿ ಇಲ್ಲದುದೇ ಕಾರಣವೆನಿಸಿದೆ.

ಶಿವದೀಕ್ಷೆಯಲ್ಲಿ ವೇಧಾ, ಕ್ರಿಯಾ, ಮನು ಎಂಬ ಮೂರು ಭಾಗಗಳಿವೆ. ಗುರುವು ಶಿಷ್ಯನ ತಲೆಯ ಮೇಲೆ ಹಸ್ತವಿಟ್ಟು ಅನುಗ್ರಹಿಸುವುದು ವೇಧಾದೀಕ್ಷೆಯೆಂದೂ, ಶಿಷ್ಯನ ಬಲಗಿವಿಯಲ್ಲಿ ಪ್ರಣವ ಪಂಚಾಕ್ಷರಿಯನ್ನು ಉಪದೇಶ ಮಾಡುವುದು ಮಂತ್ರದೀಕ್ಷೆಯೆಂದೂ, ಶಿಷ್ಯನ ವಾಮಹಸ್ತಕ್ಕೆ ಲಿಂಗವನ್ನು ಅನುಗ್ರಹಿಸುವುದು ಕ್ರಿಯಾದೀಕ್ಷೆಯೆಂದೂ ಹೇಳಲ್ಪಡುತ್ತದೆ. ಈ ಶಿವದೀಕ್ಷೆಯ ಕಾಲದಲ್ಲಿ ಶ್ರೀ ಗುರುವು ತನ್ನ ಮಂತ್ರಶಕ್ತಿಯಿಂದಲೂ, ತಪಶ್ಶಕ್ತಿಯಿಂದಲೂ ಶಿಷ್ಯನನ್ನು ಬಹು ಜನ್ಮಗಳಿಂದ ಅನುಸರಿಸಿಕೊಂಡು ಬಂದಿರುವ ಮಾತಾಪಿತೃ ಸುತರೆಂಬ ಭಾವನೆಯ ಆಣವಮಲವನ್ನೂ, ಕುಲ, ಜಾತಿ, ಗೋತ್ರಗಳ ಭ್ರಾಂತಿಯಿಂದ ಕೂಡಿದ ಮಾಯಾ ಮಲವನ್ನೂ, ಕಾಣುವ ಧನ ಧಾನ್ಯ ಗೃಹಾರಾಮಗಳ ಮೋಹದಿಂದ ಕೂಡಿದ ಕಾರ್ಮಿಕ ಮಲವನ್ನೂ ನಿವೃತ್ತಿ ಮಾಡುತ್ತಾನೆ. ಹೀಗೆ ಮಲತ್ರಯಗಳು ನಾಶವಾಗುವುದರಿಂದ ಶಿವ ದೀಕ್ಷಾಬದ್ಧನಾದ ಜೀವನು ಸುಸಂಸ್ಕೃತನಾಗಿ, ಪರಿಶುದ್ಧನಾದ ಜೀವ ಎಂಬ ಅರ್ಥವುಳ್ಳ 'ಅಂಗ' ಎಂಬ ಹೆಸರಿನಿಂದ ವ್ಯವಹರಿಸಲ್ಪಡುತ್ತಾನೆ. ಅವನು ತನ್ನ ಮತ ಸಂಪ್ರದಾಯದಂತೆ ನಡೆದು, ಲಿಂಗರೂಪಿ ಬ್ರಹ್ಮನನ್ನು ಸೇರಲು ಅಥವಾ ಸುವರ್ಣಾಲಂಕಾರ ನ್ಯಾಯದಂತೆ, ಅಲಂಕಾರವು ತನ್ನ ನಾಮರೂಪಗಳನ್ನು ಕಳೆದುಕೊಂಡು, ಸುವರ್ಣವಾದಂತೆ, ಮೇಲೆ ಹೇಳಿದ ಮಾರ್ಗದಲ್ಲಿ ನಡೆಯುವ ಅಂಗನು ಲಿಂಗಸ್ವರೂಪನೇ ಆಗುತ್ತಾನೆ.

ಶಿವದೀಕ್ಷಾ ಸಂಸ್ಕಾರದಲ್ಲಿ ಮತ್ತೊಂದು ಮಹತ್ವವಾದ ಸಂಗತಿಯಿದೆ. ಈ ಮಹತ್ವದ ಸಂಸ್ಕಾರವು ಜೀವನ ಪರಂಪರಾಗತವಾದ ಹಿಂದಣ ಜನ್ಮಗಳ ಕ್ಷುದ್ರಭಾವನೆಗಳನ್ನೆಲ್ಲಾ ನಾಶಮಾಡುತ್ತದೆ. ಆದುದರಿಂದ ಯಾವ ಜಾತಿಯವನಾದರೂ ಆಗಿರಲಿ, ಅಂಥವನು ಮುಮುಕ್ಷು ವಾಗಿದ್ದರೆ, ಅವನಿಗೆ ವೀರಶೈವ ದೀಕ್ಷೆಯನ್ನು ಕೊಡಬಹುದೆಂದೂ, ಅವನು ಪೂರ್ವ ಜಾತಿಯ ಭಾವನೆಯನ್ನು ದೀಕ್ಷಾನಂತರ ಇಟ್ಟುಕೊಳ್ಳಬಾರದೆಂದೂ, ವೀರಶೈವಸಿದ್ಧಾಂತವು ಹೇಳುತ್ತದೆ. ಈ ವಿಚಾರದಲ್ಲಿ ಕೆಲವು ಪ್ರಾಚೀನ ಗ್ರಂಥಗಳ ಪ್ರಮಾಣ ವಚನಗಳನ್ನು ಕೆಳಗೆ ಉದಾಹರಿಸಲಾಗಿದೆ.

"ಶಿವಸಂಸ್ಕಾರ ಯುಕ್ತೇಷು ಜಾತಿಭೇದೋ ನ ವಿದ್ಯತೇ ।।
ಕಾಷ್ಠೇಷು ವಹ್ನಿದಗ್ಧೇಷು ಯಥಾರೂಪಂ ನ ವಿದ್ಯತೇ ।।
ತಸ್ಮಾತ್ಸರ್ವ ಪ್ರಯತ್ನೇನ ಶಿವಸಂಸ್ಕಾರ ಸಂಯುತಃ ।।
ಜಾತಿಭೇದಂ ನಕುರ್ವೀತ ಶಿವಭಕ್ತೇ ಕದಾಚನ ।।"

—ಸಿದ್ಧಾಂತ ಶಿಖಾಮಣಿ, (ಪೂರ್ವಾಶ್ರಮ ನಿರಸನಸ್ಥಲ.)

"ಬ್ರಾಹ್ಮಣನಾಗಲಿ, ಕ್ಷತ್ರಿಯನಾಗಲಿ, ವೈಶ್ಯನಾಗಲಿ, ಆವಜಾತಿಯಲ್ಲಿ ಹುಟ್ಟಿದಾತನಾದರೂ ಆಗಲಿ; ಗುರುಕಾರುಣ್ಯವ ಪಡೆದು, ಅಂಗದಮೇಲೆ ಲಿಂಗವ ಧರಿಸಿದ, ಆಚಾರ ಸಂಪನ್ನ ಸತ್ಕ್ರಿಯನಾದ ಮಹಾತ್ಮನೇ ಮೂರುಲೋಕಕ್ಕೆ ಅಧಿಕಾರಿಯುನೋಡಾ ಅಖಂಡೇಶ್ವರಾ"

"ನೀರುಗಟ್ಟಿಕೊಂಡು ಮುತ್ತಪ್ಪುದಲ್ಲದೆ ಮುತ್ತು ನೀರಪ್ಪುದೇನಯ್ಯ? ಹಾಲು ಹೆಪ್ಪುಗೊಂಡು ತುಪ್ಪವಾಗುವುದಲ್ಲದೆ, ತುಪ್ಪ ಹಾಲಪ್ಪುದೇನಯ್ಯ? ಹೀನಜಾತಿಯಲ್ಲಿ ಜನಿಸಿದ ನರನು ಗುರುವಿನ ಕಾರುಣ್ಯದಿಂದ ಶಿವಜಾತಾ ಭರಣನಾದ ಬಳಿಕ ಮರಳಿ ನರನಪ್ಪನೇನಯ್ಯ ಅಖಂಡೇಶ್ವರಾ"

"ಪಟ್ಟವ ಕಟ್ಟಿದ ಬಳಿಕ ಲಕ್ಷಣವನರಸುವರೇನಯ್ಯಾ? ಲಿಂಗದೇವನ ಪೂಜಿಸಿ, ಕುಲವನರಸುವರೇನಯ್ಯ? ಕೂಡಲ ಸಂಗಮದೇವ ಭಕ್ತಕಾಯ ಮಮಕಾಯ ನೆಂಬುದಾಗಿ"

—ವಚನಶಾಸ್ತ್ರಸಾರ, (ಭಾಗ ೧. ಪುಟ ೭೩)

"ಜನ್ಮನಾ ಜಾಯತೇ ಶೂದ್ರಃ ಕರ್ಮಣಾದ್ವಿಜಉಚ್ಯತೇ ।।
ಇತೀಹ ಜನ್ಮನಾ ಶೂದ್ರೋ ದೀಕ್ಷಯಾ ಶಿವತಾಂವ್ರಜೇತ್ ।।
ಶಿವದೀಕ್ಷಾ ವಿಶುದ್ಧಸ್ಯ ಪೂರ್ವಜಾತಿರ್ನವಿದ್ಯತೇ ।
ಇತ್ಯಾಗಮ ಪ್ರಮಾಣೇನ ನಿಶ್ಚಿತಾರ್ಥೋಯಮಾಸ್ತಿಕೈಃ ।।"

—ಭಕ್ತ್ಯಾಧಿಕ್ಯ ರತ್ನಾವಳಿಃ, (ಪುಟ ೩೨)

ಮೇಲೆ ಉದಹರಿಸಿದ ಪ್ರಾಚೀನ ವಿದ್ವಾಂಸರ ವಚನಗಳು, ವೀರಶೈವರು ಶಿವ ದೀಕ್ಷೆಯಿಂದ ಆಣವಾದಿ ಮಲಗಳನ್ನು ಕಳೆದುಕೊಂಡು, ಮೋಕ್ಷಾಧಿಕಾರಿಗ ಳಾಗುವರೆಂದೂ, ಸ್ಪರ್ಶಮಣಿಯು ಸೋಂಕಿದ ಲೋಹವು ಭಂಗಾರವಾಗು ವಂತೆ ಶಿವದೀಕ್ಷೆಯಿಂದ ಸಂಸ್ಕೃತನಾದ ಜೀವನು ಶುದ್ಧನಾಗುವನೆಂದೂ, ಅವನ

ಪೂರ್ವಜಾತಿಯನ್ನು ಎತ್ತಿ ಮಾತನಾಡುವುದು ಸಮಂಜಸವಲ್ಲವೆಂದೂ, ಅದು ಕಾರಣವೇ ವೀರಶೈವರಲ್ಲಿ ವರ್ಣಾಶ್ರಮಗಳಿಗೆ ಅವಕಾಶವಿಲ್ಲವೆಂದೂ, ವೀರಶೈವ ಧರ್ಮವು ಜನ್ಮಪ್ರಾಧಾನ್ಯಕ್ಕಿಂತ ಗುಣಪ್ರಧಾನ್ಯತ್ವವನ್ನು ಹೆಚ್ಚಾಗಿ ಅಂಗೀಕರಿಸುವುದೆಂದೂ, 'ವರ್ಣಾನಾಂ ಕಿಂ ಪ್ರಯೋಜನಂ' ಎಂಬ ಆಗಮ ಸಿದ್ಧಾಂತವನ್ನು ವೀರಶೈವವು ಅನುಸರಿಸುವುದೆಂದೂ ಉಪದೇಶಿಸುತ್ತವೆ.

ಮುಖ್ಯವಾಗಿ ವೀರಶೈವರ ಹೆಗ್ಗುರುತಾದ ಲಿಂಗಧಾರಣ, ಆ ಮತದ ಮುಖ್ಯ ಸಂಸ್ಕಾರವಾದ ಶಿವದೀಕ್ಷೆ—ಇವುಗಳು, ಸಂಸಾರಪಾಶಬದ್ಧನಾದ ಜೀವನನ್ನು ಆಣವಾದಿ ಮಲಗಳಿಂದ ಬಿಡುಗಡೆಮಾಡಿ, ಜಗತ್ಕಾರಣ ಕರ್ತೃವಾದ ದೇವರ ಸನ್ನಿಧಿಗೆ, ಸರಳವೂ, ಸುಂದರವೂ ಆದ ಮಾರ್ಗದಿಂದ ಒಯ್ಯಲು ಸಹಾಯವಾಗಿವೆ ಎಂದು ಹೇಳಬಹುದು.

## ಲಿಂಗಧಾರಣದ ಪ್ರಾಚೀನತೆ

ಈ ಲೇಖನಕ್ಕೆ ಪೂರಕವಾಗಿ ಮತ್ತೊಂದು ವಿಚಾರವನ್ನು ನಾವು ಇಲ್ಲಿ ವಿಸ್ತರಿಸಲಿಚ್ಛಿಸುತ್ತೇವೆ. ಲಿಂಗಧಾರಣದ ಪ್ರಾಚೀನತೆ–ಎಂಬುದೇ ಆ ವಿಷಯ. ಶೈವಧರ್ಮವೂ, ತನ್ಮೂಲಕವಾದ ಲಿಂಗಪೂಜೆಯೂ ಅತ್ಯಂತ ಪ್ರಾಚೀನವೆಂಬುದೂ ವೇದಕಾಲಕ್ಕೆ ಮೊದಲಿನದೆಂಬುದೂ, ಹರಪ್ಪ ಮತ್ತು ಮೊಹೆಂಜೊದಾರೋ ಸಂಶೋಧನೆಗಳಿಂದ ಸ್ಪಷ್ಟಗೊಂಡಿದೆಯಷ್ಟೆ. ವೀರಶೈವ ಧರ್ಮದಲ್ಲಿ ಲಿಂಗಧಾರಣದ ಪ್ರಾಚೀನತೆಯನ್ನು ಹಿಂದಿನ ವಿದ್ವಾಂಸರು ಮತ್ತೊಂದು ಬಗೆಯಿಂದ ಚಿತ್ರಿಸಿರುವರೆಂಬುದನ್ನು ನಾವು ಇಲ್ಲಿ ಪರಿಶೀಲಿಸುವುದು ಅವಶ್ಯವಾಗಿದೆ. ವೀರಶೈವರು ತಮ್ಮ ಲಿಂಗಧಾರಣದ ಪ್ರಾಚೀನತೆಯನ್ನೂ, ಪವಿತ್ರತೆಯನ್ನೂ ಸಿದ್ಧಗೊಳಿಸುವ ಸಲುವಾಗಿ, ಉತ್ತಮ ಮಾರ್ಗವನ್ನು ಹಿಡಿದಿರುವರೆಂಬುದನ್ನು ನಾವಿಲ್ಲಿ ಮನಗಾಣಬಹುದಾಗಿದೆ.

ವಿಷ್ಣುಬ್ರಹ್ಮಾದಯೋದೇವಾಃ ಮುನಯೋಗೌತಮಾದಯಃ |
ಧಾರಯಂತಿ ಸದಾ ಲಿಂಗಂ ಉತ್ತಮಾಂಗೇ ವಿಶೇಷತಃ ||
ಲಕ್ಷ್ಮ್ಯಾದಿ ಶಕ್ತಯಸ್ಸರ್ವಾಃ ಶಿವಭಕ್ತಿ ವಿಭಾವಿತಾಃ |
ಧಾರಯಂತ್ಯಳಿಕಾಗ್ರೇಷು ಶಿವಲಿಂಗಮಹರ್ನಿಶಂ ||
ವೇದಶಾಸ್ತ್ರ ಪುರಾಣೇಷು ಕಾಮಿಕಾದ್ಯಾಗಮೇಷುಚ |
ಲಿಂಗಧಾರಣಮಾಖ್ಯಾತಂ ವೀರಶೈವಸ್ಯನಿಶ್ಚಯಾತ್ ||

ನಾವು ಮೇಲೆ ಉದಾಹರಿಸಿದ ಪ್ರಾಚೀನ ಗ್ರಂಥಗಳ ಅಭಿಪ್ರಾಯದ ಪ್ರಕಾರ, ವಿಷ್ಣು, ಬ್ರಹ್ಮ, ಇಂದ್ರ ಮೊದಲಾದ ದೇವತೆಗಳೂ, ಸಾನಂದ, ಪರಾಶರ, ಗೌತಮ ಮೊದಲಾದ ಋಷಿಗಳೂ, ರೇಣುಕ, ದಾರುಕ, ನಂದಿ, ಭೃಂಗಿ, ವೃಷಭ ಮೊದಲಾದ ಪ್ರಮಥರೂ ಶಿವಲಿಂಗ ಪೂಜಕರಾಗಿದ್ದರೆಂದೂ, ಆ ಶಿವಲಿಂಗಪೂಜೆಯ ಫಲವಾಗಿಯೇ ಅವರುಗಳಿಗೆ ಆ ದೇವತ್ವ, ಋಷಿತ್ವ ಗಳು ಪ್ರಾಪ್ತವಾದುವೆಂದೂ ಸಿದ್ಧವಾಗುತ್ತದೆ. ಮುಖ್ಯವಾಗಿ ಈ ಎಲ್ಲ ಗ್ರಂಥಕಾರರ ತಾತ್ಪರ್ಯವೂ ಲಿಂಗಧಾರಣವು ಪ್ರಾಚೀನವೂ, ಪವಿತ್ರವೂ, ವೇದಸಮ್ಮತವೂ ಅದುದೆಂಬುದನ್ನು ವ್ಯಕ್ತಪಡಿಸುವುದೇ ಆಗಿದೆಯೆಂದು ಹೇಳಬಹುದು.

ಭರತಖಂಡದ ಅತ್ಯಂತ ಪ್ರಾಚೀನಗಳಾದ, ಕಾಶಿ, ಕೈಲಾಸ, ರಾಮೇಶ್ವರ, ಶ್ರೀಶೈಲ, ಕೇದಾರ, ಗೋಕರ್ಣ, ಪಂಪಾ, ಮಹಾಕೂಟ ಮೊದಲಾದ ಕ್ಷೇತ್ರಗಳಲ್ಲಿ ನಾವು ಶಿವಲಿಂಗಗಳನ್ನು ಮಾತ್ರ ನೋಡಬಹುದಾಗಿದೆ. ಚರಿತ್ರೆಯ ದೃಷ್ಟಿಯಿಂದ ಆಧುನಿಕ ಕ್ಷೇತ್ರಗಳೆನಿಸಿದ, ಪಂಡರಾಪುರ, ಅನಂತ ಶಯನ, ಕೊಲ್ಲಾಪುರ, ತುಳಜಾಪುರಗಳಲ್ಲಿರುವ, ಶ್ರೀಪಾಂಡುರಂಗ, ಅನಂತಪದ್ಮನಾಭ, ಶ್ರೀ ಮಹಾಲಕ್ಷ್ಮೀ, ಶ್ರೀ ಭವಾನೀ,— ಈ ಮೂರ್ತಿಗಳ ತಲೆಯಮೇಲೆ ಶಿವಲಿಂಗಲಾಂಛನವಿರುವುದು ಲಿಂಗಧಾರಣದ ಪ್ರಾಚೀನತೆಗೂ ಶ್ರೇಷ್ಠತೆಗೂ ನಿದರ್ಶನವೆನಿಸಿದೆ. ಮುಖ್ಯವಾಗಿ ಇದುವರೆಗೆ ನಾವು ವಿವರಿಸಿದ ಎಲ್ಲ ವಿಚಾರಗಳಿಂದ ಲಿಂಗಧಾರಣ ಪದ್ಧತಿಯು ಪ್ರಾಚೀನವಾದುದೆಂದೂ, ಉದಾತ್ತವಾದ ತತ್ವದಿಂದ ಕೂಡಿದುದೆಂದೂ; ಶಿವದೀಕ್ಷೆಗೂ, ಲಿಂಗಧಾರಣಕ್ಕೂ ನಿಕಟವಾದ ಸಂಬಂಧವಿದೆಯೆಂದೂ, ಶಿವದೀಕ್ಷೆಯಿಲ್ಲದ ಲಿಂಗಧಾರಣವು ನಿಷ್ಪ್ರಯೋಜಕವೆಂದೂ, ವೀರಶೈವ ಧರ್ಮವು ಇಂತಹ ಉದಾತ್ತ ತತ್ವಗಳಿಂದ ಕೂಡಿದುದೆಂದೂ, ಅದರ ಹಿರಿಯತನಕ್ಕೂ ಇರುವಿಕೆಗೂ ಇವು ಸಾಕ್ಷಿಯೆನಿಸಿವೆಯೆಂದೂ ಸಿದ್ಧಾಂತವಾಗುತ್ತದೆ.

## ಲಿಂಗಧಾರಣ–ಶಿವದೀಕ್ಷೆಗಳು ಬೇರೆ ಬೇರೆಯೆ ?

ಲಿಂಗಧಾರಣ ಶಿವದೀಕ್ಷೆಗಳು ಒಂದೇ ಸಂಸ್ಕಾರವೆ ? ಬೇರೆ ಬೇರೆ ಸಂಸ್ಕಾರಗಳೆ ? ಎಂಬ ಬಗ್ಗೆ ಹಲವರಿಗೆ ಸಂಶಯವಿದೆ ಎಂದು ತೋರಿ ಬಂದಿದೆ. ಅವರ ಅನುಮಾನ ಪರಿಹಾರಕ್ಕಾಗಿ ಈ ಮುಂದೆ ಪ್ರಯತ್ನಿಸಲಾಗಿದೆ.

ವೀರಶೈವ ಶಿಶುವು ಜನಿಸಿದ ದಿನವೇ ಅದರ ಭವಿತ್ವನಿವಾರಣೆಗಾಗಿ ಲಿಂಗಧಾರಣ ನಡೆಯಬೇಕೆಂದೂ, ಶಿಶುವಿನ ಎಂಟನೇ ವರ್ಷದಲ್ಲಿ ಶಿವದೀಕ್ಷೆ ನಡೆಯಬೇಕೆಂದೂ ಧರ್ಮಗ್ರಂಥಗಳು ಹೇಳುತ್ತವೆ.

ಇತರ ಮತೀಯರು ವೀರಶೈವ ಧರ್ಮವನ್ನು ಸ್ವೀಕರಿಸುವ ಕಾಲದಲ್ಲಿ ಲಿಂಗಧಾರಣ ಮತ್ತು ಶಿವದೀಕ್ಷೆ ಇವೆರಡು ಸಂಸ್ಕಾರಗಳೂ ಒಟ್ಟಿಗೆ ನಡೆಯುತ್ತವೆ. ಹೀಗೆ ಅವು ಒಟ್ಟಿಗೆ ನಡೆಯುವುದಕ್ಕೆ ಆ ಧರ್ಮಾಪೇಕ್ಷಿಗಳಾದ ಆಗಂತುಕರು ವಯಸ್ಕರೂ ಪ್ರಬುದ್ಧರೂ ಆಗಿರುವ ಸೌಕರ್ಯವೇ ಕಾರಣ. ಆದರೆ, ಒಂದು ಮತದ ಸಂಪ್ರದಾಯವನ್ನು ನಿರ್ಣಯಿಸುವಾಗ ಆ ಧರ್ಮದಲ್ಲಿ ಹುಟ್ಟಿದ ವ್ಯಕ್ತಿಯು ಜನನ ಕಾಲದಿಂದ ಮರಣ ಪರ್ಯಂತವಾಗಿ ಹೇಗೆ ವರ್ತಿಸಬೇಕು ? ಯಾವ ಯಾವ ಸಂಸ್ಕಾರಗಳನ್ನು ಪಡೆದುಕೊಳ್ಳಬೇಕು ? ಎಂಬುದನ್ನು ತಿಳಿಸುವುದೇ ಶಾಸ್ತ್ರಜ್ಞರ ಸಂಪ್ರದಾಯ. ನಾವು ವೀರಶೈವ ಮತ ವಿಷಯವನ್ನು ಕೂಡ ಈ ದೃಷ್ಟಿಯಿಂದಲೇ ವಿಚಾರ ಮಾಡಬೇಕು.

ಈಗ ವೀರಶೈವ ಧರ್ಮದಲ್ಲಿ ಲಿಂಗಧಾರಣ ಮತ್ತು ಶಿವದೀಕ್ಷೆಗಳು ಭಿನ್ನ ಸಂಸ್ಕಾಗಳೆಂದು ನಾವು ಪ್ರಮಾಣ ಪೂರ್ವಕ ಸಿದ್ಧಪಡಿಸಿದರೆ ಈ ಬಗ್ಗೆ ಸಮಂಜಸವಾದ ಉತ್ತರವನ್ನು ಕೊಟ್ಟಂತಾಯಿತೆಂದು ನಂಬುತ್ತೇವೆ.

## ದಶಕರ್ಮಗಳು :—

೧. ವೀರಶೈವ ಧರ್ಮದಲ್ಲಿ ದಶಸಂಸ್ಕಾರಗಳು ಪ್ರಸಿದ್ಧವಾಗಿವೆ. ಗರ್ಭಾದಾನ, ಪುಂಸವನ, ಸೀಮಂತ, ಜಾತಕರ್ಮ, (ಲಿಂಗಧಾರಣ), ನಾಮಕರಣ, ಅನ್ನಪ್ರಾಶನ, ಉಪನಿಷ್ಕ್ರಮಣ, ಚೌಲ,ದೀಕ್ಷಾ, ವಿವಾಹ, ಎಂಬೀ ದಶಕರ್ಮಗಳು ಆಗಮ ಸಮ್ಮತವಾಗಿವೆ. ಪ್ರತಿಯೊಂದು ಸಮಾಜಕ್ಕೂ ಇಂತಹ ಸಂಸ್ಕಾರಗಳಿದ್ದೇ ಇವೆ. ಅದಕ್ಕಾಗಿಯೇ ವೀರಶೈವ ಧರ್ಮದ ಬುನಾದಿಯಾದ ೨೮ ಆಗಮಗಳು ಈ ದಶಸಂಸ್ಕಾರಗಳನ್ನು ಸ್ಪಷ್ಟವಾಗಿ ನಿರೂಪಿಸಿವೆ.

೨. ಈ ಹತ್ತು ಸಂಸ್ಕಾರಗಳನ್ನು ತಿಳಿಸುವ ಸಲುವಾಗಿ ಪೂರ್ವಾಚಾರ್ಯರಿಂದ, ವೇದ ಆಗಮ ಸಮ್ಮತವಾಗಿ ಲಿಂಗಧಾರಣ ವಿಧಿ, ದೀಕ್ಷಾವಿಧಿ,ವಿವಾಹ ವಿಧಿ ಮೊದಲಾದ ಶಾಸ್ತ್ರಗ್ರಂಥಗಳು ನಿರ್ಮಿತವಾಗಿ ಪ್ರಕಟವಾಗಿವೆ.

೩. ಮಗುವು ಹುಟ್ಟಿದ ಕೂಡಲೇ ಮಾಡುವ ಲಿಂಗಧಾರಣ ವಿಧಿಗೂ, ಎಂಟು ವರ್ಷದಲ್ಲಿ ಮಾಡುವ ದೀಕ್ಷಾವಿಧಿಗೂ ಹೆಸರಿನಿಂದಲೇ ಅಲ್ಲದೆ ವಿಧಾನ ದಿಂದಲೂ ಭಿನ್ನತೆಯಿದೆ. ಆದ್ದರಿಂದ ಇವು ಭಿನ್ನ ಭಿನ್ನ ಸಂಸ್ಕಾರಗಳೆಂದು ಸ್ವಯಂ ಸಿದ್ಧವಾಗಿವೆ.

೪. ಶಿವದೀಕ್ಷಾ ಭೇದಗಳಾದ ಆಜ್ಞಾ, ಉಪಮಾ, ಸ್ವಸ್ತಿ, ಕಾರೋಹಣ, ಕಲಶಾಭಿಷೇಕ, ವಿಭೂತಿಪಟ್ಟ, ಲಿಂಗಾಯತ, ಲಿಂಗಸ್ವಾಯತ ಎಂಬ ಸಪ್ತದೀಕ್ಷೆ ಗಳಲ್ಲಿ ಗುರುವು "ಹೇವತ್ಸ, ಸದಾಚಾರಾನ್ಪರಿತ್ಯಜ್ಯನಪ್ರವರ್ತಯ" ಇತ್ಯಾದಿ ಯಾಗಿ ಉಪದೇಶಿಸುತ್ತಾನೆ. ಹುಟ್ಟಿದ ಮಗುವಿಗೆ ಹೀಗೆ ಉಪದೇಶಿಸುವುದು ಅಸಂಭವ ಅಲ್ಲದೆ ಲೋಕಜ್ಞಾನಕ್ಕೆ ವಿರೋಧ.

೫. ವೇಧಾ, ಕ್ರಿಯಾ, ಮನು ಎಂಬ ದೀಕ್ಷಾತ್ರಯದಲ್ಲಿ, ಗುರುವು ಶಿಖಾಚಕ್ರದ ಚಿತ್ಕಲೆಯನ್ನು ತನ್ನ ಹಸ್ತಕ್ಕೆ ಆಕರ್ಷಿಸಿ ಅದನ್ನು ಶಿಷ್ಯನ ಮಂಡೆಯ ಮೇಲಿಟ್ಟು ಭಾವಲಿಂಗವನ್ನು ಕಾರಣ ತನುವಿನಲ್ಲಿ ನೆಲೆಗೊಳಿಸು ವುದೇ ವೇಧಾದೀಕ್ಷೆಯು.

ಶಿಷ್ಯನ ಕರ್ಣದಲ್ಲಿ ಶಿವಮಂತ್ರೋಪದೇಶ ಮಾಡಿ ಪ್ರಾಣಲಿಂಗವನ್ನು ಸೂಕ್ಷ್ಮದೇಹದಲ್ಲಿ ನೆಲೆಗೊಳಿಸುವುದೇ ಮನು ದೀಕ್ಷೆಯು.

ಸ್ಥೂಲದೇಹದಲ್ಲಿ, ಜನನ ಕಾಲದಲ್ಲಿ ಧಾರಣ ಮಾಡುವ ಇಷ್ಟಲಿಂಗ ದಲ್ಲಿ ಸುಪ್ತವಾಗಿರುವ ಶಿವಚಿತ್ಕಲೆಯನ್ನು ತನ್ನಮಂತ್ರ ಶಕ್ತಿಯಿಂದ ಅಭಿವ್ಯಕ್ತ ಮಾಡಿ ತ್ರಿವಿಧ ಲಿಂಗಗಳ ಸಾಮರಸ್ಯವನ್ನು ತಿಳಿಸುವುದೇ ಕ್ರಿಯಾ ದೀಕ್ಷೆಯು.

ಈ ತ್ರಿವಿಧ ದೀಕ್ಷೆಗಳಿಂದ ದೀಕ್ಷಿತನ, ಆಣವ, ಮಾಯಾ, ಕಾರ್ಮಿಕ ಮಲ ಗಳು ನಾಶವಾಗಿ, ಅವನು ಸ್ಪರ್ಶಮಣಿಯ ಸೋಂಕಿನಿಂದ ಕಬ್ಬಿಣವು ಚಿನ್ನ ವಾಗುವಂತೆ ಜೀವ ಭಾವವನ್ನು ಬಿಟ್ಟು ದೇವ ಭಾವವನ್ನು ಹೊಂದುವನು.

೬. "ದೀಕ್ಷಾವಿಧಿ" ಎಂಬ ಗ್ರಂಥವು ಹಲವು ಶತಮಾನಗಳ ಹಿಂದೆ ಬಸವ ಶಿವಾಚಾರ್ಯರೆಂಬ ಪ್ರಾಚೀನ ವೀರಶೈವ ಕವಿಗಳಿಂದ ಬರೆಯಲ್ಪಟ್ಟ

ಕ್ರಿ. ಶ. ೧೮೯೭ ರಲ್ಲಿ ಮೈಸೂರಿನಲ್ಲಿ ಕೈ॥ ವೀರಸಂಗಪ್ಪನವರಿಂದ ಪ್ರಕಟಿತವಾಗಿದೆ. ಅದನ್ನೇ ಕನ್ನಡ ಟಿಪ್ಪಣಿಯೊಡನೆ ಆಸ್ಥಾನ ವಿದ್ವಾನ್ ಕೈ॥ ಎನ್. ಆರ್. ಕರಿಬಸವ ಶಾಸ್ತ್ರಿಗಳು ೧೯೩೧ರಲ್ಲಿ ಪ್ರಕಟಿಸಿದ್ದಾರೆ. ಇತ್ತೀಚೆಗೆ ಹಲವು ಮಂದಿ ವಿದ್ವಾಂಸರು ದೀಕ್ಷಾವಿಧಿಗಳನ್ನು ಪ್ರಕಟಿಸುತ್ತಿದ್ದಾರೆ. ಅವನ್ನೆಲ್ಲಾ ಈ ವಿಷಯದಲ್ಲಿ ಆಸಕ್ತಿಯುಳ್ಳವರು ಓದಿ ಸಂಸ್ಕಾರಗಳ ರಹಸ್ಯವನ್ನೂ ಶಿವಧರ್ಮದ ನಿಜಸ್ವರೂಪವನ್ನೂ ತಿಳಿಯಬಹುದು.

೭. ದೀಕ್ಷಾವಿಧಿಗೆ ಭಿನ್ನವಾದ ಲಿಂಗಧಾರಣ ವಿಧಿಯೊಂದಿದೆ. ಇದನ್ನು ಬೆಂಗಳೂರು ಗುರುವಣ್ಣದೇವರ ಮಠಾಧ್ಯಕ್ಷರಾದ ಲಿಂಗೈಕ್ಯ ಶ್ರೀ ನಂಜುಂಡ ದೇಶಿಕೇಂದ್ರ ಸ್ವಾಮಿಗಳೂ, ಕೈ॥ ಮಹಾಂತಶಾಸ್ತ್ರಿಗಳೂ ಕನ್ನಡ ಟೀಕೆ ಟಿಪ್ಪಣಿಯೊಂದಿಗೆ ೧೯೨೭ರಲ್ಲಿ ಪ್ರಕಟಿಸಿರುತ್ತಾರೆ.

೮. ಲಿಂಗಧಾರಣವಿಧಿ, ದೀಕ್ಷಾವಿಧಿಗಳೆರಡೂ ಭಿನ್ನವಾಗಿರುವುದೇ ಈ ಸಂಸ್ಕಾರಗಳು ವಿಭಿನ್ನವೆಂದೂ ಭಿನ್ನಕಾಲೀನವೆಂದೂ ತಿಳಿಸುತ್ತದೆ.

೯. ಈಗಲೂ ವೀರಶೈವ ಸಮಾಜದಲ್ಲಿ ದೀಕ್ಷಾ ಸಮಾರಂಭಗಳು ಅಲ್ಲಲ್ಲಿ ಮಠಮಾನ್ಯಗಳಲ್ಲಿ ನಡೆಯುತ್ತಿವೆ. ಆ ಸ್ಥಳಗಳಲ್ಲೆಲ್ಲಾ ಲಿಂಗವಂತರ ಹುಟ್ಟಿದ ಶಿಶುಗಳು ದೀಕ್ಷೆ ಮಾಡಿಸಿಕೊಳ್ಳುವುದನ್ನು ನಾವು ನೋಡುತ್ತಿಲ್ಲ. ಅದಕ್ಕೆ ಬದಲಾಗಿ ಲಿಂಗಧಾರಿಗಳಾದ ಬಾಲಕರು, ತರುಣರು, ಸ್ತ್ರೀಯರು ದೀಕ್ಷಿತರಾಗುವುದನ್ನು ಕಾಣುತ್ತಿದ್ದೇವೆ.

೧೦. ಭರತಖಂಡದಲ್ಲಿ ಲಿಂಗಧಾರಿಗಳಾದ ಅದೆಷ್ಟೋ ಜನರಿದ್ದಾರೆ. ಆದರೆ, ಅವರೆಲ್ಲಾ ಲಿಂಗಾಯತ ಅಥವಾ ವೀರಶೈವರೆನಿಸಿಕೊಂಡಿಲ್ಲ. ಇದಕ್ಕೆ ಅವರು ಶಿವದೀಕ್ಷಾರಹಿತರಾಗಿರುವುದೇ ಕಾರಣ.

೧೧. ಲಿಂಗಧಾರಿಗಳಾದರೂ ಲಿಂಗಾಯತರಾಗದಿರುವ ಅನಂತ ಜನರನ್ನು ನಾವು ಪ್ರತ್ಯಕ್ಷ ನೋಡುತ್ತಿರುವುದರಿಂದ, ವೀರಶೈವ ಧರ್ಮದಲ್ಲಿ ಶಿವದೀಕ್ಷೆಯ ಮಹತ್ವ ಮತ್ತು ಅವಶ್ಯಕತೆ ಎಷ್ಟೆಂಬುದು ಸ್ಪಷ್ಟವಾಗುತ್ತದೆ.

೧೨. ಮೇಲೆ ಹೇಳಿದ ಲಿಂಗಧಾರಿಗಳೆಲ್ಲರೂ—ಅಂದರೆ ಈಗ ವೀರಶೈವ ಸಮಾಜದಲ್ಲಿ ಬಳಕೆಯಲ್ಲಿಲ್ಲದ ಅವರೆಲ್ಲರೂ ಲಿಂಗಾಯತರೇ ಆಗಿರುವರೆಂದು

ವಾದಕ್ಕಾಗಿ ಒಪ್ಪಿದರೂ ಅವರಲ್ಲಿ ಮತ್ತುಳಿದ ವೀರಶೈವ ಲಕ್ಷಣಗಳಿಲ್ಲದಿರುವು ದಕ್ಕೆ ಸಮಾಧಾನವೇನು? ಆದರೂ ಚಿಂತೆಯಿಲ್ಲ ಲಿಂಗವಿದ್ದರಾಯಿತು ಅನ್ನು ವುದಾದರೆ, ಹಲವು ವೀರಶೈವರಲ್ಲದ ಲಿಂಗಧಾರಿಗಳಲ್ಲಿ ಅನ್ಯಾಹಾರ ಪದ್ಧತಿ ಗಳಿರುವುದಕ್ಕೆ ಸಮಾಧಾನವೇನು? ವೀರಶೈವಧರ್ಮವು ಇದನ್ನೊಪ್ಪುತ್ತದೆಯೆ?

೧೩. ಇದನ್ನೆಲ್ಲಾ ಪರೀಕ್ಷಿಸಿದರೆ ವೀರಶೈವ ಧರ್ಮಕ್ಕೆ ಲಿಂಗಧಾರಣವು ಹೆಗ್ಗುರುತಾಗಿ ತೋರಿದರೂ ಸಾಮರಸ್ಯಕ್ಕೆ ಶಿವದೀಕ್ಷೆಯೇ ಮೂಲವೆಂದು ತೋರುವುದಿಲ್ಲವೆ? ವಿಚಾರಪರರು ಇದನ್ನು ಪರಿಶೀಲಿಸಲಿ.

೧೪. ಇದುವರೆಗೆ ನಾವು ಹೇಳಿದ ಈ ಎಲ್ಲ ಕಾರಣಗಳಿಂದ ಲಿಂಗ ಧಾರಣ ಮತ್ತು ಶಿವದೀಕ್ಷೆಗಳು ಭಿನ್ನ ಸಂಸ್ಕಾರಗಳೆಂದೂ ಭಿನ್ನಕಾಲೀನ ವೆಂದೂ ತೀರ್ಮಾನವಾಗುತ್ತದಲ್ಲವೆ?

೧೫. ವೀರಶೈವ ಧರ್ಮದಲ್ಲಿ ಲಿಂಗಧಾರಣದಂತೆಯೇ ಶಿವದೀಕ್ಷೆಯೂ ಅವಶ್ಯ ಹಾಗೂ ಅನಿವಾರ್ಯ. ಲಿಂಗಧಾರಣವು ಶಿಶು ಹುಟ್ಟಿದ ಕೂಡಲೇ ನಡೆಯುತ್ತದೆ. ಹಲವು ಸಂದರ್ಭಗಳಲ್ಲಿ ಗರ್ಭಿಣಿಗೆ ಎಂಟು ತಿಂಗಳಾದಾಗಲೇ ಗರ್ಭಸ್ಥ ಶಿಶುವಿಗಾಗಿ(ಗರ್ಭಿಣಿ ಹೆಣ್ಣುಮಗಳಿಗೆ)ಲಿಂಗಧಾರಣ ಮಾಡುತ್ತಾರೆ ವೀರಶೈವ ಗ್ರಂಥಗಳಲ್ಲಿ ಇದಕ್ಕೆ ಪ್ರಮಾಣವಿದೆ. ಆದರೆ, ಆ ಗರ್ಭಸ್ಥ ಶಿಶುವಿಗೆ ಶಿವದೀಕ್ಷೆ ಮಾಡುವ ಸಂಪ್ರದಾಯ ಮಾತ್ರ ಎಲ್ಲೂ ಇಲ್ಲ. ಸಾಧ್ಯವೂ ಇಲ್ಲ. ಇದರಿಂದ ಕೂಡ ಲಿಂಗಧಾರಣ, ಶಿವದೀಕ್ಷೆಗಳು ಭಿನ್ನ ಸಂಸ್ಕಾರಗಳೆಂ ಬುದು ಸಿದ್ಧವಾಗುತ್ತದೆ.

ಪ್ರತಿಯೊಬ್ಬ ಲಿಂಗವಂತನೂ ಶಿವದೀಕ್ಷೆಯನ್ನು ಪಡೆಯಲೇಬೇಕು. ಶಿವದೀಕ್ಷೆಯಿಲ್ಲದವನು ಲಿಂಗವಂತನೆನಿಸಲಾರನೆಂದು ಶಾಸ್ತ್ರಜ್ಞರು ಹೇಳಿ ದ್ದಾರೆ. ಶಿವದೀಕ್ಷಾದಿಗಳಿಲ್ಲದುದೇ ಸಮಾಜದ ಇಂದಿನ ಧಾರ್ಮಿಕ ಅವನತಿಗೆ ಬಹುಮಟ್ಟಿಗೆ ಕಾರಣವಾಗಿದೆ.

## ಶಿವದೀಕ್ಷೆಯ ಕಾಲ

ವೀರಶೈವ ಗ್ರಂಥಗಳಲ್ಲಿ ಲಿಂಗವಂತ ಶಿಶುವಿಗೆ ಗರ್ಭಾಷ್ಟಮ ಅಂದರೆ ಹುಟ್ಟಿದ ಎಂಟನೇ ವರ್ಷದಲ್ಲಿ ದೀಕ್ಷೆ ಮಾಡಿಸುವುದು ಉತ್ತಮವೆಂದೂ, ಹದಿ

ನಾರನೇ ವರ್ಷವು ಮಧ್ಯಮವೆಂದೂ, ಅನಂತರ ಅಧಮವೆಂದೂ ಹೇಳಿದೆ. ಪ್ರಾಯೇಣ ಎಂಟನೇ ವರ್ಷದ ದೀಕ್ಷೆಯೇ ಎಲ್ಲೆಲ್ಲೂ ರೂಢಿಯಲ್ಲಿದೆ. ಇನ್ನು ಈ ದೀಕ್ಷಾಕಾಲ ನಿರ್ಣಯದ ಬಗ್ಗೆ ಕೆಲವು ಪ್ರಾಚೀನ ಗ್ರಂಥಗಳ ಪ್ರಮಾಣ ಗಳನ್ನು ನೋಡೋಣ.

## ಗ್ರಂಥ ಪ್ರಮಾಣಗಳು

(೧) ಪ್ರಾರ್ಥಯೇದಗ್ರತಶ್ಶಿಷ್ಯಃ ಪ್ರಾಂಜಲಿರ್ವಿನಯಾನ್ವಿತಃ |
ಭೋ ಕಲ್ಯಾಣ ಮಹಾಭಾಗ ಶಿವಜ್ಞಾನ ಮಹಾನಿಧೇ ||

(ಸಿದ್ಧಾಂತ ಶಿಖಾಮಣಿ, ಗು. ಕಾ. ಸ್ಥಳ, ಪ. ೯)

ಶಿವದೀಕ್ಷೆಗೆ ಅರ್ಹನಾದ ಶಿಷ್ಯನು ಗುರುಸನ್ನಿಧಿಗೆ ಹೋಗಿ ಮೇಲಿನಂತೆ ಪ್ರಾರ್ಥಿಸಬೇಕೆಂದು ಸಿದ್ಧಾಂತ ಶಿಖಾಮಣಿಯಲ್ಲಿ ಹೇಳಿದೆ.

(೨) ಕ್ಷಾಳಯಿತ್ವಾ ಪೂರ್ವಜನ್ಮ ಮಲಪಂಕಮಶೇಷತಃ |
ಶ್ರೀ ವೀರಭಕ್ತಿ ದೀಕ್ಷಾದಿ ವಿಧಿನಾ ಮೋಕ್ಷದಾಯಿನಾ ||

(ಸಂಸ್ಕೃತ ಪಂಡಿತಾರಾಧ್ಯ ಚರಿತೆ. ದೀಕ್ಷಾ ಪ್ರಕರಣ. ಪ. ೪೪)

ಈ ಶ್ಲೋಕದಲ್ಲಿ ಶಿವದೀಕ್ಷೆಯು ವಿಧಿಗೆ ಅನುಗುಣವಾಗಿ ನಡೆಯಲೆಂದು ಹೇಳಿದೆ. ದೀಕ್ಷಾವಿಧಿಯಲ್ಲಿ ಹುಟ್ಟಿದ ಶಿಶುವಿಗೆ ದೀಕ್ಷೆನಾಡುವ ವಿಚಾರವಿಲ್ಲ ವೆಂಬುದನ್ನು ಹಿಂದೆಯೇ ಪ್ರಸ್ತಾಪಿಸಲ್ಪಟ್ಟಿದೆ.

(೩) ಆಣವಮಲ, ಮಾಯಾಮಲ, ಕಾರ್ಮಿಕಮಲ ಎಂಬ ಮಲತ್ರ ಯಂಗಳಂ ಕಳೆದು ಆಜ್ಞಾದೀಕ್ಷೆ, ಉಪಮಾದೀಕ್ಷೆ, ಸ್ವಸ್ತಿಕಾರೋಹಣ, ಕಳಶಾಭಿಷೇಕ, ವಿಭೂತಿಪಟ್ಟ, ಲಿಂಗಾಯತ, ಲಿಂಗಸ್ವಾಯತ ಈ ಏಳನ್ನು ಕಾಯಕ್ಕುಪದೇಶವಮಾಡುವುದು; ಸಮಯ,ನಿಸ್ಸಂಸಾರ,ನಿರ್ವಾಣ,ತತ್ವದೀಕ್ಷೆ, ಅಧ್ಯಾತ್ಮ,ಅನುಗ್ರಹ,ಸತ್ಯಶುದ್ಧ ಈ ಏಳನ್ನು ಪ್ರಾಣಕ್ಕುಪದೇಶಮಾಡುವುದು; ಏಕಾಗ್ರಚಿತ್ತ, ದೃಢವ್ರತ, ಇಂದ್ರಿಯಾರ್ಪಿತ, ಅಹಿಂಸೆ, ಲಿಂಗನಿಜ, ಮನೋ ಲಯ, ಸದ್ಯೋನ್ಮುಕ್ತಿ ಈ ಏಳನ್ನು ಮನಕ್ಕುಪದೇಶಮಾಡುವುದು; ಈ ಕ್ರಮ ವನರಿತು ಮಾಡುವುದು ಕೂಡಲ ಚನ್ನಸಂಗಯ್ಯನಲ್ಲಿ ಸಹಜ ದೀಕ್ಷೆಯಯ್ಯ

(ವಚನಶಾಸ್ತ್ರಸಾರ, ಭಾಗ ೩. ಪುಟ ೬)

ಈ ವಚನಕಾರನ ಅಭಿಪ್ರಾಯವು–ಆಗಮಸಮ್ಮತ ದೀಕ್ಷಾವಿಧಿಯಂತೆಯೇ ಇದೆ.

(೪) ಗರ್ಭಾಷ್ಟಮೇ ಕೃತಾದೀಕ್ಷಾ ಸಾ ದೀಕ್ಷಾ ಶೋಡಷಾವಧಿ।
ಗೌಣಾ ತದೂರ್ಧ್ವ ಮಧಮಾ ವೀರಶೈವಾನ್ವ ವಾಯಿನಾಂ ॥

(ಶಿವಾಗಮ)

ಈ ಶಿವಾಗಮ ವಾಕ್ಯದಲ್ಲಿ ಹುಟ್ಟಿದ ಎಂಟನೇ ವರ್ಷದಲ್ಲಿ ವೀರಶೈವನಿಗೆ ದೀಕ್ಷೆಯಾಗುವುದು ಉತ್ತಮವೆಂದೂ ಅನಂತರ ಗೌಣವೆಂದೂ ಸ್ಪಷ್ಟವಾಗಿ ಹೇಳಿದೆ. ಈ ಶ್ಲೋಕವು ಹಲವು ವೀರಶೈವ ಗ್ರಂಥಗಳಲ್ಲಿ ಪ್ರಮಾಣವಾಗಿ ಸ್ವೀಕರಿಸಲ್ಪಟ್ಟಿದೆ.

(೫) ದೀಕ್ಷಾ :–೮ ವರ್ಷಕ್ಕೆ ಮಾಡುವುದು ಉತ್ತಮ, ೧೬ ವರ್ಷಕ್ಕೆ ಮಧ್ಯಮ, ಅದರ ಮೇಲೆ ಮಾಡುವುದು ಕನಿಷ್ಟವೆಂದು ತಿಳಿಯಬೇಕು.

(ವೀರಶೈವ ಧರ್ಮಸಿಂಧು. ಪುಟ. ೨೦)

(೬) ಬಾಲರಜ್ಞರಿಗೆ ಸ್ತ್ರೀ ಲೋಲದ್ಯೂತಾಳಿಗಂ ।
ಕೇಳು ಸುರೆಮಾಂಸ ಭಕ್ಷಗೆ ವ್ಯಸನದೋಷಿಗಂ ।
ದೀಕ್ಷೆಯಿಂದೆಮಗೆ ಶಿವಶಿಕ್ಷೆಗಳಹವು ಮಗನೆ ।
ದೀಕ್ಷೆಯಿಂ ನರಕವಾಕ್ಷಣವಹುದು ಕೇಳ್ಮಗನೆ !
ಕೇಳು ಶಿವದೀಕ್ಷೆಗೆಂದ ಮಹದಾಜ್ಞೆಗಳ ।
ಆಳಲಾರೆವು ಮಗನೆ ನರಕ ಸಂದೋಹದೊಳು ।

ಸಾಕ್ಷಿ :—ಬಾಲಕಾಜ್ಞಾಶ್ಚಬುದ್ಧೇಶ್ಚ ವ್ಯಸನೇಶ್ಚಾತುರಸ್ಯಚ ।
ಪ್ರಾಣಲಿಂಗಂ ಪರಂದದ್ಯಾತ್ತದ್ಗುರುರ್ನರಕಂವ್ರಜೇತ್ ॥
ಮದ್ಯಪಾನೀ ಮಾಂಸಭಕ್ಷೀ ದ್ಯೂತ ವೇಶ್ಯಾಂಗನಾರತಃ ।
ಶಿವದೀಕ್ಷಾರತಂಪ್ರಾಪ್ತೇ ತದ್ಗುರುರ್ನರಕಂ ವ್ರಜೇತ್ ॥

(ದೀಕ್ಷಾಬೋಧೆ) A

A ಈ ಗ್ರಂಥ ಮುದ್ರಣವಾಗಿಲ್ಲ. ಇದರ ಹಸ್ತಪ್ರತಿ ಹಾಗೂ ಓಲೆಯ ಪ್ರತಿಗಳು ಶರಣ ಸಾಹಿತ್ಯ ಕಾರ್ಯಾಲಯದಲ್ಲಿವೆ. ಇದು ೪೦೦ ವರ್ಷಗಳ ಹಿಂದೆ ತೆಲುಗಿಗೆ ಭಾಷಾಂತರವಾಗಿ ಪ್ರಕಟವಾಗಿದೆ. ಆದರೆ ಕನ್ನಡದಲ್ಲಿನ್ನೂ ಪ್ರಕಟವಾಗದುಳಿದಿದೆ.

ವೀರಶೈವಧರ್ಮದ ತಿರುಳಾದ ಶಿವದೀಕ್ಷೆ ಮತ್ತು ಲಿಂಗಧಾರಣದ ಮಹತ್ವವನ್ನು ತಿಳಿಸುವ ಸಲುವಾಗಿ ಮಹಾತ್ಮ ಕೆರೆಯ ಪದ್ಮರಸರಿಂದ ಬರೆಯಲ್ಪಟ್ಟಿರುವ ದಿಕ್ಷಾಬೋಧೆಯಲ್ಲಿ ಎಂಥವರಿಗೆ ಶಿವದೀಕ್ಷೆಯನ್ನು ಮಾಡಬಾರದೆಂದು ಹೇಳುವ ಸನ್ನಿವೇಶದಲ್ಲಿ ಕೇವಲ ಬಾಲಕರಿಗೆ ದೀಕ್ಷೆಯನ್ನು ಮಾಡಬಾರದೆಂದು ಹೇಳಿದೆ. ಅಲ್ಲದೆ ಹೀಗೆ ಅಕ್ರಮದೀಕ್ಷೆ ಮಾಡಿದವರಿಗೆ ನರಕಪ್ರಾಪ್ತಿಯೆಂದು ಕೂಡ ಆ ಗ್ರಂಥಕಾರನು ಹೇಳಿದ್ದಾನೆ.

(೭) "ದೀಕ್ಷಾಕ್ರಮ :—ಅನಂತರದಲ್ಲಿ ಶಾಂತಿದಾಂತ್ಯಾದಿ ಸಾಧನ ಸಂಪನ್ನನಾಗಿ ಶ್ರೀ ಗುರುವಿನಿಂ ಶಾಸನೀಯನಪ್ಪುದರಿಂ ಶಿಷ್ಯನಾದಾತನು ಶುಭಕಾಲದೇಶಾದಿಗಳಂ ಪರೀಕ್ಷಿಸಿ.... ಬಳಿಕಾಚಾರ್ಯನ ಸಮೀಪಕ್ಕೆ ಬಂದು"

(ವಿವೇಕ ಚಿಂತಾಮಣಿ-ದೀಕ್ಷಾಕ್ರಮ.)

ಸಕಲಶಾಸ್ತ್ರ ವಿಶಾರದರಾದ ಶ್ರೀ ನಿಜಗುಣ ಶಿವಯೋಗಿಗಳು ತಮ್ಮ ಗ್ರಂಥದಲ್ಲಿ 'ದೀಕ್ಷಾಕ್ರಮ' ಎಂದು ಹೇಳುವಲ್ಲಿ ದೀಕ್ಷಾರ್ಹನಾದವನು ಶಿಶುವಲ್ಲ ಎಂಬುದನ್ನು ಮೇಲೆ ಹೇಳಿದಂತೆ ಸ್ಪಷ್ಟಪಡಿಸಿದ್ದಾರೆ.

(೮) ವೀರಶೈವ ಸಿದ್ಧಾಂತಕ್ಕೆ ಶಿರೋಮಣಿ ಪ್ರಾಯವಾದ ಶ್ರೀಕರ ಭಾಷ್ಯದಲ್ಲಿ A "ಗರ್ಭಾಷ್ಟಮವರ್ಷ ಪ್ರಯುಕ್ತ ಶಿವದೀಕ್ಷಾ ಸಂಸ್ಕಾರ ಸಿದ್ಧಶ್ರುತ್ಯರ್ಥೋಪದೇಷ್ಟೃ ದೇಶಿಕಮುಖೋದಿತ ನಿಯಮನಿಯತ ನಿಗಮಾರ್ಥ ಜ್ಞಾನಾವಚ್ಛಿನ್ನ ಶ್ರೋತ್ರೀಯಸ್ಯೈವ ಸ್ಥೂಲಾರುಂಧತೀನ್ಯಾಯೇನ ಧರ್ಮಜಿಜ್ಞಾಸಾದರ್ಶನೇ ಸ್ವಭಾವನಿಯಮನಿಯತ ಪ್ರಯೋಜಕತಯಾ ಯತ್ಪೂರ್ವಭಾವಿತ್ವಂ ವಿಧೀಯತೇ" ಎಂದು ಹೇಳಿದೆ.

ಶ್ರೀಕರ ಭಾಷ್ಯ (ಜಿಜ್ಞಾಸಾಧಿಕರಣ) ಪುಟ ೩.

ಅಂದರೆ ಹುಟ್ಟಿದ ಎಂಟನೇ ವರ್ಷದಲ್ಲಿ ಮಾಡಲೇಬೇಕಾದ ಶಿವದೀಕ್ಷಾ ಸಂಸ್ಕಾರದಿಂದ ಸಿದ್ಧನಾದವನೇ ವೇದಾಗಮಾದಿಗಳನ್ನು ಶ್ರೀ ಗುರುವಿನಮುಖ

A ಇಲ್ಲಿ 'ಗರ್ಭಾಷ್ಟಮ', ಎಂಬ ಶಬ್ದಕ್ಕೆ ಗರ್ಭದ ಎಂಟನೇ ತಿಂಗಳೆಂದು ಅರ್ಥ ಮಾಡಲವಕಾಶವಿಲ್ಲದಂತೆ ಭಾಷ್ಯಕಾರನು 'ಗರ್ಭಾಷ್ಟಮ ವರ್ಷ' ಎಂದು ಸ್ಪಷ್ಟವಾಗಿ ಹೇಳಿದ್ದಾನೆ.

ದಿಂದ ಅರಿಯಲು ಅರ್ಹನಾಗುತ್ತಾನೆ ಎಂದು ಹೇಳಿದೆ. ಇದರಿಂದ ಭಾಷ್ಯಕಾರನಾದ ಶ್ರೀಪತಿ ಪಂಡಿತನ ಅಭಿಪ್ರಾಯವು ಕೂಡ ಗರ್ಭಾಷ್ಟಮ ವರ್ಷದಲ್ಲಿಯೇ ವೀರಶೈವನಿಗೆ ಶಿವದೀಕ್ಷೆಯೆಂದು ಸಿದ್ಧವಾಗುತ್ತದೆ.

(೯) ವೀರಶೈವ ಸ್ಥಿತಾನಾಂಚ ಸ್ತ್ರೀಣಾಂ ಗರ್ಭಾಷ್ಟಮೇ ಗುರುಃ|
ಪಂಚಸೂತ್ರಕೃತಂ ಲಿಗಂ ಧಾರಯೇತ್ ವಿಧಿವಚ್ಛುಭಂ ||

(A. ವೀರಶೈವಾಚರ ಪ್ರದೀಪಿಕಾ, ಪುಟ. ೧೧. ಶ್ಲೋಕ ೮೩)

ಎಂದು ಹೇಳಿದೆ. ಇದೇ ಅರ್ಥವನ್ನೇ ವೀರಶೈವ ಸದಾಚಾರ ಸಂಗ್ರಹದಲ್ಲಿ

ವೀರಶೈವ ಸ್ಥಿತಾನಾಂತು ಮಾಸಿಗರ್ಭಾಷ್ಟಮೇ ಗುರುಃ |
ಪಂಚಸೂತ್ರಕೃತಂ ಲಿಂಗಂ ಧಾರಯೇತ್ ವಿಧಿವಚ್ಛುಭಂ|| B

(ವೀರಶೈವ ಸದಾಚಾರ ಸಂಗ್ರಹ. (ಜಾತಕರ್ಮ ಪ್ರಕರಣ) ಪುಟ ೮೧. ಶ್ಲೋಕ ೩.)

ಅಂದರೆ ವೀರಶೈವ ಧರ್ಮದಲ್ಲಿರುವ ಸ್ತ್ರೀಯರಿಗೆ ಗರ್ಭವಾದ ಎಂಟನೇ ತಿಂಗಳಲ್ಲಿ ಗುರುವು ವಿಧ್ಯುಕ್ತನಾಗಿ ಪಂಚಸೂತ್ರಘಟಿತವಾದ ಶಿವಲಿಂಗವನ್ನು ಧರಿಸಬೇಕೆಂದು ಹೇಳಿದೆ. ಅಲ್ಲದೆ ಇದೇ ಗ್ರಂಥದ ದೀಕ್ಷಾ ಪ್ರಕರಣದಲ್ಲಿ

ಗರ್ಭಾದಾನಾದಿ ಚೌಲಾಂತ ಕರ್ಮಭಿಃ ಸಂಸ್ಕೃತಂ ಸುತಂ |
ದೀಕ್ಷಯೇದುಪನೀತಂ ತಂ ಯಥಾಶಾಸ್ತ್ರಂ ಗುರೂತ್ತಮಃ ||೧||
ಗರ್ಭಾಷ್ಟಮೇಕೃತಾದೀಕ್ಷಾ ಮುಖ್ಯಾಸಾಷೋಡಶಾವಧಿಃ |
ಗೌಣಾತದೂರ್ಧ್ವ ಮಧಮಾ ವೀರಶೈವಾನ್ವಯಾಯಿನಾಂ ||೨||

ಅಂದರೆ ವೀರಶೈವನು ಹುಟ್ಟಿದ ಎಂಟನೇ ವರ್ಷದಲ್ಲಿಯೇ ಶಿವದೀಕ್ಷೆ ಹೊಂದುವುದು ಉತ್ತಮವೆಂದು ಹೇಳಿದೆ; ಮತ್ತು ಅದೇ ಗ್ರಂಥದಲ್ಲಿ "ಸುಪ್ತಾವಸ್ಥಾಸ್ಥಿತೇ ಅತಏವ ಗುರುಣಾ ಪುನರ್ದೀಕ್ಷಾಸಮಯೇ ಸ್ವಕರಕಮಲಪೂಜಿತೇ ತಸ್ಮಿನ್ ಲಿಂಗೇ ಶಿವಕಲಾ ಪ್ರತಿಷ್ಠಾ ನಿರೂಪ್ಯತೇ"(ವೀ. ಸ. ಸಂಗ್ರಹ. ಪು.೧೦೪

---

A ಈ ಶ್ಲೋಕದಲ್ಲಿ ಗರ್ಭಾಷ್ಟಮ ಅಂದರೆ ಗರ್ಭದ ಎಂಟನೇ ತಿಂಗಳೆಂದು ಅರ್ಥವಿದೆ.

B ಶ್ಲೋಕದಲ್ಲಿ 'ಮಾಸಿಗರ್ಭಾಷ್ಟಮ' ಎಂದು ಗರ್ಭದ ಎಂಟನೇ ತಿಂಗಳೆಂದು ಸ್ಪಷ್ಟವಾಗಿ ಹೇಳಿದೆ.

ಅಂದರೆ ಜನನಕಾಲದಲ್ಲಿ ವೀರಶೈವ ಶಿಶುವಿಗೆ ಧಾರಣಮಾಡುವ ಲಿಂಗದಲ್ಲಿ ಶಿವಕಲೆಯು ಸುಪ್ತಾವಸ್ಥೆಯಲ್ಲಿರುವುದೆಂದೂ ಮುಂದೆ ಶಿವದೀಕ್ಷಾ ಕಾಲದಲ್ಲಿ ಆ ಶಿಶುವಿನ ಲಿಂಗದಲ್ಲಿ ಸುಪ್ತಾವಸ್ಥೆಯಲ್ಲಿರುವ ಶಿವಕಲೆಯನ್ನು ಗುರುವು ಸಂಸ್ಕಾರ ವಿಶೇಷದಿಂದ ವಿಕಾಸಗೊಳಿಸುತ್ತಾನೆಂದೂ ಹೇಳಿದೆ. ಇದರಿಂದ 'ಲಿಂಗಧಾರಣವೇ ಬೇರೆ, ಶಿವದೀಕ್ಷೆಯೇ ಬೇರೆ' ಎಂಬುದು ಸಹಜವಾಗಿ ಸಿದ್ಧವಾಗುತ್ತದೆ.

(೧೦) ಇನ್ನು ವೀರಶೈವಾನ್ವಯ ಚಂದ್ರಿಕೆ (ಪುಟ. ೧೦೪) ಯಲ್ಲಿ ಜಾತಕರ್ಮ (ಲಿಂಗಧಾರಣ) ಉಪನಯನ ( ಶಿವದೀಕ್ಷೆ ) ಇವು ಬೇರೆ ಬೇರೆ ಎಂದು ಹೇಳಿದೆ.

(೧೧) ಇನ್ನು ಶಿವಾಗಮಗಳನ್ನು ಪರಿಶೀಲಿಸಿದಲ್ಲಿ

ಶಿವಾಂಗಮಿತಿ ಸಂಚಿಂತ್ಯ ಲಿಂಗಸಂಸ್ಕಾರ ಮಾಚರೇತ್ ।
ಲಿಂಗಂಹಸ್ತೇ ಗೃಹೀತ್ವಾತ್ ಭಾವದೃಷ್ಟ್ಯಾ ಚ ದೇಶಿಕಃ ॥೪೫॥
ಸಂಸ್ಥಾಪ್ಯಲಿಂಗಂ ಶಿಷ್ಯಸ್ಯಮಸ್ತಕಸ್ತಾಂ ಕಲಾಂಪರಾಂ ॥೪೭॥
[ಸೂಕ್ಷ್ಮತಂತ್ರಂ, ಪಟಲ. ೫]

ಎಂದು ಸೂಕ್ಷ್ಮಾಗಮವು ಹೇಳುವ ದೀಕ್ಷಾಕ್ರಮವು ಗರ್ಭಸ್ಥ ಶಿಶುವಿಗಾಗಲಿ ಅನ್ವಯಿಸುವುದಿಲ್ಲವೆಂಬುದು ಸೂರ್ಯಪ್ರಕಾಶದಷ್ಟು ಸ್ಪಷ್ಟವಾಗಿವೆ.

(೧೨) ಈಗೀಗ ವೀರಶೈವರಲ್ಲಿ ಕೆಲವರು ಜನ್ಮಲಿಂಗ ಧಾರಣದಲ್ಲಿಯೇ ದೀಕ್ಷೆಯ ಅಂತರ್ಭಾವವನ್ನು ಕಲ್ಪಿಸಿ, ಅದರಿಂದಲೇ ವೀರಶೈವರಿಗೆ ಮತದ ಲಿಂಗಪೂಜಾದಿ ಧರ್ಮಾಚರಣೆಯನ್ನು ಆಚರಿಸುವ ಅಧಿಕಾರವು ಪ್ರಾಪ್ತವಾಗುವುದೆಂದು ಅಭಿಪ್ರಾಯಪಡುತ್ತಿರುವರು. ಇದು ಶಾಸ್ತ್ರರೂಢಿಗಳಿಗೆ ವಿರೋಧವಾಗುವುದು. ಏಕೆಂದರೆ, ಜನ್ಮಲಿಂಗಧಾರಣದಿಂದಲೇ ದೀಕ್ಷೆಯು ಚರಿತಾರ್ಥವಾಗುತ್ತಿದ್ದರೆ ವೀರಶೈವರ ಶಾಸ್ತ್ರವು ದಶವಿಧ ಸಂಸ್ಕಾರಗಳನ್ನು ಹೇಳುವುದು ಅಸಂಗತವು."

(ವೀ. ದೀ. ವಿಧಿ. ಪೀಠಿಕೆ, ಪು. ೨.)

ಎಂದು ಸುಪ್ರಸಿದ್ಧ ವಿದ್ವಾಂಸರಾದ ಕೈ॥ ಪಂಡಿತ ಕಲಿಗಣನಾಥಶಾಸ್ತ್ರಿಗಳು (ಪಗಡದಿನ್ನಿ) ಹೇಳಿರುವರು.

ಇದುವರೆಗೆ ನಾವು ಹೇಳಿದ ಅನುಭವ ಮತ್ತು ಶಾಸ್ತ್ರಸಮ್ಮತ ವಿಚಾರಗಳಿಂದ ಲಿಂಗಧಾರಣವೇ ಬೇರೆ, ಶಿವದೀಕ್ಷೆಯೇ ಬೇರೆ ಎಂಬುದನ್ನು ವಿವೇಕಿಗಳೆಲ್ಲರೂ ಸುಲಭವಾಗಿ ತಿಳಿಯಬಲ್ಲರು.

(೧೩) ಶಿವದೀಕ್ಷೆಗೆ ತಿಥಿ, ವಾರ, ಕಾಲ, ದೇಶಗಳನ್ನು ಶಾಸ್ತ್ರಗಳಲ್ಲಿ ಹೇಳಿದೆ. ಲಿಂಗಧಾರಣಕ್ಕೆ ಹೆಚ್ಚು ನಿಯಮವಿಲ್ಲ. ಶಿವದೀಕ್ಷೆಯಲ್ಲಿ ಶಿಷ್ಯನಿಗೆ ತ್ರಿವಿಧಲಿಂಗಗಳ ಕುರುಹು*ಮತ್ತು ಸಂಬಂಧ ಬೋಧೆಯಾಗುತ್ತದೆ. ಕೇವಲ ಲಿಂಗಧಾರಣದಲ್ಲಿ ಇದು ಸಾಧ್ಯವಿಲ್ಲ. ಈ ಎಲ್ಲ ಕಾರಣಗಳಿಂದ ವೀರಶೈವನಿಗೆ ಜನನಕಾಲದಲ್ಲಿ ಲಿಂಗಧಾರಣವೆಂದೂ, ಹುಟ್ಟಿದ ಎಂಟನೇ ವರ್ಷದಲ್ಲಿ ಶಿವದೀಕ್ಷೆಯೆಂದೂ ಸಿದ್ಧವಾಗುತ್ತದೆ.

## ಉಪಸಂಹಾರ

'ಲಿಂಗಧಾರಣ ಮತ್ತು ಶಿವದೀಕ್ಷೆ' ಎಂಬ ವಿಷಯವಾಗಿ ವೀರಶೈವ ಧರ್ಮದ ಸಂಸ್ಕಾರವುಳ್ಳವರಿಗೆ ಧಾರಣ ಮತ್ತು ದೀಕ್ಷೆಗಳ ಕಾಲಭೇದಗಳೂ, ಕಾರಣ ವಿಶೇಷಗಳೂ ಸ್ಪಷ್ಟವಾಗುತ್ತವೆ. ನಿಜವಾದ ವೀರಶೈವನಿಗೆ ಶಿವಶರಣರ ವಚನಶಾಸ್ತ್ರದಂತೆಯೇ ಶ್ರೀಕರಾದಿ ಆಚಾರ್ಯರ ಗ್ರಂಥಗಳೂ ಪರಮ ಪ್ರಮಾಣವೆನಿಸುತ್ತವೆ. ಲಿಂಗಧಾರಣವಿಧಿ ಮೊದಲಾದುವುಗಳು ಶಿವಾಗಮ ಸಮ್ಮತ ಸಂಸ್ಕಾರಗಳೆಂದು ದೀಕ್ಷಾಬೋಧೆ, ವೀರಶೈವಾಚಾರ ಕೌಸ್ತುಭ ಮೊದಲಾದ ಗ್ರಂಥಗಳು ನಿರೂಪಿಸುತ್ತವೆ. ಶಿವಶರಣರು ವೇದಶಾಸ್ತ್ರಾಗಮಗಳಿಗೆ ವಿರೋಧಿಗಳಲ್ಲವೆಂಬ ಭಾವವನ್ನು ಗುಬ್ಬಿಯ ಮಲ್ಲಣಾಚಾರ್ಯನು ತನ್ನ 'ಗಣಭಾಷ್ಯರತ್ನಮಾಲೆ' ಯಲ್ಲಿ ಸ್ಪಷ್ಟಪಡಿಸಿದ್ದಾನೆ. ಆದ್ದರಿಂದ ವೀರಶೈವರಿಗೆ ವಚನಶಾಸ್ತ್ರದ ಹೊರತು ಮತ್ತುಳಿದ ಗ್ರಂಥಗಳು ಪ್ರಮಾಣಗಳಲ್ಲವೆಂದು ಹೇಳುವುದು ಅನುಚಿತವಾಗಿದೆ. ಹಾಗೂ ಏಕಪಕ್ಷೀಯವಾದುದಾಗಿದೆ. ವೀರಶೈವರ ದಶಕರ್ಮಗಳು ಶಿವಾಗಮ ಸಮ್ಮತವಾದುದರಿಂದ ಅವುಗಳು ಬ್ರಾಹ್ಮಣೀ

*ಹುಟ್ಟಿದ ಶಿಸುವಿಗೆ ಇಷ್ಟಲಿಂಗಧಾರಣ ಮಾತ್ರವಾಗುತ್ತದೆ. ಮುಂದೆ ದೀಕ್ಷಾ ಕಾಲದಲ್ಲಿ ಭಾವಲಿಂಗ, ಪ್ರಾಣಲಿಂಗಳಗಳ ಬೋಧೆಯಾಗಿ ತ್ರಿವಿಧ ಲಿಂಗ ಸಂಬಂಧ ಅನುಭವಗಳು ಸಾಧ್ಯವಾಗುತ್ತವೆ.

ಸಂಸ್ಕೃತಿಯ ಅನುಕರಣವೆಂದು ಹೇಳುವುದು ಸಮಂಜಸವಲ್ಲ. ವಚನಶಾಸ್ತ್ರ ದಲ್ಲಿ ನಿರೂಪಿತವಾದ ಧರ್ಮವು ಶಿವಾಗಮಗಳಿಂದ ಸ್ಫೂರ್ತಿಗೊಂಡ ಧರ್ಮ ವೆಂದು ಕೈ॥ ಪಾವಟೆ, ಶ್ರೀ ದಿವಾಕರ್ ಮತ್ತು ಡಾ॥ ನಂದೀಮಠ ಮೊದಲಾದ ಆಧುನಿಕ ಪಂಡಿತರು ಅಭಿಪ್ರಾಯಪಟ್ಟಿದ್ದಾರೆ.

ವೀರಶೈವ ಸಿದ್ಧಾಂತಾನುಸಾರವಾಗಿ ಲಿಂಗವಂತರ ಶಿಶು ಹುಟ್ಟಿದ ದಿನ ವಿಧ್ಯುಕ್ತ ರೀತಿಯಿಂದ ಲಿಂಗಧಾರಣ ಮಾಡುವುದೂ, ಶಿಶುವಿನ ಗರ್ಭಾಷ್ಟಮ ವರ್ಷದಲ್ಲಿ ಶಿವದೀಕ್ಷೆಮಾಡುವುದೂ ಶಾಸ್ತ್ರಮತ್ತುಅನುಭವಕ್ಕೆಸಮ್ಮತವಾಗಿದೆ. ಹಲವರು ಹೇಳುವಂತೆ ಜನ್ಮ ವೀರಶೈವನಿಗೆ ಲಿಂಗಧಾರಣ ಮಾತ್ರ ಸಾಕೆಂದೂ ಆಗಂತುಕ ವೀರಶೈವನಿಗೆ ಮಾತ್ರ ಲಿಂಗಧಾರಣ,ಶಿವದೀಕ್ಷೆ ಬೇಕೆಂದೂ ತಿಳಿಯು ವುದು ಅಶಾಸ್ತ್ರೀಯ ಹಾಗೂ ಅಸಮಂಜಸವಾದ ವಿಷಯವಾಗಿದೆ.

ಜನ್ಮತಃ ವೀರಶೈವನೆನಿಸಿ ಶಿವದೀಕ್ಷಾ ಸಂಸ್ಕಾರವನ್ನು ಪಡೆಯದವನು ಸಾಮಾನ್ಯ ವೀರಶೈವನೆನಿಸಿಕೊಳ್ಳುವನಲ್ಲದೆ, ವೀರಶೈವ ಧರ್ಮದ ತಿರುಳಾದ ಮೋಕ್ಷ ಮಾರ್ಗಕ್ಕೆ ದೂರವಾಗುವನೆಂದು ತಿಳಿಸುವುದು ಇಲ್ಲಿ ನಮ್ಮ ಉದ್ದೇಶ ವಾಗಿದೆ. ಅರ್ಥಾತ್ ಪ್ರತಿಯೊಬ್ಬ ಲಿಂಗವಂತನೂ ಶಿವಾಗಮ ಸಮ್ಮತವಾದ ಶಿವದೀಕ್ಷಾ ಸಂಸ್ಕಾರವನ್ನು ತ್ರಿವಿಧ ಲಿಂಗಪೂಜೆಯಿಂದ ಹೊಂದಿ ಧನ್ಯನಾಗಿ ಶಿವಾನುಗ್ರಹ ಪಡೆದು ಕೃತಾರ್ಥನಾಗಲೆಂಬುದು ಶರಣರ ನಿಜವಾದ ಹೃದ್ಗತವಾಗಿದೆ.



# ಹಿಂದೂ ಧರ್ಮದಲ್ಲಿ ವೀರಶೈವ ದರ್ಶನ.

ಭರತ ಖಂಡದಲ್ಲಿ ಕ್ರೈಸ್ತ, ಮಹಮದೀಯ ಮತಗಳು ಬರುವುದಕ್ಕೆ ಮೊದಲಿನಿಂದಲೂ ಇರುವುದೇ ಹಿಂದೂ ಧರ್ಮ ಅಥವಾ ಸನಾತನ ಧರ್ಮ. ಜೈನ, ಬೌದ್ಧ, ಸಿಖ್, ವೀರಶೈವ ಮೊದಲಾದ ದರ್ಶನಗಳೆಲ್ಲವೂ ಸನಾತನ ಧರ್ಮವೃಕ್ಷದ ಶಾಖೋಪಶಾಖೆಗಳು. ಕ್ರೈಸ್ತ, ಮುಸಲ್ಮಾನ ಮೊದಲಾದ ಮತಗಳು ವ್ಯಕ್ತಿಗಳನ್ನು ಆಶ್ರಯಿಸಿ ಹೊರಟಂತೆ ಸನಾತದ ಧರ್ಮವು ಯಾವುದೊಂದು ವ್ಯಕ್ತಿಯನ್ನೂ ಆಶ್ರಯಿಸಿಲ್ಲ. ಇದು ಕಾಲ ಕಾಲಕ್ಕೆ ಹಿಂದಿನ ಋಷಿಗಳ, ಆಚಾರ್ಯರ, ಶರಣರ ಅನುಭವ ಮತ್ತು ಪ್ರತಿಭೆಗಳ ಫಲವಾಗಿ ವಿಕಾಸವಾಗಿ ಬೆಳೆದು ಬಂದ ಧರ್ಮವಾಗಿದೆ. ಹಿಂದೂ ಧರ್ಮವು ಹಿಮಾಲಯದಂತೆ ಎತ್ತರವೂ ಶಾಂತಿಸಾಗರದಂತೆ ಗಂಭೀರವೂ ಗಂಗಾನದಿಯಂತೆ ನಿರ್ಮಲವೂ ಆದುದು. ಮತ, ದರ್ಶನ, ಸಿದ್ಧಾಂತ ಇವೆಲ್ಲ ಪರ್ಯಾಯಶಬ್ದಗಳು. 'ಜೀವಿಗಳು ದೇವನನ್ನು ಕಾಣಲು ಪೂರ್ವಾಚಾರ್ಯರು ಕಂಡುಹಿಡಿದಿರುವ ದಾರಿಗಳೇ ಮತಗಳು' ಎಂದು ವಿವೇಕಾನಂದ ಸ್ವಾಮಿಗಳು ಒಂದೆಡೆ ಅರ್ಥ ಹೇಳಿದ್ದಾರೆ. ಧರ್ಮ ಶಬ್ದಕ್ಕೆ ಪೂರ್ವಿಕರು ಬಗೆ ಬಗೆಯಾದ ಅರ್ಥ ಹೇಳಿದ್ದಾರೆ. 'ಧೃ' ಎಂಬ ಧಾತುವಿನಿಂದ 'ಧರ್ಮ' ಎಂಬ ಶಬ್ದ ಹುಟ್ಟಿದೆ ; ಧರತೀತಿ ಧರ್ಮಃ ; ಧಾರಣಾತ್ ಧರ್ಮ ಇತ್ಯಾಹುಃ ; ಅಹಿಂಸಾ ಪರೋಧರ್ಮಃ ; ಯತೋಧರ್ಮಸ್ತತೋಜಯಃ, ಯತೋಽಭ್ಯುದಯ ನಿಶ್ರೇಯಸಸಿದ್ಧಿಃ ಸ ಧರ್ಮಃ; ಪತಿತಂ ಪತಂತಂ ಪತಿಷ್ಯಂತಂ ಧರತೀತಿ ಧರ್ಮಃ, ಧರ್ಮ ಏವ ಹತೋ ಹಂತಿ ಧರ್ಮೋ ರಕ್ಷತಿ ರಕ್ಷಿತಃ; ವಸ್ತು ಸಹಾವೋ ಧರ್ಮೋ, ದಯವೇ ಧರ್ಮದ ಮೂಲ, ದಯಾ ಧರ್ಮಕಾ ಮೂಲಹೈ ಧರ್ಮೋ ಧಾರಯತಿ ಪ್ರಜಾಃ ಎಂದು ಮೊದಲಾಗಿ ಪ್ರಾಚೀನ ಗ್ರಂಥಗಳಲ್ಲಿ ಧರ್ಮದ ಅರ್ಥವನ್ನು ಕುರಿತು ಶಾಸ್ತ್ರಜ್ಞರು ವಿವಿಧವಾಗಿ ಹೇಳಿದ್ದಾರೆ.

ದರ್ಶನ ಶಬ್ದವು 'ದೃಶ'ಎಂಬ ಧಾತುವಿನಿಂದ ಹುಟ್ಟಿದೆ. ಇದಕ್ಕೆ ನೋಡುವುದು, ನೋಡಲ್ಪಡುವುದು, ನೋಡುವವನು ಮೊದಲಾದ ಅರ್ಥಗಳಿವೆ.

ಪಶ್ಯತೀತಿ ದರ್ಶನಂ, ಪಶ್ಯತಿ ಅನೇನ ಇತಿ ದರ್ಶನಂ, ದೃಷ್ಟಿರ್ವಾ ದರ್ಶನಂ ಎಂದು ಮೊದಲಾಗಿ ಅರ್ಥಗಳಿವೆ. ಮುಖ್ಯವಾಗಿ ದರ್ಶನವು ಜ್ಞಾನದಾಯಕ ವಾಗಿದೆ. ಹಾಗೂ ಮೋಕ್ಷಕಾರಕವಾಗಿದೆ.

ಭಾರತದೇಶದಲ್ಲಿ ನಯ್ಯಾಯಿಕ(ಗೌತಮ)ವೈಶೇಷಿಕ(ಕಣಾದ)ಸಾಂಖ್ಯ (ಕಪಿಲ) ವೇದಾಂತ (ವ್ಯಾಸ) ಮೀಮಾಂಸ (ಜೈಮಿನಿ) ಅದ್ವೈತ (ಶಂಕರ) ವಿಶಿಷ್ಟಾದ್ವೈತ (ರಾಮಾನುಜ) ದ್ವೈತ (ಆನಂದತೀರ್ಥ) ಶಕ್ತಿವಿಶಿಷ್ಟಾ ದ್ವೈತ (ನೀಲಕಂಠ) ಚಾರ್ವಾಕ (ಬೃಹಸ್ಪತಿ) ಜೈನ(ತೀರ್ಥಂಕರರು) ಬೌದ್ಧ (ಸಿದ್ಧಾರ್ಥ) ಗೀತಾ (ಶ್ರೀಕೃಷ್ಣ) ಉಪನಿಷತ್ (ಋಷಿಗಳು) ಯೋಗ (ಪತಂಜಲಿ) ಮೊದಲಾದ ದರ್ಶನಗಳಿವೆ. ಇಂತಹ ದರ್ಶನಗಳ ವಿಷಯ ಗಳನ್ನು ತಿಳಿಯುಲು ಸಂಸ್ಕೃತದಲ್ಲಿಯೂ, ಕನ್ನಡದಲ್ಲಿಯೂ, ಇತರ ಭಾಷೆ ಗಳಲ್ಲಿಯೂ ಹಲವಾರು ಗ್ರಂಥಗಳಿವೆ.

ವೀರಶೈವ ದರ್ಶನವು ಹಿಂದೂ ಧರ್ಮದ ಒಂದು ಭಾಗ. ಆದರೆ ಇದು ಆಗಮ ಪ್ರಧಾನವಾದ ತಾಂತ್ರಿಕ ವೈದಿಕ ಮತವೆಂದು ಪ್ರಾಜ್ಞರ ಅಭಿಪ್ರಾಯ. "ದೇವನೊಬ್ಬ ನಾಮಹಲವು, ಕಾಯಕವೇ ಕೈಲಾಸ, ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟ, ಸ್ತ್ರೀಪುರುಷರು ಸಮಾನ, ಜಾತಿಭೇದ ವರ್ಣಭೇದಗಳಿಲ್ಲ, ಶಿವಶಕ್ತಿ ಜಗತ್ತಿನಮೂಲ. ಇವು ಎರಡಲ್ಲ ಒಂದು, ಹೂ ವಾಸನೆ, ಸಕ್ಕರೆ ರುಚಿ ಹಾಲು ರುಚಿಗಳಂತೆ ಈ ಶಿವಶಕ್ತಿಗಳು. ಅಹಿಂಸೆ ದರ್ಶನದ ಮುಖ್ಯಲಕ್ಷಣ. ವೇದದ ಜ್ಞಾನಕಾಂಡ, ಶಿವಾಗಮಗಳು, ಮತ್ತು ಶರಣರ ಅನುಭವವಚನ ಗಳು ಪ್ರಮಾಣ, ಮೂಲತತ್ವಗಳು ೩೬, ಆತ್ಮಗಳಲ್ಲಿ ಸ್ತ್ರೀ ಪುರುಷ ಭೇದ ವಿಲ್ಲ. ಪೂರ್ಮಜನ್ಮವುಂಟು ಪುನರ್ಜನ್ಮವಿಲ್ಲ, "ಕ್ರಿಯಾಜ್ಞಾನ ಸಮಾಯುಕ್ತಂ ವೀರಶೈವಸ್ಯಲಕ್ಷಣಂ" ಭಕ್ತಿಯು ಪಂಚಮಪುರಷಾರ್ಥ, ಸಂಸಾರವು ದುಃಖ ವಲ್ಲ. ಜೀವನು ಸಾಧಕಾವಸ್ಥೆಯಲ್ಲಿ ದ್ವೈತಿ, ಸಿದ್ಧಾವಸ್ಥೆಯಲ್ಲಿ ಅದ್ವೈತಿ" ಇತ್ಯಾದಿಗಳು ಈ ಮತದ ತಿರುಳಾಗಿವೆ.

ಭಾರತದಲ್ಲಿಂದು ಶೈವ-ವೈಷ್ಣವ-ಶಾಕ್ತ ಮತಗಳು ಪ್ರಚಲಿತವಾಗಿವೆ. ಕೇವಲ ವೈದಿಕಮತ ಇಂದು ಕಣ್ಮರೆಯಾಗಿದೆ ಅನ್ನಬಹುದು. ಹಿಂದೂ

ಸಮಾಜದಲ್ಲಿ ಆರ್ಯ–ದ್ರಾವಿಡ ಸಂಸ್ಕೃತಿಗಳು, ಗಂಗೆ–ಯಮುನೆಗಳಂತೆ, ತುಂಗ ಭದ್ರೆಗಳಂತೆ ಕೂಡಿಹೋಗಿವೆ.

ವೀರಶೈವವು ಏಕೇಶ್ವರನಾದ ದೇವರನ್ನು ನಂಬಿದೆ. ವೇದದ ಜ್ಞಾನ ಕಾಂಡವನ್ನು ಒಪ್ಪಿದೆ. ಅನುಭವಕ್ಕೆ ಪ್ರಾಮುಖ್ಯತೆ ಕೊಟ್ಟಿದೆ. ಸ್ತ್ರೀಯರಿಗೆ ಧಾರ್ಮಿಕ ಸ್ವಾತಂತ್ರ್ಯ ಕೊಟ್ಟಿದೆ. ವರ್ಣಾಶ್ರಮಗಳನ್ನು ಮೀರಿ ಅತಿ ವರ್ಣಾಶ್ರಮ ಎನಿಸಿದೆ. ಯಜ್ಞ ಯಾಗಗಳನ್ನು ಉಳಿದು ಅಹಿಂಸಾ ಪ್ರಧಾನ ವಾಗಿದೆ. ಹರಿಜನೋದ್ಧಾರಮಾಡಿದೆ. ಇಷ್ಟಾದರೂ ವೀರಶೈವವು ಹಿಂದೂ ಧರ್ಮದ ಅಂಗವಾಗಿಯೇ ಇದೆ. ಬಸವಣ್ಣನವರ ಹಿಂದೆ ಇದ್ದ ಪಾಶುಪತ, ಲಕುಲೀಶ, ಕಾಳಾಮುಖ ಮೊದಲಾದ ಶೈವಧರ್ಮಗಳೆಲ್ಲವೂ ವೀರಶೈವದಲ್ಲಿ ಲೀನವಾಗಿದೆ. ಈ ಬಗ್ಗೆ ಇನ್ನೂ ಅನೇಕವಾಗಿ ಸಂಶೋಧಿಸಬೇಕಾದ ಸಂಗತಿಗಳಿವೆ. ಬೆಳಕು ಕಾಣಬೇಕಾದ ವಿಚಾರಗಳಿವೆ.

ಹಿಂದೂಧರ್ಮದಲ್ಲಿ ವೀರಶೈವರು ಮಾಡಿದ ತಾತ್ವಿಕ ವಿಷಯವನ್ನು ಕುರಿತು ಶ್ರೀ ಎಚ್. ಎಂ. ರಾಘವೇಂದ್ರಾಚಾರ್ಯರು 'ಭಾರತೀಯ ತತ್ವಜ್ಞಾನಕ್ಕೆ ವೀರಶೈವರ ಕಾಣಿಕೆ' ಎಂಬ ಲೇಖನವನ್ನು ಶರಣ ಸಾಹಿತ್ಯ (ಸಂ ೨, ಸಂಚಿಕೆ ೮–೯ರಲ್ಲಿ) ಬರೆದಿದ್ದಾರೆ. ಅದನ್ನಿಲ್ಲಿ ವಾಚಕರ ಅವಗಾಹನೆಗಾಗಿ ಎತ್ತಿಕೊಟ್ಟಿದೆ.

"ಶಕ್ತಿವಿಶಿಷ್ಟಾದ್ವೈತಸಿದ್ಧಾಂತಕ್ಕೆ ಶಿವಾದ್ವೈತ ಮೊದಲಾದ ಅನಂತ ಹೆಸರುಗಳು. ಈ ಹೆಸರುಗಳು ವಿಭಿನ್ನವಾಗಿ ಕಂಡುಬಂದರೂ ಅವುಗಳ ಪರಮ ತಾತ್ಪರ್ಯ ಒಂದೇ. ಪ್ರಪಂಚವು ಚಿದಚಿದ್ರೂಪವಾದುದು. ಇದರಿಂದ ವಿಶಿಷ್ಟನಾದವನು ಶಿವನು. ಇವನು ಅದ್ವೀತಿಯ ಎಂದರೆ ತನ್ನಿಂದ ಭಿನ್ನವಾದುದಿಲ್ಲದವನು. ಅವನೇ ಕಾರಣರೂಪ ಮತ್ತು ಕಾರ್ಯರೂಪ. ಎಂದರೆ ಶಿವನೆಂಬ ಮೂಲಾಧಾರ ಸಹಿತ ಪ್ರಪಂಚವು ಮುಖ್ಯವಾಗಿ ಒಂದು ತತ್ತ್ವ. ಅದರಲ್ಲಿ ಭೇದವಿಲ್ಲ. ಈ ತತ್ತ್ವವೇ ಶಿವ ಎಂಬುದು. ಶಿವಾದ್ವೈತ ಮೊದಲಾದ ಹೆಸರುಗಳಿಗೆ ಇದೇ ಅರ್ಥ. ಈ ಅರ್ಥದಲ್ಲಿ ಗಮನಿಸಬೇಕಾದ ಒಂದು ಅಂಶವಿದೆ. ಪರಿಚ್ಛಿನ್ನವಾದ ಜಡಾಜಡ ಪ್ರಪಂಚವೇ

ಶಿವ; ಅವನೂ ಪರಿಚ್ಛಿನ್ನ ಎಂಬುದು ಇದರ ಅಭಿಪ್ರಾಯವಲ್ಲ. ಶಿವ ಮತ್ತು ಪ್ರಪಂಚಕ್ಕೆ ಅತ್ಯಂತ ಅಭೇದವಿಲ್ಲ. ಪ್ರಪಂಚ ಪರಿಚ್ಛಿನ್ನ, ಶಿವ ಅಪರಿಚ್ಛಿನ್ನ. ಅವುಗಳಿಗೆ ಅತ್ಯಂತ ಭೇದವೂ ಇಲ್ಲ. ಶಿವನನ್ನುಳಿದು ಪ್ರಪಂಚವಿಲ್ಲ. ಶಿವ ಸತ್ಯ,ಪ್ರಪಂಚ ಮಿಥ್ಯೆ ಎಂದು ಹೇಳುವುದು ಯುಕ್ತವಲ್ಲ. ಮುಂದೆ ಸ್ಪಷ್ಟಪಡುವಂತೆ ಪ್ರಪಂಚವೂ ಸತ್ಯ. ಈ ಪ್ರಮೇಯಗಳಿಗೆ ವಿರೋಧವಿಲ್ಲದ ರೀತಿಯಲ್ಲಿ 'ಶಿವಾದ್ವೈತ' ಮುಂತಾದ ಹೆಸರುಗಳಿಗೆ ವಿರೋಧವಿಲ್ಲದೆ ಕಲ್ಪಿಸಬೇಕು.

ಶಿವಾದ್ವೈತವೆಂಬ ಸಿದ್ಧಾಂತವು ಉಚ್ಛೃಂಖಲವಾಗಿ ಪ್ರದರ್ಶಿಸಿಲ್ಲ. ಇದು, ವೇದ,ಆಗಮ, ಇವಕ್ಕನುಸಾರವಾದ ಯುಕ್ತಿ ಮತ್ತು ಅನುಭವ ಇವುಗಳ ಆಧಾರದಿಂದೇರ್ಪಟ್ಟಿರುವುದು.ವೇದಾರ್ಥವೇ ನಿರ್ಣಾಯಕ ಬ್ರಹ್ಮಸೂತ್ರಗಳಿಗೆ ವ್ಯಾಖ್ಯಾನ ರೂಪವಾಗಿ ಪ್ರವರ್ತಿಸಿರುವುದು. ಈ ಸಿದ್ಧಾಂತದಲ್ಲಿ ಮೊದಲಿನಿಂದ ಕೊನೆಯುವರೆಗೆ ಬ್ರಹ್ಮಸೂತ್ರಗಳಿಗೆ ಅಸಾಧಾರಣವಾದ ಸಮನ್ವಯ ದೃಷ್ಟಿಯು ವೈಶಿಷ್ಟ್ಯವಿರುವುದು. ವಿಭಿನ್ನಶ್ರುತಿವಾಕ್ಯಗಳಲ್ಲಿ ತೋರುವ ದ್ವೈತಾದ್ವೈತ ಪರವಾದ ಪ್ರಮೇಯುಗಳ ಔಚಿತ್ಯ ವಿಚಾರವು ಸರಳವಾಗಿದೆ. ವಿಚಾರ ದೃಷ್ಟಿಯಿಂದ ಶ್ರುತ್ಯಾಗಮಗಳಿಗೆ ಏಕವಾಕ್ಯತೆಯನ್ನು ಸಂಪಾದಿಸುವುದೇ ಮುಖ್ಯವಾದ ಧ್ಯೇಯವಾಗಿ ಕಂಡು ಬರುವುದು. ಈ ಅರ್ಥದಲ್ಲಿ ಈ ಸಿದ್ಧಾಂತವು ಭಾರತೀಯರ ತತ್ವ ದೃಷ್ಟಿಗೆ ಒಂದು ನವೀನಕ್ರಮವನ್ನು ಕೊಡುವುದು. ಇದೇ ಈ ಸಿದ್ಧಾಂತವು ದರ್ಶನ ಸಂತತಿಗೆ ಮಾಡಿದ ಉಪಕಾರ. ಈ ಸಿದ್ಧಾಂತವು ವಾಸ್ತವ ರೀತಿಯಲ್ಲಿ ತತ್ತ್ವಸ್ವರೂಪವನ್ನು ನಿರೂಪಿಸುವುದು ಮತ್ತೊಂದಲ್ಲ. ಇದರ ಜ್ಞಾನ ಮತ್ತು ಅದಕ್ಕನುಕೂಲವಾದ ಸಾಧನವೇ ಮಾನವರ ಪರಮಶ್ರೇಯಸ್ಸಿನ ದಾರಿ ಎಂಬ ಆಯಾ ಸಿದ್ಧಾಂತದ ಅನುಯಾಯಿಗಳ ದಾರ್ಢ್ಯವು ಭರತಖಂಡದಲ್ಲಿ ಸರ್ವಸಿದ್ಧಾಂತ ಸಾಧಾರಣವಾದುದು. ವೀರಶೈವ ಸಮಾಜದ ಈ ದಾರ್ಢ್ಯವೆಂಬ ಗೌರವಕ್ಕೆ ಈ ಸಿದ್ಧಾಂತವು ಪೂರ್ಣವಾಗಿ ಪಾತ್ರವಾಗಿರಲಿ. ದರ್ಶನ ಸಂಪ್ರದಾಯಕ್ಕೆ ಒಂದು ಸಿದ್ಧಾಂತದ ಉಪಕಾರವೆಂದರೆ ದರ್ಶನ ಸರಣಿಯಲ್ಲಿ ಒಂದು

ನವೀನ ದೃಷ್ಟಿಯನ್ನು ಕೊಡುವುದು. ಇದಕ್ಕಿಂತಲೂ ದರ್ಶನ ಸಂಪ್ರದಾಯಕ್ಕೆ ಒಂದು ಸಿದ್ಧಾಂತವಾಡುವ ದೊಡ್ಡದಾದ ಉಪಕಾರವಿಲ್ಲ. ಈ ಪ್ರಮೇಯು ವನ್ನು ಮುಂದಿನಪುಟಗಳಲ್ಲಿ ಆಯಾ ತತ್ತ್ವದ ಸ್ವರೂಪವನ್ನು ಸಂಕ್ಷೇಪವಾಗಿ ನಿರೂಪಿಸುವುದರ ಮೂಲಕ ಸ್ಪಷ್ಟಪಡಿಸಬಹುದು.

ವೇದಾಂತ ಶಾಸ್ತ್ರಗಳ ಪ್ರಕ್ರಿಯೆಗನುಗುಣವಾಗಿ ಈಸಿದ್ಧಾಂತವು ವೇದವು ಅಪೌರುಷೇಯಪ್ರಮಾಣವೆಂದೂ,ಶೈವಾಗಮವು ವೇದಾವಿರುದ್ಧವಾದ ಪ್ರಮೇ ಯವನ್ನು ಬೋಧಿಸುವುದಾಗಿ ವೇದಸಮ ಪ್ರಮಾಣವೆಂದೂ ಅಂಗೀಕರಿಸಿ ಅನುಮಾನ ಮತ್ತು ಜ್ಞಾನ ಪ್ರತ್ಯಕ್ಷವನ್ನಾಶ್ರಯಿಸಿ ಇವೆಲ್ಲಕ್ಕೂ ವಿರೋಧ ವಿಲ್ಲದ ರೀತಿಯಲ್ಲಿ ತತ್ವಸ್ವರೂಪವನ್ನೇರ್ಪಡಿಸುವುದು. ಮತ್ತು ತತ್ವಾನು ಗುಣವಾದ ಸಾಧನಾಕ್ರಮುವನ್ನು ನಿರೂಪಿಸುವುದು.

ಈ ಸಂದರ್ಭದಲ್ಲಿ ನಾವು ಮುಖ್ಯವಾಗಿ ಗಮನಿಸಬೇಕಾದ ತತ್ತ್ವ ವಿಶೇಷಗಳಿವು. ಚೇತನಾಚೇತನಾತ್ಮಕವಾದ ಜಗತ್ತು, ಇದಕ್ಕಾಧಾರವಾದ ಬ್ರಹ್ಮತತ್ತ್ವ, ಇವೆರಡರ ಸಂಬಂಧ ಮತ್ತು ಈ ಸಾಕ್ಷಾತ್ಕಾರದಲ್ಲಿ ಉಪಯು ಕ್ತವಾದ ಸಾಧನಾಕ್ರಮ ಎಂದು.

ಜಗತ್ತತ್ವ:—ಪ್ರಪಂಚದಲ್ಲಿ ಜ್ಞಾನವುಳ್ಳ 'ಚೇತನವಸ್ತು' ಮತ್ತು ಜ್ಞಾನ ರಹಿತವಾದ 'ಜಡವಸ್ತು' ಎಂಬೆರಡು ಅನುಭವಸಿದ್ಧವಾಗಿರುವುವು. ಜಡ ವಸ್ತುವಿಗೆ ಪ್ರಕೃತಿಯೇ ಮೂಲ. ಇದೇ ಪರಿಣಾಮ ವೈಚಿತ್ರ್ಯದಿಂದ ಅನಂತ ವಸ್ತುಗಳ ರೂಪವಾಗಿ ಕಂಗೊಳಿಸುವುದು. ಪ್ರಕೃತಿ ಮತ್ತು ಅದರ ಪರಿಣಾ ಮಕ್ಕೆ ಸಂಬಂಧಪಟ್ಟ ವಿಶೇಷವಿಚಾರಗಳ ವಿಷಯದಲ್ಲಿ ಈ ಸಿದ್ಧಾಂತವು ಸಾಮಾನ್ಯವಾಗಿ ಪ್ರಕೃತಿಯನ್ನಂಗೀಕರಿಸುವುದು ಇತರ ಸಿದ್ಧಾಂತಗಳಿಗೆ ಸದೃಶವಾಗಿರುವುದು. ಪ್ರಕೃತಿಯ ತಾತ್ತ್ವಿಕ ಸ್ವರೂಪ ಮಾತ್ರ ಈ ಸಿದ್ಧಾಂಕ್ಕೆ ಅಸಾಧಾರಣವಾಗಿರುವುದು. ಈ ಪ್ರಮೇಯುವು ಮುಂದೆ ನಿರೂಪಿತವಾಗು ವುದು.

'ಚೇತನತತ್ತ್ವ' ಎಂಬುದೇ ನಾವು ಸಾಮಾನ್ಯವಾಗಿ 'ಜೀವ' ಎಂದು ಕರೆಯುವ ವಸ್ತು. ಇತರ ದರ್ಶನಗಳಂತೆಯೇ ಈ ಸಿದ್ಧಾಂತವು ಚೇತನ

ವಸ್ತುವನ್ನು ನಿರಾಕರಿಸುವ ಚಾರ್ವಾಕ ಮತವನ್ನು ದೂಷಿಸಿ ಚೇತನ ವಸ್ತುವನ್ನು ಸಿದ್ಧಪಡಿಸಿಕೊಳ್ಳುವುದು. ಚಾರ್ವಾಕಮತವು ಕೇವಲ ಪೃಥ್ವಿ ಮೊದಲಾದ ಭೂತಗಳ ಸಂಯೋಗದಿಂದ ಚೇತನೋತ್ಪತ್ತಿಯೆಂದು ಹೇಳುವುದು ಸರಿಯಲ್ಲ. ಈ ವಾದವು ಪಶು ಪಕ್ಷಿ ಮೃಗ ಮೊದಲಾದ ಉತ್ಪತ್ತಿ ವೈಚಿತ್ರ್ಯವನ್ನು ಗಮನಕ್ಕೆ ತಂದಿಲ್ಲ. ಚೈತನ್ಯಕ್ಕೆ ಭೂತ ಸಂಯೋಗವೇ ಕಾರಣವಾದರೆ ಎಲ್ಲ ಚೇತನವಸ್ತುವೂ ಕಂಡು ಬರಬೇಕಾದೀತು. ಇದು ಅನುಭವದಲ್ಲಿಲ್ಲ. ಗೋಮಯ ಮೊದಲಾದುದರಿಂದ ವೃಶ್ಚಿಕ ಮೊದಲಾದುದಾಗಿ ಕಂಗೊಳಿಸುವುದು.ಏನಂಚ, ಚೇತನ ವಸ್ತುವಿನ ನಿರಾಕರಣವು ಸಾಧ್ಯವಲ್ಲ. ಚೇತನವಸ್ತು ಶರೀರದ ಜೊತೆಯಲ್ಲಿ ಹುಟ್ಟಿ ಅದರ ಜೊತೆಯಲ್ಲಿಯೇ ನಾಶವಾಗುವುದೆಂದು ತಿಳಿವುದು ಸರಿಯಲ್ಲ. ಮಹಾರಾಜನೂ ದರಿದ್ರನಾಗುವನು ಎಂಬೀ ಮುಂತಾದ ಅವಸ್ಥಾ ವಿಶೇಷಗಳು ಜೀವನಿಗೆ ಅವನ ಪೂರ್ವಕರ್ಮಾನುಸಾರ ಫಲಾನುಭವವಿರುವುದೆಂಬುದನ್ನು ಸೂಚಿಸುವುವು. ಇದಕ್ಕನುಗುಣವಾಗಿ ಜೀವನಿಗೆ ಪೂರ್ವಾಪರಜನ್ಮಗಳುಂಟೆಂದು ಸಿದ್ಧವಾಗುವುದು.

ನಮ್ಮ ಅನುಭವದಂತೆ ಜೀವನು ಘೋರ, ಅಪಾರ ಮತ್ತು ನಿಸ್ಸಾರ ಸಂಸಾರ ಎಂಬ ತಾಪತ್ರಯಕ್ಕೆ ಸಿಕ್ಕಿ ಬಳಲುತ್ತಿರುವನು. ಇದಕ್ಕೆ ಇವನ ಜನ್ಮಾಂತರ ಕರ್ಮವೇ ಕಾರಣ. ಈ ಕರ್ಮಕ್ಕಾದರೂ ಇವನ ಮೋಹವೇ ಕಾರಣ. ಇದಕ್ಕೆ 'ಮಾಯೆ' ಎಂದು ಹೆಸರು. ಜೀವನ ಜನ್ಮಕ್ಕೆ ಆದಿ ಇಲ್ಲ. ಇದಕ್ಕೆ ಕಾರಣವಾದ ಮಾಯೆಗೂ ಆದಿಯಿಲ್ಲ. ಈ ಮಾಯೆಯೂ ಇವನಿಗೆ ಸ್ವಾಭಾವಿಕ, ಅಸ್ವಾಭಾವಿಕ ಎಂಬುದು ಒಂದು ವಿಚಾರ. ಇದು ಅಸ್ವಾಭಾವಿಕ ಎಂದು ಪ್ರಸಿದ್ಧ ವೇದಾಂತ ಶಾಸ್ತ್ರಗಳ ತಾತ್ಪರ್ಯ. ಇದು ಸ್ವಾಭಾವಿಕವೆಂದು ಈ ಸಿದ್ಧಾಂತ ಸಮ್ಮತಿ. ಈ ಪ್ರಮೇಯವನ್ನಾಧಾರ ಮಾಡಿಕೊಂಡು ಈ ಸಿದ್ಧಾಂತವು ಜೀವನು ಜಡಾಜಡ ಸ್ವರೂಪವೆಂದು ನಿರ್ಣಯಿಸುವುದು. ಎಂತೆಂದರೆ ಜೀವನು ಚೈತನ್ಯಸ್ವರೂಪ, ವಾಸ್ತವ. ಆದರೆ ಇವನು ಸ್ವಾಭಾವಿಕ ಅವಿದ್ಯಾ ಅಥವಾ ಮೋಹಪಾಶಬದ್ಧನಾಗಿರುವ ಪ್ರಯುಕ್ತ ಜಡನೂ ಹೌದು ಎಂದು ಇವರ ಅಭಿಪ್ರಾಯ. ಇವನು [illegible] ಸ್ವಾಭಾ

ವಿಕ ವಿದ್ಯಾಪಾಶಬದ್ಧತ್ವಾತ್ ಜೀವಸ್ಯ ಜಡಾಜಡತ್ವಂ ಸರ್ವಾನುಭವ ಸಿದ್ಧಂ" [ಶ್ರೀಕರ ಭಾಷ್ಯ]

## ಚೇತನಾಚೇತನಾತ್ಮಕ ಜಗತ್ತಿನಿಂದ ಸೂಚಿತವಾಗುವ ಪರತತ್ವ ವಿಚಾರ

ಪ್ರಪಂಚವು ಉತ್ಪತ್ತಿಯುಳ್ಳುದು. ಈ ಅರ್ಥದಲ್ಲಿ ಅದು ಒಂದು ಕಾರ್ಯ. ಈ ಪ್ರಮೇಯವು ಅದಕ್ಕೆ ಕರ್ತೃ ಒಂದಿರಬೇಕೆಂದು ಸೂಚಿಸುವುದು. "ತಸ್ಮಾತ್ತಾ ಪ್ರಪಂಚಸ್ಯ ಕರ್ತೃ ಜನ್ಯತ್ವಂ ಘಟಾದಿವತ್ ವಕ್ತುಂ ಶಕ್ಯಂ" (ಶ್ರೀ. ಕ. ಭಾ.) ಜನ್ಮ ಹೀಗೆ ಪ್ರಪಂಚ ಕರ್ತೃವನ್ನು ಸ್ಥಾಪಿಸುವುದು ನ್ಯಾಯ ಮೊದಲಾದ ದರ್ಶನಗಳಿಗೆ ಸಮಾನವಾದುದು. ಇದೇ ಪ್ರಮೇಯದ ವಿಶೇಷ ನಿರೂಪಣೆಯು ಹೀಗಿರುವುದು. ಪ್ರಪಂಚಕ್ಕೆ ಕರ್ತೃವಿರುವನು ಎಂಬಲ್ಲಿ, ಪ್ರತ್ಯಕ್ಷ, ಅನುಮಾನ ಮತ್ತು ಆಗಮ ಮೂರೂ ಪ್ರಮಾಣ. ಲೋಕದಲ್ಲಿ ಧನ, ಧಾನ್ಯ, ವಿದ್ಯೆ ಮುಂತಾದ ಪೂರ್ಣ ಸಹಾಯವಿದ್ದರೂ ಕೆಲವರಿಗೆ ಕೆಲವು ಸಂದರ್ಭದಲ್ಲಿ ದುರ್ಘಟ ಕಾರ್ಯವು ಸಿದ್ಧಿಸುವುದು ಎಂಬ ಪ್ರತ್ಯಕ್ಷಾನುಭವವು ಜೀವರಿಗೆ ಜನ್ಮಾಂತರವಿದೆ ಎಂಬುದನ್ನು ಮಾತ್ರವಲ್ಲ ಅವರಿಗೆ ನಿಯಾಮಕನಾದ ಸ್ವಾಮಿ ಒಬ್ಬನಿರುವನು ಎಂಬ ಪ್ರಮೇಯವನ್ನೂ ಸೂಚಿಸುವುದು. ಹೀಗೆಯೇ ಲೋಕದಲ್ಲಿ, ರಥ, ಗೋಪುರ, ಪ್ರಾಸಾದ, ಪ್ರಾಕಾರ ಮೊದಲಾದ ಕಾರ್ಯಸಮೂಹವು ಕರ್ತೃವಾದ ಚೇತನವನ್ನು ಅಪೇಕ್ಷಿಸುವುದು. ಇದರಂತೆಯೇ ಆಕಾಶ ಮೊದಲಾದ ಜಡಾಜಡ ಪ್ರಪಂಚವೂ ಕರ್ತೃವಾದ ಸರ್ವಸ್ವಾಮಿಯನ್ನು ಅಪೇಕ್ಷಿಸುವುದು. ಇದು ಯುಕ್ತಿಯಿಂದ ಈಶ್ವರನನ್ನು ಸಿದ್ಧಿಸುವ ರೀತಿ. "ಏಕಏವ ರುದ್ರೋ" ಸರ್ವಕ್ಕೂ ಮೂಲನಾದವನು ರುದ್ರನು ಒಬ್ಬನೇ"ಸದ್ವೈವ ಸೋಮ್ಯೇದಮಗ್ರ ಆಸೀತ್" ಸೋಮಪಾನಾರ್ಹನಾದ (ಶ್ವೇತಕೇತುವೇ) ಸೃಷ್ಟಿಗೆ ಮೊದಲು. 'ಸತ್' ಎಂಬ ಹೆಸರುಳ್ಳ ತತ್ವ ಮಾತ್ರವಿದ್ದಿತು. ಈ "ಅಸದ್ವಾ ಇದಮಗ್ರ ಆಸೀತ್" ಸೃಷ್ಟಿಗೆ ಮೊದಲು 'ಅಸೀತ್' ಎಂಬ ಹೆಸರಿನ ತತ್ವ ಮಾತ್ರವಿದ್ದಿತು ಎಂದು ಮುಂತಾದ ಶ್ರುತಿಗಳು ಸೃಷ್ಟಿಗೆ ಕಾರಣ ಈಶ್ವರನೆಂದು ಪ್ರತಿಪಾದಿಸುವುವು. ರುದ್ರನೇ

ಈ ಈಶ್ವರ. ಅವನಿಗೆ ನಿರುಪಾಧಿಕವಾದ ಸತ್ತೆ-ಇರುವಿಕೆ-ಇರುವ ನಿಮಿತ್ತದಿಂದ 'ಸತ್' ಎಂದೂ, ಸತ್‌ಸ್ವರೂಪನಾದುದರಿಂದ 'ಅಸತ್' ಎಂದೂ ಹೆಸರು. ಅಸತ್ತೆಂದರೆ ಅಭಾವವಲ್ಲ. ಅಭಾವದಿಂದ ಯಾವ ವಸ್ತುವೂ ಹುಟ್ಟುವುದಿಲ್ಲ. ಪ್ರಾಣಿವರ್ಗದ ಕರ್ಮವೇ ಜಗತ್ತಿನ ಕಾರಣವೆಂದು ಪೂರ್ವಮೀಮಾಂಸಾ ಶಾಸ್ತ್ರದಲ್ಲಿ ಹೇಳಿರುವುದು. ಇದು ಸರಿಯಲ್ಲ. ಕರ್ಮಕ್ಕೆ ತನ್ನದು ಇಂಥಾ ಫಲವೆಂದು ತಿಳಿದು ಫಲವನ್ನು ಕೊಡುವ ಶಕ್ತಿಯಿಲ್ಲ. ಇದುವರೆಗೆ ನಿರೂಪಿತವಾದ ವಿಚಾರಗಳಲ್ಲಿ,ಪ್ರಪಂಚ ಪರಾಧೀನ, ಅಸ್ವತಂತ್ರ ಎಂದೂ ಅದಕ್ಕೆ ಅಪರಾಧೀನ ಸ್ವತಂತ್ರವಾದ ಕಾರಣಬೇಕೆಂದೂ ಅಡಗಿರುವುದು. ಈ ಯುಕ್ತಿಯು ದ್ವೈತವೇದಾಂತ ಸಂಪ್ರದಾಯವನ್ನನುಸರಿಸುವುದು. (ದ್ವೈತಕ್ಕಿಂತ ವೀರಶೈವ ಪ್ರಾಚೀನವಾದುದು. ಸಂ.)

ಇದುವರೆಗಿನ ವಿಚಾರದಿಂದ ಜಡಾಜಡರೂಪವಾದ ಪ್ರಪಂಚವು ಕಾರ್ಯರೂಪವೆಂದೂ ಅದಕ್ಕೆ ಉತ್ಪತ್ತಿ ಮೊದಲಾದ ಅವಸ್ಥೆಯುಂಟಾಗಲು ರುದ್ರನೆಂಬ ಈಶ್ವರನೇ ಕಾರಣನೆಂದೂ ಸಿದ್ಧವಾಯಿತು. ಪ್ರಕೃತ ಈ ರುದ್ರನ ಸ್ವರೂಪವನ್ನು ಸಂಕ್ಷೇಪವಾಗಿ ವಿವರಿಸೋಣ.

ವೇದಾನುಸಾರವಾಗಿ ಪ್ರಪಂಚ ಮೂಲ ತತ್ತ್ವವನ್ನು ನಿರೂಪಿಸುವ ದರ್ಶನಕಾರರ ಪ್ರತಿಕ್ರಿಯೆಯೇ ಇದು. ಈ ಮೂಲ ತತ್ತ್ವದ ವಿಷಯದಲ್ಲಿ ವೇದ ಹೊರತು ಬೇರೆಪ್ರಮಾಣವಿಲ್ಲವೆಂಬುದೇ ಇವರ ಆಶಯ. ಹಿಂದೆ ಹೇಳಿದ ರೀತಿಯಲ್ಲಿ ಪ್ರತ್ಯಕ್ಷ ಮತ್ತು ಅನುಮಾನವನ್ನು ಈ ವಿಷಯದಲ್ಲಿ ಉಪಯೋಗಿಸಿಕೊಂಡರೂ ಅವು ಈ ತತ್ತ್ವಸ್ವರೂಪವನ್ನು ನಿರುಪಾಧಿಕವಾಗಿ ಸ್ಥಾಪಿಸಲಾರವು. ಅವುಗಳಿಗೆ ಬೇರೆವಿಧವಾಗಿ ಗತಿಕಲ್ಪನೆ ಮಾಡಬಹುದೆಂಬ ಭಾವನೆಯು ಅವುಗಳ ಶಕ್ತಿಯನ್ನು ನಾಶಪಡಿಸುವುದು. ನಿಸ್ಸಂದಿಗ್ಧವಾಗಿ ಮೂಲತತ್ತ್ವ ಸಿದ್ಧಿಯಾಗಲು ಅಪೌರುಷೇಯವಾದ ವೇದವೊಂದೇ ಆಧಾರ. ಇದರ ಸಹಾಯದೊರೆತರೆ ಪ್ರತ್ಯಕ್ಷಾನುಮಾನಗಳಿಗೂ ಪೌರುಷೇಯವಾದ ಆಗಮಗಳಿಗೂ ಬಲ ಬರುವುದು. (ವೀರಶೈವ ಧರ್ಮದಲ್ಲಿ ವೇದಗಳಂತೆ ಆಗಮಗಳೂ ಅಪೌರುಷೇಯವಾದುವು. ಇತಿಹಾಸಕ ... ವೇದಗಳಿಂತ ಆಗಮಗಳು

ಪ್ರಾಚೀನವೆಂದು ಹೇಳಿರುವರು. ಆಗಮಗಳು ಪೌರುಷೇಯ ಎಂದು ವಾದಿಸುವ ರೀತಿಯಲ್ಲಿಯೇ ವೇದಗಳನ್ನೂ ಪೌರುಷೇಯಗಳೆನ್ನಲು ದಾರಿಯಿದೆ.-ಸಂ) ಹೀಗೆ ಅವುಗಳಿಗೆ ಬಲವನ್ನು ಸಂಪಾದಿಸಿ ಅವುಗಳಿಂದ ತತ್ತ್ವ ನಿರ್ಣಯ ಮಾಡಬಹುದು ಎಂಬುದು ಇದರ ಅಭಿಪ್ರಾಯ. ಇದು "ಶಾಸ್ತ್ರಯೋನಿತ್ವಾತ್" ಮುಂತಾದ ಬ್ರಹ್ಮಸೂತ್ರಗಳಿಂದ ನಿರ್ಣೀತವಾದ ಪ್ರಮೇಯ. ಇದು ವಿಚಾರಕ್ಕೆ ತತ್ತ್ವಜ್ಞಾನವನ್ನು ಹುಟ್ಟಿಸುವ ಶಕ್ತಿಯಿದೆ. ಪರೋಪದೇಶದಲ್ಲಿ ಶ್ರದ್ಧೆಯಿಟ್ಟರೆ ಜ್ಞಾನಹುಟ್ಟುವುದು ಎಂದು ಶಾಸ್ತ್ರಸಂಸ್ಕಾರವನ್ನು ಬಿಟ್ಟು ಸಾಮಾನ್ಯವಾಗಿ ವ್ಯಾಖ್ಯಾನಮಾಡಬಹುದಾದ ಕ್ರಮಕ್ಕವಕಾಶ ಕೊಡುವುದಿಲ್ಲ. ತತ್ತ್ವಶಾಸ್ತ್ರದದೃಷ್ಟಿಯಿಂದ ವಿಚಾರಮಾಡಲು ಪರತತ್ತ್ವದಲ್ಲಿ ಶ್ರುತಿಯೇ ಪ್ರಮಾಣ, ಅನುಮಾನವಲ್ಲ ಎಂದು ಹೇಳುವುದು ಯುಕ್ತಿರೂಪವೇ ಆಗಿರುವುದು. ಯುಕ್ತಿ ಎಂದರೆ ವಿಚಾರ. ಇದರ ಸೂಕ್ಷ್ಮಗತಿಯೇ ತತ್ವನಿರ್ಣಾಯಕ ಎಂದು ಈ ವಿಚಾರದ ಪರ್ಯವಸಾನಾರ್ಥ. ಈ ಪ್ರಮೇಯ ಶುದ್ಧಿಯು ಇನ್ನೂ ವಿಶದವಾದ ವಿಚಾರವನ್ನು ಪರೀಕ್ಷಿಸುವುದು ವಾಸ್ತವ. ಈ ವಿಚಾರದಿಂದ ಪ್ರಕೃತಕ್ಕೆಹೆಚ್ಚು ಉಪಯೋಗವಿಲ್ಲವಾದುದರಿಂದ, ಒಟ್ಟು ಅಭಿಪ್ರಾಯ ಗ್ರಾಹಕರಮನಸ್ಸಿನಲ್ಲಿರುವುದು. ಮುಂದೆ ನಿರೂಪಿತವಾಗುವ ಪ್ರಮೇಯಗಳ ಗ್ರಹಣದಲ್ಲಿ ಸೌಲಭ್ಯವನ್ನುಂಟು ಮಾಡುವುದೆಂಬ ಅಭಿಪ್ರಾಯದಿಂದ ಇಲ್ಲಿ ಸೂಕ್ಷ್ಮವಾಗಿ ಸೂಚಿಸಿರುತ್ತೇನೆ. ಈ ಪ್ರಮೇಯವನ್ನರಿತ ಸಿದ್ಧಾಂತಕಾರರು ಮುಖ್ಯವಾಗಿ ವೇದಾಗಮ ಪ್ರಮಾಣಗಳ ಆಧಾರದಿಂದ ಪರತತ್ವದ ವಿಷಯವನ್ನು ನಿರ್ಣಯಿಸುವರು. ಸಾಮಾನ್ಯಾಕಾರದ ಯುಕ್ತಿಯು ಈ ನಿರ್ಣಯಕ್ಕೆ ಔಚಿತ್ಯವನ್ನು ಕೊಡುವುದು. ಏವಂಚ, ಸಾಮಾನ್ಯಕಾರವಾದ ಯುಕ್ತಿಯು ಪರತತ್ವದ ಸಾಧಾರಣಾಕಾರವನ್ನೂ, ವೇದಾಗಮಗಳು ಅದರ ವಿಶೇಷಸ್ವರೂಪವನ್ನೂ ತಿಳಿಸುವುವು. ಇದನ್ನನುಸರಿಸಿ ಈ ಎರಡು ಕಕ್ಷೆಯಲ್ಲಿಯೂ ಪರತತ್ತ್ವ ಸ್ವರೂಪವನ್ನು ಹೀಗೆ ನಿರೂಪಿಸಬಹುದು; ಈ ಕ್ರಮದಲ್ಲಿ ಈ ಸಿದ್ಧಾಂತವು ಇತರ ವೇದಾಂತ ದರ್ಶನಗಳನ್ನು ಹೋಲುವುದು.

### ಸಾಮಾನ್ಯಾಕಾರವಾದ ಅನುಮಾನದಿಂದ ಜಗತ್ಕರ್ತೃವಿನ ಸಿದ್ಧಿ

ಜಗತ್ತಿನ ಕರ್ತೃ ಜಗತ್ತಿನ ಮೂಲತತ್ತ್ವವು. ಇದು ಯಾವುದೋ ಒಂದು ಸ್ವತಂತ್ರವಾಗಿ ವಿವಕ್ಷಿತವಾದ ಆಕಾರವಿಲ್ಲದೆ ಬಿದ್ದಿದ್ದ ವಸ್ತುವನ್ನುಪ

ಯೋಗಿಸಿಕೊಂಡು, ಕುಂಬಾರನು ಮಣ್ಣಿನಿಂದ ಗಡಿಗೆಯನ್ನು ಮಾಡುವಂತೆ ಜಗತ್ತನ್ನು ಸೃಷ್ಟಿಮಾಡಿದನೆಂದು ನ್ಯಾಯ ದರ್ಶನವು ಹೇಳುವಂತೆ ಅಂಗೀಕರಿಸುವದು. ಈ ಕರ್ತೃ ಮೂಲತತ್ತ್ವವೆಂಬ ಪ್ರಮೇಯಕ್ಕನುಗುಣವಲ್ಲ. ಪ್ರಪಂಚದ ಕರ್ತೃ ಯಾರು? ಎಂದು ವಿಚಾರ ಮಾಡುವವರಿಗೆ ಪ್ರಪಂಚದ ಮೂಲತತ್ವವು ಯಾವುದು? ಎಂಬುದೇ ಮುಖ್ಯ ಆಶಯ. ಪ್ರಪಂಚದ ಮೂಲತತ್ವವೆಂದರೆ ಪ್ರಪಂಚಕ್ಕೆ ಸತ್ತೆಯನ್ನು ಕೊಡುವ ತತ್ತ್ವ. ಇದು ಬೇರೆ, ಕರ್ತೃ ಬೇರೆ ಎಂದು ಒಪ್ಪಿದಲ್ಲಿ ಸರ್ವ ನಿಯಾಮಕವಾದ ತತ್ವವನ್ನು ಕಂಡು ಹಿಡಿಯಲು ಸಾಧ್ಯವಿಲ್ಲ. ಸ್ವತಂತ್ರವಾಗಿ ಬಿದ್ದಿದ್ದ ಮಣ್ಣಿನಿಂದ ಮಡಕೆಯನ್ನು ಮಾಡಿದವರು ಯಾರು ಎಂದು ಕೇಳಿದರೆ 'ಕುಂಬಾರ' ಎಂಬುದು ಸಮಂಜಸವಾದ ಉತ್ತರ. ಇದರಂತೆ ಪ್ರಪಂಚದ ವಿಷಯದಲ್ಲಿ ಹೇಳುವುದು ಸಾಧ್ಯವಲ್ಲ. ಪ್ರಪಂಚದ ಉಪಾದಾನವಾದ ಪ್ರಕೃತಿಯಿಂದ ಜಗತ್ತನ್ನು ಯಾರು ಮಾಡಿದರು ಎಂಬ ಪ್ರಶ್ನೆ ಹುಟ್ಟಲು ನ್ಯಾಯವಿಲ್ಲ. ಈ ಪ್ರಶ್ನೆಗೆ ಹಿಂದೆ ಪ್ರಪಂಚಕ್ಕೆ ಉಪಾದಾನವೆನಿಸಿದ ಪ್ರಕೃತಿಯು ಸ್ವತಂತ್ರವಾಗಿ ಬಿದ್ದಿದ್ದಿತು. ಅದನ್ನು ಒಬ್ಬ ಚೇತನನು ಉಪಯೋಗಿಸಿ ಪ್ರಪಂಚವನ್ನು ಸೃಷ್ಟಿಸುವ ಸಂಭವವುಂಟೆಂದು ಸಿದ್ಧವಾಗಿರಬೇಕು. ಪ್ರಪಂಚಕ್ಕೆ ಉಪಾದಾನವಂತೂ ಬೇಕು. ಇದಕ್ಕೆ ಪ್ರಕೃತಿ ಎಂದು ಹೆಸರಿಡುವುದೂ ಸುಲಭ. ಆದರೆ ಸ್ವತಂತ್ರವಾಗಿ ಬಿದ್ದಿದ್ದಿತು. ತನ್ನಲ್ಲಿ ಒಂದು ವಿಕಾರಪಡಿಸಲು ಒಬ್ಬ ಕರ್ತೃವನ್ನು ಬೇಡಿತು ಎಂದು ಹೇಳುವುದು ಮಾತ್ರ ಕಷ್ಟ. ಇದಕ್ಕಾಧಾರವಿಲ್ಲ. ಪ್ರಪಂಚದ ಕರ್ತೃ ಯಾರೆಂದು ಕೇಳುವವರಿಗೆ ಪ್ರಪಂಚದ ಸತ್ತೇ ಮೊದಲಾದ ಎಲ್ಲ ಧರ್ಮಕ್ಕೂ ಯಾರು ನಿಯಾಮಕ ಎಂಬುದೇ ಮುಖ್ಯ ಆಶಯ. ಇದಕ್ಕನುಗುಣವಾಗಿ ಪ್ರಪಂಚ ಕರ್ತೃವನ್ನು ನಿರ್ಣಯಿಸುವುದೆಂದರೆ ಅದರ ಸತ್ತಾದಿ ಧರ್ಮಗಳಿಗೆ ಮೂಲಭೂತವಾದ ತತ್ತ್ವವನ್ನು ನಿರ್ಣಯಿಸುವುದೆಂದರ್ಥ. ಈ ಪ್ರಮೇಯವನ್ನಂಗೀಕರಿಸಿ ತತ್ವ ನಿರ್ಣಯಮಾಡುವ ವೇದಾಂತಗಳು ಎರಡು ಸಂಪ್ರದಾಯಗಳನ್ನು ಅನುಸರಿಸುವವು. ಒಂದು ಕರ್ತೃವಾದ ಈಶ್ವರನು ಸ್ವತಂತ್ರನಾಗಿ ಪ್ರಪಂಚದ ಸತ್ತಾದಿಗಳಿಗೆ ನಿಯಾಮಕನಾಗಿ, ಈ ಅರ್ಥದಲ್ಲಿ ಪ್ರಪಂಚದ ಕಾರಣನೆನಿಸುವನೆಂದು ದ್ವೈತ ವೇದಾಂತದ ಸಂಪ್ರದಾಯ. ಅಂತಹ ಈಶ್ವರನು ಪ್ರಪಂಚದ

ಉಪಾದಾನ ಕಾರಣನೂ ಹೌದು ಎಂದು ವಿಶಿಷ್ಟಾದ್ವೈತ ವೇದಾಂತ. ಮತ್ತು ಸಗುಣಬ್ರಹ್ಮಪರವಾದ ಭಾಗದಲ್ಲಿ ಅದ್ವೈತ ವೇದಾಂತ ಇವುಗಳ ಸಂಪ್ರದ್ರಾಯ. ಪ್ರಕೃತ ಶಿವಾದ್ವೈತ ಸಿದ್ಧಾಂತವು ಈ ಎರಡನೇ ಮಾರ್ಗವನ್ನು ಅನುಸರಿಸುವುದು. ಈಶ್ವರನು ಪ್ರಪಂಚದ ಉಪಾದಾನ ಮತ್ತು ನಿಮಿತ್ತ ಕಾರಣನೆಂದು ಈ ಸಿದ್ಧಾಂತದ ಅಂಗೀಕಾರ. ಈಶ್ವರನು ಪ್ರಪಂಚದ ಉಪಾದಾನನೆನಿಸಿದ ಪ್ರಕೃತಿಯು ಪರ್ಯವಸಾನದಲ್ಲಿ ಈಶ್ವರನಲ್ಲಿಯೇ ಅಡಗಿರುವುದು. ಅದು ಈಶ್ವರನ ಸ್ವರೂಪವೇ ಆಗಿರುವುದು; ಎಂಬೀ ಮುಂತಾದ ಅರ್ಥವನ್ನು ಕೊಡುವುದು, ಉಪಾದಾನಸತ್ತೆಯೇಕಾರ್ಯಸತ್ತೆಯಾದುದರಿಂದ ಉಪಾದಾನ ಸ್ವರೂಪನಾದ ಈಶ್ವರನೇ ಪ್ರಪಂಚ ಸತ್ತೆಗೂ ಮೂಲವೆಂಬರ್ಥ ಇದರಿಂದೇರ್ಪಡುವುದು. ಅವನ್ನುಳಿದು ಪ್ರಪಂಚವಿಲ್ಲವೆಂಬುದು ಇದರ ಮುಖ್ಯಾರ್ಥ. ಅವನು ನಿಮಿತ್ತ ಕಾರಣನೆಂಬುವುದರಿಂದ ಪ್ರಪಂಚವನ್ನು ಸೃಷ್ಟಿಮಾಡಲು ಉಪಯುಕ್ತವಾದ ಜ್ಞಾನಶಕ್ತಿ ಮುಂತಾದ ಧರ್ಮಗಳು ಅವನಲ್ಲಿ ಸಿದ್ಧವಾಗಿ, ಸರ್ವಕ್ಕೂ ನಿಮಿತ್ತನಾದ ಅವನು ಸರ್ವಜ್ಞತ್ವ, ಸರ್ವಶಕ್ತಿತ್ವ, ಸರ್ವವ್ಯಾಪಿತ್ವ ಎಂಬೀ ಮುಂತಾದ ರೂಪದಲ್ಲಿ ಸಿದ್ಧಿಸುವುದು.

ಹೀಗೆ ಸಾಮಾನ್ಯವಾಗಿ ಅನುಮಾನದಿಂದೇರ್ಪಟ್ಟ ಪ್ರಮೇಯದ ವಿವರವು ಶ್ರುತಿ ಮತ್ತು ಆಗಮದಿಂದ ಸಿದ್ಧಿಸುವುದು.

"ನೇತಿ ನೇತಿ" (ಬ್ರಹ್ಮನು) ಇದಲ್ಲ, ಇದಲ್ಲ; "ಏಕಮೇವಾ ದ್ವಿತೀಯಂ ಬ್ರಹ್ಮ" "ಬ್ರಹ್ಮವಸ್ತು ಒಂದೇ ಅದ್ವಿತೀಯ" ಎಂಬ ಮುಂತಾದ ಶ್ರುತಿಯು ಬ್ರಹ್ಮತತ್ವದ ವೈಶಿಷ್ಟ್ಯವನ್ನು ಹೇಳುವುದು. ಅದ್ವೈತ ವೇದಾಂತವು ಈ ವಾಕ್ಯಗಳ ಆಧಾರದಿಂದ ಎಂದರೆ "ನೇತಿ ನೇತಿ" ಎಂಬಲ್ಲಿ ಬ್ರಹ್ಮನಲ್ಲಿ ಯಾವ ಧರ್ಮವೂ ಇಲ್ಲವೆಂದೇರ್ಪಡುವುದೆಂದೂ, "ಏಕಮೇವಾದ್ವಿತೀಯಂ" ಎಂಬುದರಿಂದ ಬ್ರಹ್ಮನು ಸಜಾತೀಯ ವಿಜಾತೀಯ ಸ್ವಗತ ಭೇದ ವರ್ಜಿತನೆಂದೇರ್ಪಡುವುದೆಂದೂ ವ್ಯಾಖ್ಯಾನ ಮಾಡಿ, ಇದೇ ನ್ಯಾಯವನ್ನು ಎಲ್ಲ ಶ್ರುತಿಗೂ ಯೋಜನಮಾಡಿ, ಶ್ರುತಿಸಿದ್ಧನಾದ ಬ್ರಹ್ಮನು ನಿರ್ಗುಣ, ಅದು ಒಂದೇ ಸತ್ಯ,

ಮಿಶ್ಯದ್ದು ಮಿಥ್ಯೆಯೆಂದು ಸಿದ್ಧಾಂತಿಸುವುದು ಇದು ಸರಿಯಲ್ಲ. "ನೇತಿ ನೇತಿ" ಎಂಬ ವಾಕ್ಯದ ಪೂರ್ವದಲ್ಲಿ ಉಪನಿಷತ್ತು ಮೂರ್ತಾಮೂರ್ತೋಭಯ ಪ್ರಪಂಚವನ್ನು ಪ್ರಸಕ್ತಿಗೆ ತಂದು ಅದನ್ನು ಬ್ರಹ್ಮನಲ್ಲಿ ನಿಷೇಧಿಸುವುದೇ ಹೊರತು ಅದು ಬ್ರಹ್ಮನ ಧರ್ಮವನ್ನು ನಿಷೇಧಿಸುವುದಿಲ್ಲ.ಎಂದರೆ ಈ ಶ್ರುತಿಗೆ ಬ್ರಹ್ಮನು ನಿರ್ಗುಣನೆಂದರ್ಥವಲ್ಲ. "ಏಕಮೇವಾದ್ವಿತೀಯಂ" ಮುಂತಾದ ಉಪನಿಷತ್ತು 'ಬ್ರಹ್ಮನು ಸೃಷ್ಟಿಗೆ ಮೊದಲು ಕೇವಲ ಅದ್ವೈತ ರೂಪ'ನೆಂದು ಬೋಧಿಸುವುದೇ ಹೊರತು ಬ್ರಹ್ಮವ್ಯತಿರಿಕ್ತವಾದ ಪ್ರಪಂಚವನ್ನು ಅದು ನಿಷೇಧಿಸುವುದಿಲ್ಲ. "ಕೇವಲೋನಿರ್ಗುಣಶ್ಚ" ಎಂಬಲ್ಲಿ ನಿರ್ಗುಣ ಎಂಬ ಪದವು ಬ್ರಹ್ಮನು ನಿರ್ಗುಣ ಅಥವಾ ಧರ್ಮರಹಿತನೆಂದು ಹೇಳುವುದಿಲ್ಲ. ಅದು ಬ್ರಹ್ಮನಲ್ಲಿ ಸತ್ವ, ರಜಸ್ ಮತ್ತು ತಮಸ್ಸೆಂಬ ಪ್ರಕೃತಿ ಗುಣಗಳನ್ನು ನಿಷೇಧಿಸುವುದು. ಹೀಗೆ ಶ್ರುತಿಗೆ ವ್ಯಾಖ್ಯಾನ ಮಾಡುವುದೇ ರೇವಣಸಿದ್ಧ, ನೀಲಕಂಠ ಮತ್ತು ಶ್ರೀಪತಿ ಮೊದಲಾದ ಸುಪ್ರತಿಷ್ಠಿತ ಜ್ಞಾನಿಗಳಿಗೆ ಸಮ್ಮತ. ಸೃಷ್ಟಿಗೆ ಮೊದಲ ಬ್ರಹ್ಮಸ್ವರೂಪದಲ್ಲಿ ಅದ್ವೈತವೆಂದರೆ ಜಗದುಪಾದಾನವಾದ ಪ್ರಕೃತಿಯು ಬ್ರಹ್ಮನ ಶಕ್ತಿರೂಪವಾಗಿ ಹೇಗೆ ಲೋಹಾಕರ್ಷಣ ಶಕ್ತಿಯು ಅಯಸ್ಕಾಂತದಿಂದ ಅಭಿನ್ನವೋ, ದಾಹಕ ಶಕ್ತಿಯು ಅಗ್ನಿಯಿಂದ ಅಭಿನ್ನವೋ ಹಾಗೆ ಬ್ರಹ್ಮನಿಂದ ಅಭಿನ್ನವಾಗಿರುವುದೆಂದು ಅಭಿಪ್ರಾಯ. ಹೀಗೆ ಶಕ್ತವಾದ ಬ್ರಹ್ಮವಸ್ತು ಸಗುಣ. ಸಗುಣತ್ವ, ಬ್ರಹ್ಮತ್ವ, ಈಶ್ವರತ್ವ ಮೊದಲಾದ ಧರ್ಮಗಳು ನಿರ್ಗುಣ ಬ್ರಹ್ಮನಲ್ಲಿ ಕಲ್ಪಿತ ಮಾತ್ರವೆಂದು ಹೇಳುವ ಅದ್ವೈತ ವೇದಾಂತವು, ಭಕ್ತಿ, ಕ್ರಿಯೆ, ಜ್ಞಾನ ಎಂಬ ಸಾಧನವನ್ನು ಬೋಧಿಸುವ ಶಾಸ್ತ್ರಗಳಿಗೆ ಗೌರವವನ್ನು ಕೊಟ್ಟಿಲ್ಲ. ಈ ಸಾಧನವಿಲ್ಲದೆ ಮಾನವನಿಗೆ ಐಹಿಕಾಮುಷ್ಮಿಕ ಶ್ರೇಯಸ್ಸಿಲ್ಲ. ಏವಂಚ, ಶ್ರುತ್ಯುಕ್ತವಾದ ಬ್ರಹ್ಮ ಸಗುಣ. ಈ ಬ್ರಹ್ಮನನ್ನೇ ರುದ್ರ ಕಠವಲ್ಲಿ, ಹಂಸೋಪನಿಷತ್, ಲಿಂಗಪುರಾಣ ಮೊದಲಾದುವು 'ಲಿಂಗಂ ಬ್ರಹ್ಮ ಸನಾತನಂ' ಎಂದು ಉದ್ಘೋಷಿಸುವುವು. ರುದ್ರನೆಂಬ ಲಿಂಗವೇ ನಿರುಪಮ ಪರಬ್ರಹ್ಮ ಶಬ್ದವಾಚ್ಯವೆಂದು ಇದರ ಅರ್ಥ. 'ಸತ್ಯಕಾಮಃ ಸತ್ಯಸಂಕಲ್ಪಃ' ಮೊದಲಾದ ಶ್ರುತಿಯು ಬ್ರಹ್ಮನು ಸ್ವಾಭಾವಿಕಾನಂತ ಕಲ್ಯಾಣಗುಣ ರೂಪ

ನೆಂದು ಬೋಧಿಸುವುದು. 'ಪ್ರಧಾನಕ್ಷೇತ್ರಜ್ಞ ಪತಿರ್ಗುಣೇಶಃ' ಮೊದಲಾದ ಶ್ರುತಿಯು ಸರ್ವಜ್ಞತ್ವಾದಿ ಗುಣಗಳುಳ್ಳ ಬ್ರಹ್ಮನು ಶುದ್ಧ ಚಿದ್ರೂಪನೆಂದು ಸಾರುವುದು. 'ಸ್ಥಿರೇಭಿ ರಂಗೈಃ ಪುರುರೂಪ ಉಗ್ರಃ'ಎಂಬ ಮುಂತಾದ ಶ್ರುತಿಯು ರುದ್ರರೂಪಿ ಬ್ರಹ್ಮನಿಗೆ ಲೀಲಾ ದಿವ್ಯಮಂಗಳ ವಿಗ್ರಹ ಉಂಟೆಂದು ಬೋಧಿಸುವುದು. ಬ್ರಹ್ಮನ ಈ ವಿಗ್ರಹ ನಿತ್ಯ. ಇದಕ್ಕೆ ಬ್ರಹ್ಮನಿಗೆ ಸುಖ ದುಃಖಾನುಭವವಿಲ್ಲವೆಂಬುದೇ ಜ್ಞಾಪಕ. ಈ ಅಂಶವನ್ನು 'ದ್ವಾಸುಪರ್ಣಾ–ಅನಶ್ನನ್ನನ್ಯೋ' ಎಂಬ ಶ್ರುತಿಯು ದೃಢಪಡಿಸುವುದು. ಈ ವಿಚಾರಗಳು ಬ್ರಹ್ಮನು ಸರ್ವಥಾ ನಿರ್ಗುಣನಲ್ಲವೆಂದು ದೃಢಪಡಿಸುವವು.

ಗುಣಪೂರ್ಣನಾದ ಬ್ರಹ್ಮನು ಜಗತ್ತಿನ ಕರ್ತೃ ಎಂದು 'ಯತೋವಾ ಇಮಾನಿ ಭೂತಾನಿ–' ಎಂಬ ಶ್ರುತಿಯು ಹೇಳುವುದು. 'ಸ್ವಾಭಾವಿಕಾನಂತ ಶಕ್ತಿವಿಶಿಷ್ಟ ಬ್ರಹ್ಮನ ದೆಸೆಯಿಂದ ಜಗತ್ತು' ಎಂದು ಇದರ ಅಭಿಪ್ರಾಯ. "ಅಪಾಣಿ ಪಾದೋಹಮಚಿಂತ್ಯ ಶಕ್ತಿಃ" ಎಂಬ ಶ್ರುತಿಯು ಬ್ರಹ್ಮನು ಬಾಹ್ಯ ಕಾರಣಾಪೇಕ್ಷೆಯಿಲ್ಲದೆ ಜಗತ್ಕರ್ತೃ ಎಂದು ಉಪದೇಶಿಸುವುದು. 'ತಜ್ಜಲಾನಿತಿ ಶಾಂತ ಉಪಾಸೀತ' ಎಂಬ ಶ್ರುತಿಯು ಹೇಗೆ ಸಮುದ್ರೋದ್ಘೋಷಿಸುವುದೋ ಫೇನತರಂಗವೊದಲಾದುವು ಸಮುದ್ರಾತ್ಮಕವೋ ಹಾಗೆಯೇ ಉತ್ಪತ್ತಿ ಮೊದಲಾದ ಅವಸ್ಥೆಯುಳ್ಳ ಜಗತ್ತೂ ಬ್ರಹ್ಮಾತ್ಮಕವೆಂದು ಉದ್ಘೋಷಿಸುವುದು. "ಮಾಯಾಂತು ಪ್ರಕೃತಿಂ ವಿದ್ಧಿ ಮಾಯಿನಂತು ಮಹೇಶ್ವರಂ" ಎಂಬುದು ಸ್ವತಂತ್ರವಾದ ಬ್ರಹ್ಮನವಶ 'ಮಾಯೆ' ಎಂದು ಹೇಳುವುದು. ಇದೇ ಬ್ರಹ್ಮನ ಶಕ್ತಿ. ಈ ಶಕ್ತಿಯು ಬ್ರಹ್ಮನ ಏಕದೇಶವೆಂದು 'ಪಾದೋಸ್ಯ' ಮುಂತಾದ ಶ್ರುತಿಯು ತಿಳಿಸುವುದು. "ಯತೋವಾ " ಎಂಬ ಅಂಶವು ಬ್ರಹ್ಮನು ಜಗತ್ತಿನ ನಿಮಿತ್ತಕಾರಣನೆಂದೂ, "ಯತ್ಪ್ರಯಂತಿ" ಎಂಬ ಭಾಗವು ಬ್ರಹ್ಮನು ಉಪಾದಾನ ಕಾರಣನೆಂದೂ ಬೋಧಿಸುವುದರ ಮೂಲಕ, ಒಟ್ಟಿನ ಮೇಲೆ ಬ್ರಹ್ಮನು ಜಗತ್ತಿನ ಅಭಿನ್ನ ನಿಮಿತ್ತೋಪಾದಾನ ಕಾರಣನೆಂದು ಏರ್ಪಡಿಸುವುದು. ಹೀಯೇ "ಯಃ ಪೃಥಿವ್ಯಾಂತಿಷ್ಠನ್" "ಸರ್ವೋವೈ

ರುದ್ರಃ" "ಸರ್ವಂ ಖಲ್ವಿದಂ ಬ್ರಹ್ಮ" ಎಂಬ ಮುಂತಾದ ವಾಕ್ಯಾಂಶವು ಶಿವ ರೂಪಿ ಬ್ರಹ್ಮನಿಗೆ. ಪೃಥ್ವಿ ಮೊದಲಾದುದು ಶರೀರ, ಅದು ಸರ್ವಾಂತರ್ಯಾಮಿ. ಯಾವಾಗಲೂ ಬಾಧ್ಯವಲ್ಲ, ಸರ್ವಕಾರಣ, ಸರ್ವಶಬ್ದವಾಚ್ಯ, ಸರ್ವೇಶ್ವರ, ಸರ್ವಾತ್ಮಕ– ಎಂಬ ಮುಂತಾದ ಬ್ರಹ್ಮನ ಅನಂತ ಕಲ್ಯಾಣ ಗುಣಗಳನ್ನು ಬೋಧಿಸುವುದು. "ಶಕ್ತೇಃ ಸಂಕೋಚ ಭಾವೇನ ಸೃಷ್ಟೇಃ ಪೂರ್ವಂ ಮಹೇಶ್ವರಃ ನಿರಂಶೋ ನಿರ್ಗುಣ ಶ್ಚೇತಿ ವೇದಾಂತೇಷು ಪ್ರಗೀಯತೆ" ಸೃಷ್ಟಿಗೆ ಮೊದಲು ಮಹೇಶ್ವರನು ಅವನ ಶಕ್ತಿಯು ಸಂಕೋಚಭಾವವನ್ನು ಹೊಂದುವ ನಿಮಿತ್ತದಿಂದ ನಿರಂಶ, ನಿರ್ಗುಣ ಮುಂತಾದ ವೇದಾಂತದಲ್ಲಿ ಪ್ರಸಿದ್ಧನಾಗಿರುವನು"ಎಂಬೀ ಮುಂತಾದ ಶೈವಾಗಮವು ಶ್ರುತಿಸಿದ್ಧವಾದ ಪ್ರಮೇಯವನ್ನೇ ದೃಢಪಡಿಸುವುದು. ಹೀಗೆ ಬ್ರಹ್ಮನಾದ ಶಿವನೇ ಸರ್ವಾತ್ಮಕನಾಗಿ ಅದ್ವಿತೀಯನಾದುದರಿಂದ ಈ ಸಿದ್ಧಾಂತಕ್ಕೆ ಶಿವಾದ್ವೈತವೆಂದು ಹೆಸರು. ಈ ಸಿದ್ಧಾಂತದಲ್ಲಿ ಶಿವಾಗಮಕ್ಕೆ ಕೊಟ್ಟಿರುವ ಪ್ರಾಧಾನ್ಯವೂ, ಶಿವನು ಸರ್ವಾತ್ಮಕ ಮತ್ತು ಅದ್ವಿತೀಯ ಎಂಬುದಕ್ಕೆ ಮಾಡಿರುವ ವ್ಯಾಖ್ಯಾನ ವಿಶೇಷವೂ ನವೀನವೂ ಆದುದು. ಪ್ರಸಿದ್ಧ ವೇದಾಂತಗಳಲ್ಲಿ ಶೈವಾಗಮಕ್ಕೆ ಪ್ರಾಶಸ್ತ್ಯ ದೊರೆತಿಲ್ಲ.'ಬ್ರಹ್ಮಶಬ್ದ' ರುದ್ರಪರವೆಂಬುದು ಅಂಗೀಕೃತವಾಗಿಲ್ಲ. ಸಾಮಾನ್ಯವಾಗಿ ಬ್ರಹ್ಮಶಬ್ದ ನಾರಾಯಣ ಪರವೆಂದು ಟೀಕಿಸುವುದು ವಾಡಿಕೆ. ಅವನು ಸರ್ವಾತ್ಮಕ ಮತ್ತು ಅದ್ವಿತೀಯನೆಂಬುದಕ್ಕೆ ವಿಭಿನ್ನ ವೇದಾಂತ ದರ್ಶನಗಳಲ್ಲಿ ವಿಭಿನ್ನಾರ್ಥ ಕಂಡುಬರುವುದು. ಅದ್ವೈತ ವೇದಾಂತದಲ್ಲಿ ಸರ್ವಾತ್ಮಕತ್ವವು ಬ್ರಹ್ಮನಲ್ಲಿ ಆರೋಪಿತ, ಸರ್ವವೆಂಬುದೇ ಮಿಥ್ಯೆ ಎಂಬುದೇ ಇದರ ಕಾರಣ ಎಂದೂ, ಅದ್ವಿತೀಯವೆಂಬುದು ಬ್ರಹ್ಮನು ನಿರ್ಗುಣನೆಂದೂ ಬೋಧಿಸುವುದು. ವಿಶಿಷ್ಟಾದ್ವೈತ ಮತ್ತು ದ್ವೈತ ವೇದಾಂತಗಳಲ್ಲಿ ಬ್ರಹ್ಮ ಸರ್ವಾತ್ಮಕನೆಂದರೆ ಸರ್ವಾಂತರ್ಯಾಮಿಯಾಗಿ ಸರ್ವ ಸತ್ತಾಪ್ರದನೆಂದರ್ಥ. ಅದ್ವಿತೀಯನೆಂದರೆ ಸಮಾಧಿಕರಹಿತನೆಂದರ್ಥ.

ಈ ಸಂದರ್ಭದಲ್ಲಿ ಗಮನಿಸಬೇಕಾದ ಮತ್ತೊಂದಂಶ."ಮಾಯಾಂತು ಪ್ರಕೃತಿಂ ವಿದ್ಧಿ ಮಾಯಿನಂತು ಮಹೇಶ್ವರಂ" ಎಂಬೀ ಮುಂತಾದ ಶ್ರುತಿಯಲ್ಲಿ ಹೇಳಿರುವಂತೆ ಪ್ರಪಂಚಕ್ಕೆ ಉಪಾದಾನವಾದ ಪ್ರಕೃತಿ ಎಂಬುದು ಬ್ರಹ್ಮನ

ಶಕ್ತಿ ಎಂದು ಎಲ್ಲ ವೇದಾಂತವೂ ಒಪ್ಪುವುದು. ಆದರೆ ಪರಮಾರ್ಥ ದೃಷ್ಟಿಯಿಂದ ಇದಕ್ಕೆ ವ್ಯಾಖ್ಯಾನ ಭೇದವಿರುವುದು. ನಿರ್ಗುಣ ಬ್ರಹ್ಮ ಮಾತ್ರ ಸತ್ಯವೆಂದೊಪ್ಪುವ ಅದ್ವೈತದಲ್ಲಿ ಬ್ರಹ್ಮನ ಶಕ್ತಿ ಎಂಬುದು ಆರೋಪಿತ. ಬ್ರಹ್ಮನ ಶಕ್ತಿ ಎಂಬಲ್ಲಿ ತೋರುವ ಬ್ರಹ್ಮ ಶಕ್ತಿಗಳ ಭೇದ ಗರ್ಭಿತವಾದ ಸಂಬಂಧವೇ ಈ ಅಂಗೀಕಾರದ ಕಾರಣ. ಈ ಶಕ್ತಿಯೇ ಈ ವೇದಾಂತದಲ್ಲಿ 'ಅವಿದ್ಯೆ' ಎನ್ನುವ ವಸ್ತು. ಈ ಕಾರಣದಿಂದ ಇದಕ್ಕೆ [ಅವಿದ್ಯೆಗೆ] ಬ್ರಹ್ಮ, ಭೇದವನ್ನು ಒಪ್ಪುವುದಿಲ್ಲ. ಅವಿದ್ಯೆಯು ಬ್ರಹ್ಮನಲ್ಲಿ ಆರೋಪಿತ, ಮತ್ತು ಬ್ರಹ್ಮನಿಂದ ಭಿನ್ನ. ದ್ವೈತ ವೇದಾಂತದಲ್ಲಿ ಮಾಯೆಯು ಬ್ರಹ್ಮಾಧೀನವೆಂಬ ಅರ್ಥದಲ್ಲಿ ಬ್ರಹ್ಮನ ಶಕ್ತಿ ಎನಿಸುವುದು. ಆದರೆ ಬ್ರಹ್ಮನಿಗೂ ಮಾಯೆ ಎಂಬ ಈ ಶಕ್ತಿಗೂ ಅಭೇದವಿಲ್ಲ. ಒಟ್ಟನಮೇಲೆ ಬ್ರಹ್ಮನೂ ಬ್ರಹ್ಮ ಸಂಬಂಧಿಯಾದ ಈ ಶಕ್ತಿಗೂ ಅಭೇದವೆಂಬುದು ನವೀನ ಕಲ್ಪ. ಈ ಶಕ್ತಿಯು ಸತ್ಯ ಮತ್ತು ಬ್ರಹ್ಮನಲ್ಲಿ ಒಂದು ವಿಶೇಷವೆಂಬುದು ಈ ಕಲ್ಪದಲ್ಲಿ ಅಭಿಪ್ರೇತವಾದ ಪ್ರಮೇಯ. ಈ ದೃಷ್ಟಿಯನ್ನು ಮನಸ್ಸಿನಲ್ಲಿಟ್ಟರೆ ಶಿವಾದ್ವೈತವೆಂಬಲ್ಲಿ ಅದ್ವೈತ ಶಬ್ದಕ್ಕೆ ಒಂದು ಸಾಂಕೇತಿಕಾರ್ಥವೇ ಹೊರತು ಪ್ರಸಿದ್ಧಾದ್ವೈತಕ್ಕೂ ಅದಕ್ಕೂ ಸಂಬಂಧವಿಲ್ಲವೆಂದು ವ್ಯಕ್ತವಾಗುವುದು. ಸಾಧರ್ಮ್ಯ, ವೈಧರ್ಮ್ಯ ನಿರ್ಣಯದಲ್ಲಿ ಉಪಯುಕ್ತವಾದುದು ಅರ್ಥ ಸಾಮ್ಯ ಅಥವಾ ವೈಷಮ್ಯ, ಶಬ್ದ ಸಾಮ್ಯ ಅಥವಾ ವೈಷಮ್ಯವಲ್ಲ. ಈ ಕೆಳಗೆ ಕಂಡ ವಿಚಾರವೂ ಇದೇ ಪ್ರಮೇಯಕ್ಕೆ ಸಾಧಕವಾಗಿರುವುದು.

## ಬ್ರಹ್ಮ ಮತ್ತು ಪ್ರಪಂಚ ಇವುಗಳ ಸಂಬಂಧ

ಬ್ರಹ್ಮನ ಪ್ರಪಂಚಕಾರಣತ್ವವು ವಾಸ್ತವವಾದುದು. ಆರೋಪಿತವಲ್ಲ. ಪ್ರತ್ಯಕ್ಷ ಮೊದಲಾದ ಪ್ರಮಾಣಗಳಿಂದ ಸಿದ್ಧವಾದ ಪ್ರಪಂಚವು ಅರ್ಥಸಿದ್ಧಿ ಮತ್ತು ಕ್ರಿಯಾಸಿದ್ಧಿಯುಳ್ಳದು. ಈ ಕಾರಣದಿಂದ ಅದು ಸತ್ಯ, ಮಿಥ್ಯೆಯಲ್ಲ; ಬ್ರಹ್ಮನಲ್ಲಿ ಆರೋಪಿತವೂ ಅಲ್ಲ. ಚೇತನನಾದ ಬ್ರಹ್ಮನಿಂದ ಜಡವಾದ ಪ್ರಪಂಚದ ಉತ್ಪತ್ತಿ ಹೇಗೆ? ಎಂದು ಸಂದೇಹಪಡಬಾರದು. ಬ್ರಹ್ಮತತ್ವವು ಅಘಟಿತಘಟನಾಶಕ್ತಿಯುಳ್ಳದು. ಅದು ಜಡವಸ್ತುವನ್ನು ಸೃಷ್ಟಿಮಾಡುವು

ದೆಂಬಲ್ಲಿ ಆಶ್ಚರ್ಯವಿಲ್ಲಿ. ಪ್ರಪಂಚದಲ್ಲಿಯೂ ಜೇಡರ ಹುಳುವೆಂಬ ಚೇತನ ವಸ್ತು ಅಚೇತನ ತಂತುವನ್ನು ಸೃಷ್ಟಿ ಮಾಡುವುದು ಅನುಭವದಲ್ಲಿರುವುದು. ಇದೇ ನ್ಯಾಯವನ್ನೇ ಬ್ರಹ್ಮನಲ್ಲಿಯೂ ಅನ್ವಯಿಸಬಹುದು. ಪ್ರಪಂಚವು ಬ್ರಹ್ಮಜ್ಞಾನದಿಂದ ನಾಶಹೊಂದುವುದಿಲ್ಲ; ಜ್ಞಾನಾನಂತರವೂ ಪ್ರಪಂಚವು ಸತ್ಯವಾಗಿಯೇ ಜ್ಞಾನಿಗಳ ಅನುಭವಕ್ಕೆ ಗೋಚರವಾಗಿರುವುದೆಂದು ಶ್ರುತ್ಯಾಗಮಗಳಿಂದ ಸಿದ್ಧ. ಜೀವನು ಬ್ರಹ್ಮಸ್ವರೂಪನಲ್ಲ. ಅವನು ಜಡಾಜಡ. ಬ್ರಹ್ಮ ಕೇವಲ ಚಿದ್ರೂಪ. ಹೀಗೆ ಇವರೀರ್ವರೂ ಪರಸ್ಪರ ವಿರುದ್ಧ ಸ್ವಭಾವದವರು. ಒಟ್ಟಿನ ಮೇಲೆ ಬ್ರಹ್ಮಸ್ವರೂಪವು "ವೇದಾಗಮೋಭಯ ವೇದಾಂತ ಪ್ರತಿಪಾದಿತ ಸ್ವಾಭಾವಿಕಾನಂತ ಶಕ್ತಿವಿಶಿಷ್ಟ ಜಗದುಭಯ ಕಾರಣ ಪಶುಪಾಶನಿಯಾಮಕ ಸಕಲ ನಿಷ್ಕಲ ಸ್ಥೂಲ ಸೂಕ್ಷ್ಮ ಚಿದಚಿತ್ಪ್ರಕಾಶಕ ಸತ್ಯ ಜ್ಞಾನಾನಂತಕಲ್ಯಾಣಗುಣವಿಭವಾಶ್ರಯತ್ವಂಬ್ರಹ್ಮತ್ವಂ," ಎಂದೂ, ಜೀವಸ್ವರೂಪವು "ಅನಾದಿ ಸ್ವಾಭಾವಿಕ ಮಾಯಾಪಾಶಬದ್ಧ ಘೋರಾಪಾರ ನಿಸ್ಸಾರ ಸಂಸಾರ ವ್ಯಾಪಾರ ತಾಪತ್ರಯಾನಲದಂದಹ್ಯಮಾನ ನಾನಾಶರೀರ ಪ್ರವೇಶನಿರ್ಗಮನ ವರ್ಣಾಶ್ರಮಾಭಿಮಾನ ವಿಶಿಷ್ಟ ಕಾಮಕ್ರೋಧಾದ್ಯನುಸ್ಯೂತ ಸುಖದುಃಖಾಶ್ರಯತ್ವಂ ಜೀವತ್ವಂ" [ಶ್ರೀ.ಕ.ಭಾ.] ಎಂದೂ ವಿವೃತವಾಗಿರುವುದು. ಈ ಸಂಸ್ಕೃತ ವಾಕ್ಯಗಳ ಅರ್ಥವು ಹಿಂದೆಯೇ ಸ್ಪಷ್ಟಪಟ್ಟಿರುವುದು. ಮತ್ತು ಇವಕ್ಕನುಗುಣವಾಗಿ ಜೀವೇಶ್ವರರ ಭೇದವೂ ಸ್ಪಷ್ಟವಾಗಿರುವುದು. ಹೀಗೆ ಶಿವಾದ್ವೈತ ಮತ್ತು ಅದ್ವೈತ ವೇದಾಂತಕ್ಕೆ ಭೇದ ಅತಿಸ್ಪಷ್ಟ; ಮತ್ತು ಅಂತಹ ಭೇದವು ಸಿದ್ಧಾಂತಕಾರರಿಗೆ ಅತ್ಯಂತ ಅಭಿಪ್ರೇತವೆಂದು ಹೇಳಬಹುದು. ಈ ಭೇದವೂ ಈ ಸಿದ್ಧಾಂತದ ಪ್ರವೃತ್ತಿಗೆ ಕಾರಣವೆಂದು ಹೇಳುವಲ್ಲಿ ಔಚಿತ್ಯವುಂಟು. ಉಕ್ತವಾದ ಸಮಸ್ತ ಪ್ರಮೇಯವನ್ನೂ ಮನಸ್ಸಿನಲ್ಲಿಟ್ಟು ಬ್ರಹ್ಮ ಜಗತ್ತುಗಳ ಸಂಬಂಧ ದ್ವೈತಾದ್ವೈತ ರೂಪವಾದುದು ಎಂದು ಹೇಳುವುದು ಸಂಪ್ರದಾಯ.

## ಸಾಧನ ವಿಚಾರ

ಈ ಸಿದ್ಧಾಂತದಲ್ಲಿ ತತ್ತ್ವದೃಷ್ಟಿಯಲ್ಲಿದ್ದಂತೆಯೇ ಸಾಧನಕ್ರಮದಲ್ಲಿಯೂ ನವೀನತೆಯಿರುವುದು. ಸಾಧನ ವಿಶೇಷಗಳ ವಿವರವು ಈ ಸಿದ್ಧಾಂತಾನು

ಯಾಯಿಗಳಾದ ಶಿವಶರಣರ ಸಾಹಿತ್ಯವೇ ಮೊದಲಾದುದರಲ್ಲಿ ಎಲ್ಲರಿಗೂ ಸುಬೋಧವಾತರುವುದು. ಮುಖ್ಯವಾದ ಕೆಲವಂಶವನ್ನು ಮಾತ್ರ ಇಲ್ಲಿ ಸೂಚಿಸುತ್ತೇನೆ.

ಸಾಧನಕ್ರಮದಲ್ಲಿ ಶಿವದೀಕ್ಷೆಯು ಮೊದಲನೆಯದು. ಲಿಂಗಧಾರಣವೇ ಇದರ ಬಾಹ್ಯಚಿಹ್ನೆ. ಲಿಂಗಧಾರಣವು ಶ್ರುತಿ, ಸ್ಮೃತಿ, ಆಗಮ, ಪುರಾಣ ಮತ್ತು ಇತಿಹಾಸ ಇವುಗಳಿಗೆ ಸಮ್ಮತವಾದುದು. ಈ ದೀಕ್ಷಾನಂತರ ವೇದಾಂತಮಾರ್ಗದಲ್ಲಿ ಬ್ರಹ್ಮ ವಿಚಾರ ಮಾಡಿ ಶಿವರೂಪಿಯಾದ ಬ್ರಹ್ಮ ಜ್ಞಾನವನ್ನು ಹೊಂದಬೇಕು. "ಜ್ಞಾತ್ವಾ ಶಿವಂ ಶಾಂತಿಮುಪ್ಯಂತಮೇತಿ" ಶಿವ ನನ್ನು ತಿಳಿದು [ಅಧಿಕಾರಿಯು] ಪರಮಶ್ರೇಯಸ್ಸನ್ನು ಹೊಂದುವನು. "ಜ್ಞಾತ್ವಾದೇವಂ ಮುಚ್ಯತೇ ಸರ್ವಪಾಶೈಃ" ಸರ್ವಸ್ವಾಮಿಯನ್ನುತಿಳಿದವನು ಸಂಸಾರದಿಂದ ಮುಕ್ತನಾಗುವನು. ಎಂಬೀ ಮುಂತಾದ ಪ್ರಮಾಣಗಳು ಬ್ರಹ್ಮಜ್ಞಾನವೇ ಶ್ರೇಯಸ್ಸಿನ ಮುಖ್ಯಸಾಧನವೆಂದು ತಿಳಿಸುವುವು. ಸಾಧನ ಪರಂಪರೆಯು ಪರಿನಿಷ್ಪತ್ತಿನಿಂದ ಅದ್ವಿತೀಯ ಪರಶಿವ ಬ್ರಹ್ಮ ಪರೋಕ್ಷವಾಗಿ ಅಧಿಕಾರಿಗೆ ಸ್ವಾಭಾವಿಕ ಮಲವೆಂಬ ಮಾಯಾಪಾಶ ದುಃಖ ನಿವೃತ್ತಿಯಾಗಿ, ಪರಮಪುರುಷಾರ್ಥವೆನಿಸುವ ಪರಶಿವತತ್ತ್ವ ಪ್ರಾಪ್ತಿ ಎಂಬ ಮುಕ್ತಿಯಾಗುವುದು. ಈ ಮುಕ್ತಿಗೆ ಲಿಂಗಾಂಗ ಸಾಮರಸ್ಯವೆಂದು ನಾಮಾಂತರ. ಈ ಪಾರಿಭಾಷಿಕವಾದ ಅರ್ಥದಲ್ಲಿ 'ಜೀವನು ಬ್ರಹ್ಮನಲ್ಲಿ ಸೇರುವನು' ಎಂದು ಒಟ್ಟು ಅಭಿಪ್ರಾಯ. ಅದ್ವೈತದಲ್ಲಿ ಹೇಳುವಂತೆ ಮುಕ್ತಿಯು ಬ್ರಹ್ಮಭಾವವಲ್ಲ. ಬ್ರಹ್ಮಪ್ರಾಪ್ತಿ. ಈ ಅರ್ಥದಲ್ಲಿ ಜೀವನು ಬ್ರಹ್ಮನಿಂದ ಒಂದಾಗುವನು ಎಂದು ಹೇಳುವ ಪದ್ಧತಿ. (ಅಷ್ಟಾವರಣ, ಪಂಚಾಚಾರ, ಷಟ್ಸ್ಥಲ ಇವು ವೀರಶೈವರ ಸಾಧನೋಪಾಯುಗಳು. ಶಿವದೀಕ್ಷೆಯು ಮುಖ್ಯಸಂಸ್ಕಾರ–ಸಂ.)

ಒಟ್ಟಿನಮೇಲೆ ಈಸಿದ್ಧಾಂತವು ಬ್ರಹ್ಮನಶಕ್ತಿರೂಪವಾದ ಮಾಯೆಯಿಂದ ಪ್ರಪಂಚೋತ್ಪತ್ತಿ ಎಂದೊಪ್ಪಿ, ಇವುಗಳು ಸತ್ಯ ಮತ್ತು ಬ್ರಹ್ಮ ಗುಣಪೂರ್ಣವೆಂದು ಸಾಧಿಸಿ, ಬ್ರಹ್ಮ, ಜಗತ್ತುಗಳ ಸಂಬಂಧ ಕೇವಲ ದ್ವೈತವೂ ಅಲ್ಲ ಅದ್ವೈತವೂ ಅಲ್ಲ ಎಂದು ನಿರೂಪಿಸಿ, ಜೀವನ ಬಂಧವೂ ಸತ್ಯ ಮತ್ತು

ಮೋಕ್ಷವೂ ಸತ್ಯವೆಂದು ಪ್ರತಿಪಾದಿಸುವುದರ ಮೂಲಕ ಮುಕ್ತಿ ಸಾಧನದ ಆವಶ್ಯಕತೆಯನ್ನು ಸ್ಥಾಪಿಸಿ ಬ್ರಹ್ಮವನ್ನುಳಿದು ಪ್ರಪಂಚವಿಲ್ಲವೆಂಬ ಪ್ರಮೇಯುವನ್ನು ಸ್ಥಾಪಿಸುವುದರ ಮೂಲಕ ವೇದಾಗಮ ಶಾಸ್ತ್ರಗಳಿಗೆ ಸಮ್ಮತವಾದ ಬ್ರಹ್ಮದೃಷ್ಟಿಗೆ ಕೊಟ್ಟಿರುವ ಪ್ರಾಧಾನ್ಯಕ್ಕೆ ಸೂಚಕವಾಗಿ ಶಿವಾದ್ವೈತವೆಂಬ ಸಾರ್ಥಕ ನಾಮಧೇಯವುಳ್ಳುದಾಗಿರುವುದು. ಪ್ರಮೇಯ ವಿಶೇಷಗಳ ವಿಷಯದಲ್ಲಿ ಮತಾಂತರ ವಿವಾದವಿರಬಹುದಾದರೂ ಮುಖ್ಯ ತತ್ವದೃಷ್ಟಿಯು ಭಾರತೀಯರ ಸ್ವಾಭಾವಿಕವಾದ ಆಸ್ತಿಕತೆಗೆ ಸಾಕ್ಷಿಯಾಗಿರುವುದು. ಈ ತತ್ವಾನುಸಂಧಾನದಲ್ಲಿ ಮಗ್ನರಾದ ಶಿವಶರಣರ ಅಥವಾ ಬ್ರಹ್ಮ ಶರಣರ ಸುಲಲಿತ ಉಪದೇಶವು, ಪಂಡಿತರಿಗೂ, ಪಾಮರರಿಗೂ ಅಸಾಧಾರಣ ಶಾಂತಿಯನ್ನುಂಟುಮಾಡುವುದು. "ಬ್ರಹ್ಮತತ್ವವು ಸರ್ವ ಶಬ್ದವಾಚ್ಯ. ಪ್ರಪಂಚವು ಬ್ರಹ್ಮಮಯ" ಎಂಬ ಮುಂತಾದ ಉದಾತ್ತ ತತ್ವಗಳ ಅನುಸಂಧಾನವಾಸ್ತವವಾಗಿ ಬಂದರೆ ಉತ್ತಮ ಸಮನ್ವಯ ದೃಷ್ಟಿಗೆ ಪ್ರಯತ್ನಾಂತರ ಬೇಕಿಲ್ಲ. ಇಂತಹ ದೃಷ್ಟಿಯುಳ್ಳವರಿಗೆ ಪ್ರಪಂಚವೇ ಪವಿತ್ರ ಬ್ರಹ್ಮಮಯವಾಗಿ ಕಾಣುವದರಲ್ಲಿ ಸಂದೇಹವೂ ಇಲ್ಲ."

ವೀರಶೈವ ಸಿದ್ಧಾಂತವು ಕರ್ಮ, ಜ್ಞಾನ ಮತ್ತು ಭಕ್ತಿ ಈ ಮೂರನ್ನೂ ಅಂಗೀಕರಿಸಿದೆ. ಆದರಿಂದಲೇ ಇದು ಸಮನ್ವಯ ಯೋಗವೆಂದು ವಿದ್ವಾಂಸರು ಕರೆದಿದ್ದಾರೆ. ಈ ದರ್ಶನದಲ್ಲಿ ತರ್ಕಕ್ಕೆ ಇರುವ ಪ್ರಾಮುಖ್ಯತೆಗಿಂತ ಅನುಭಾವಕ್ಕೆ ಹೆಚ್ಚಿನ ಮನ್ನಣೆಯಿದೆ. ತರ್ಕದ ಸ್ಥಲ ಶಿರಸ್ಸು. ಅನುಭವದ ಸ್ಥಲ ಹೃದಯ. ಪರಿಪೂರ್ಣ ಮಾನವನಿಗೆ ತರ್ಕ, ಅನುಭವ ಎರಡೂ ಬೇಕು. ಅದು ಕಾರಣವೇ ವೀರಶೈವವು ಭಾರತೀಯ ದರ್ಶನಗಳಲ್ಲಿ ಕ್ರಾಂತಿಕಾರಕವಾಗಿದೆ ಎಂದು ಹೇಳಬಹುದಾಗಿದೆ. ಯೋಗಶಾಸ್ತ್ರದಲ್ಲಿ ಕೂಡ ಪತಂಜಲಿಯ ಯೋಗಶಾಸ್ತ್ರದಲ್ಲಿಲ್ಲದ ಶಿವಯೋಗವನ್ನು 'ಶಿವಯೋಗ ಪ್ರದೀಪಿಕಾ', ಮೊದಲಾದ ಗ್ರಂಥಗಳಲ್ಲಿ ವೀರಶೈವರು ನಿರೂಪಿಸಿರುವುದು ಗಮನಾರ್ಹವಾಗಿದೆ. 'ಶಿವಯೋಗಿ' ಎಂಬ ಹೆಸರು ವೀರಶೈವರಲ್ಲಿ ಬಹಳವಿದೆ.

ಪ್ರಾಚೀನ ವೀರಶೈವ ಗ್ರಂಥಗಳಲ್ಲಿ ಸಿದ್ಧಾಂತ ಶಿಖಾಮಣಿ, ಶ್ರೀಕರ ಭಾಷ್ಯ, ವೀರಶೈವಾನಂದ ಚಂದ್ರಿಕೆ, ಲಿಂಗಧಾರಣ ಚಂದ್ರಿಕೆ, ಶಿವಾದ್ವೈತ ಮಂಜರಿ, ಅನುಭವ ಸೂತ್ರ, ಕ್ರಿಯಾಸಾರ, ಸೋಮನಾಥ ಭಾಷ್ಯಮೊದಲಾದ ಗ್ರಂಥಗಳು ಸಿದ್ಧಾಂತ ಪ್ರಧಾನವಾಗಿವೆ. ಶೂನ್ಯ ಸಂಪಾದನೆ,

ಗಣಭಾಷ್ಯ ರತ್ನಮಾಲೆ, ಬಸವಾದಿಗಳ ವಚನಗಳು, ಶತಕತ್ರಯ ಮೊದಲಾದುವು ಅನುಭವಪ್ರಧಾನವಾಗಿವೆ. ಶಿವಾಗಮಗಳಲ್ಲಿ ವೀರಶೈವ ಮತ ಸ್ವರೂಪವು ಸುಪ್ರಸಿದ್ಧವಾಗಿದೆ. ಈ ಶಿವಾಗಮಗಳ ಪ್ರಚಾರ ಇತ್ತೀಚೆಗೆ ಕಡಿಮೆಯಾಗಿರುವುದು ದುರದೃಷ್ಟದ ಸಂಗತಿ. ಈ ವಾಙ್ಮಯವನ್ನು ಸಂಗ್ರಹಿಸಿ ಪ್ರಕಟಿಸುವುದು ಅತ್ಯಗತ್ಯ. ವಾತುಲಾಗಮದಲ್ಲಿ ಷಟ್‌ಸ್ಥಲ ವಿಚಾರವು ಉಂಟೆಂದು ಮಗ್ಗೆಯಮಾಯಿದೇವನು ಅನುಭವಸೂತ್ರದಲ್ಲಿ ಹೇಳಿದ್ದಾನೆ A ಗುಬ್ಬಿ ಮಲ್ಲಣಾಚಾರ್ಯನು ವಾತುಲಾಗಮಕ್ಕೆ ವೀರಶೈವ ತತ್ತ್ವಾರ್ಥವನ್ನು ಒಳಗೊಂಡ ಟಿಪ್ಪಣಿಯನ್ನು ಬರೆದಿರುವುದು ಪ್ರಖ್ಯಾತವಾಗಿದೆ. B ಶ್ರೀ ಬಸವಾದಿಗಳ ವಚನದಲ್ಲಿ ವೇದಾಗಮಗಳ ಪ್ರಮಾಣಗಳು ಅಲ್ಲಲ್ಲಿ ಕಂಗೊಳಿಸುವುದು ಗಮನಾರ್ಹವಾಗಿದೆ.

ಭರತಖಂಡದಲ್ಲಿ ವೇದಾಂತದ ಹೆಸರಿನಲ್ಲಿ ನಡೆದು ಹೋದ ಅನರ್ಥಗಳನ್ನೆಲ್ಲಾ ಶಿವಾಚಾರ್ಯರೂ ಶಿವಶರಣರೂ ತಮ್ಮ ಪ್ರತಿಭೆ ಮತ್ತು ಅನುಭವಗಳಿಂದ ಹೊರಸೂಸಿದ ದಿವ್ಯತತ್ತ್ವಗಳಿಂದ ಪರಿಹರಿಸಿದ್ದಾರೆ. ಷಟ್‌ಸ್ಥಲಗಳಲ್ಲಿ, ಭಕ್ತ, ಮಹೇಶ, ಪ್ರಸಾದ, ಪ್ರಾಣಲಿಂಗಿ, ಶರಣ ಎಂಬೈದುಸ್ಥಲಗಳು ದ್ವೈತವನ್ನೂ, ಐಕ್ಯ ಎಂಬ ಆರನೇ ಸ್ಥಲವು ಅದ್ವೈತವನ್ನೂ ಅನ್ವಯಿಸಿದೆ. ಕಾರಣ ಉಪನಿಷತ್ತುಗಳಲ್ಲಿ ಕಂಡು ಬರುವ ದ್ವೈತ ಮತ್ತು ಅದ್ವೈತ ಮಂತ್ರಗಳೆರಡಕ್ಕೂ ಈ ದರ್ಶನದಲ್ಲಿ ಸಾರ್ಥಕ್ಯ ಪ್ರಾಪ್ತವಾಗಿದೆ. ಅದುಕಾರಣವೇ 'ಸರ್ವಶ್ರುತಿ ಸಮನ್ವಯತ್ವ' ವೀರಶೈವಕ್ಕೆ ಮಾತ್ರ ಪ್ರಾಪ್ತವಾಗಿದೆ.

ವೀರಶೈವವು ಜೈನರ ಅಹಿಂಸಾ ತತ್ತ್ವವನ್ನೂ, ಬೌದ್ಧರ ಸಮತಾವಾದವನ್ನೂ, ವೇದಾಂತಿಗಳ ಜ್ಞಾನಮಾರ್ಗವನ್ನೂ, ದ್ರಾವಿಡರ ಭಕ್ತಿಮಾರ್ಗವನ್ನೂ ತನ್ನಲ್ಲಿ ಅಳವಡಿಸಿಕೊಂಡು ತನ್ನದೇ ಆದ ಅನುಭಾವದ ವೈಶಿಷ್ಟ್ಯವನ್ನೂ ಉಳಿಸಿಕೊಂಡಿದೆ.

ಇದುವರೆಗೆ ಹೇಳಿದ ಎಲ್ಲ ಕಾರಣಗಳಿಂದ ವೀರಶೈವದರ್ಶನವು ಹಿಂದೂ ಧರ್ಮದಲ್ಲಿ ಎಂತಹ ಪ್ರಾಮುಖ್ಯವಾದುದೆಂದೂ, ಎಂತಹ ಉದಾತ್ತತತ್ತ್ವಗಳಿಂದ ಕೂಡಿದುದೆಂದೂ ನಾವು ಸುಲಭವಾಗಿ ಅರಿಯಬಹುದಾಗಿದೆ. ಈ ವಿಷಯವನ್ನೇ ಡಾ||ಎಚ್.ಎಂ. ರಾಘವೇಂದ್ರಾಚಾರ್ಯರು ಮೇಲೆಕಂಡ ತಮ್ಮ 'ಭಾರತೀಯ ದರ್ಶನಕ್ಕೆ ವೀರಶೈವರ ಕಾಣಿಕೆ' ಎಂಬ ಲೇಖನದಲ್ಲಿ ಬಹಳ ಸ್ವಾರಸ್ಯವಾಗಿ ಹೇಳಿದ್ದಾರೆ.

---

A ಅನುಭವ ಸೂತ್ರ, ಶ್ಲೋಕ ೨೫–೨೭.
B ಭಾವ ಚಿಂತಾರತ್ನಂ, ಸಂಧಿ ೧, ೫, ೧೩.



ಆಸ್ಥಾನ ವಿದ್ವಾನ್, ಪಂಡಿತ ರತ್ನಂ, ಕೀರ್ತನಾಚಾರ್ಯ,
ಕರ್ಣಾಟಕ ವಿಭೂಷಣ



ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು
(ಗ್ರಂಥಕರ್ತೃ)

ಅನುಬಂಧ–೧

# ವೀರಶೈವ ಧರ್ಮ-ದರ್ಶನಗಳನ್ನು ತಿಳಿಯಲು ಸಾಧಕವಾದ ಗ್ರಂಥಗಳು

## ಸಂಸ್ಕೃತ

| | |
|---|---|
| ೧. ಸಿದ್ಧಾಂತ ಶಿಖಾಮಣಿಃ | ಶಿವಯೋಗಿ ಶಿವಾಚಾರ್ಯ |
| ೨. ಶ್ರೀಕರ ಭಾಷ್ಯಂ | ಶ್ರೀಪತಿ ಪಂಡಿತ |
| ೩. ಕ್ರಿಯಾಸಾರಃ | ನೀಲಕಂಠ ಶಿವಾಚಾರ್ಯ |
| ೪. ಶಿವಾದ್ವೈತ ಮಂಜರೀ | ಸ್ವಪ್ರಭಾನಂದ ಶಿವಾಚಾರ್ಯ |
| ೫. ಅನುಭವ ಸೂತ್ರಂ | ಮಗ್ಗೆ ಮಾಯಿದೇವ |
| ೬. ಶಿವಾಧಿಕ್ಯ ಶಿಖಾಮಣಿಃ | ಸೋಸಲೆ ರೇವಣಾರಾಧ್ಯ |
| ೭. ಬಸವರಾಜೀಯಂ | ಪಾಲ್ಕುರಿಕೆ ಸೋಮನಾಥ |
| ೮. ವೇದಾಂತಸಾರ ವೀರಶೈವ —ಚಿಂತಾಮಣಿಃ | ನಿಟ್ಟೂರು ನಂಜಣಾಚಾರ್ಯ |
| ೯. ನಾರಾಯಣೋಪನಿಷತ್ ಭಾಷ್ಯಂ | ವೃಷಭ ಪಂಡಿತ ಶಿವಾಚಾರ್ಯ |
| ೧೦. ಲಿಂಗಧಾರಣ ಚಂದ್ರಿಕಾ | ನಂದಿಕೇಶ್ವರ ಶಿವಾಚಾರ್ಯ |
| ೧೧. ವೀರಶೈವಾನಂದ ಚಂದ್ರಿಕಾ | ಮರಿ ತೋಂಟದಾರ್ಯ |
| ೧೨. ವೀರಶೈವಾಚಾರ ಕೌಸ್ತುಭಃ | ಹಾನಪ್ಪ ಪಂಡಿತ |
| ೧೩. ಸಿದ್ಧಾಂತ ಸಾರಾವಲಿಃ | ತ್ರಿಲೋಚನ ಶಿವಾಚಾರ್ಯ |
| ೧೪. ಭಕ್ತಾಧಿಕ್ಯ ರತ್ನಾವಲಿಃ | ಷಡಕ್ಷರದೇವ |
| ೧೫. ಶಿವಾಧಿಕ್ಯ ರತ್ನಾವಲಿಃ | ” |
| ೧೬. ಶಿವ ಪಂಚಶ್ಲೋಕೀ | ಕೆಳದಿ ಬಸವರಾಜ |
| ೧೭. ಶರಣ ಚಾರಿತ್ರ್ಯಂ | ಗುರು ಬಸವರಾಜ |
| ೧೮. ವೀರಶೈವಾನ್ವಯ ಚಂದ್ರಿಕಾ | ಆರಾಧ್ಯ ವೀರೇಶ್ವರ ಶಾಸ್ತ್ರೀ |
| ೧೯. ಮಾಚಿದೇವ ಮನೋವಿಲಾಸಃ | ಬಸವಲಿಂಗ ಶಿವಯೋಗಿ |

| | |
|---|---|
| ೨೦. ಗಣಸಹಸ್ರ ನಾಮಾವಳಿಃ | ಮಲ್ಲಿಕಾರ್ಜುನ ಪಂಡಿತಾರಾಧ್ಯ |
| ೨೧. ವೀರಶೈವೋತ್ಕರ್ಷ ಸಂಗ್ರಹ | ಕೈ॥ ಪಿ. ಆರ್. ಕರಿಬಸವಶಾಸ್ತ್ರೀ |
| ೨೨. ವೀರಮಾಹೇಶ್ವರ ಪ್ರಕರಣಂ | ವೇದವ್ಯಾಸ ಮುನಿ |
| ೨೩. ಶಿವಪಂಚಸ್ತವಃ | ವಿಶ್ವಾರಾಧ್ಯ ಕವಿ |
| ೨೪. ಶಿವಾದ್ವೈತ ಪರಿಭಾಷಾ | ನೀಲಕಂಠ ಶಿವಾಚಾರ್ಯ |
| ೨೫. ಪಂಡಿತಾರಾಧ್ಯ ಚರಿತಂ | ಗುರುರಾಜ ಕವಿ |
| ೨೬. ಕೈವಲ್ಯ ಸಾರಃ | ಮರಿ ತೋಂಟದಾರ್ಯ |
| ೨೭. ವೀರಶೈವ ಪ್ರದೀಪಿಕಾ | ,, |
| ೨೮. ನಂದಿಕೇಶ್ವರ ಕಾರಿಕಾ | ಆಚಾರ್ಯ ನಂದಿಕೇಶ್ವರ |
| ೨೯. ಈಶಾವಾಸ್ಯೋಪನಿಷತ್—ಶಾಂಕರೀ ವ್ಯಾಖ್ಯಾ | ಕೈ॥ ಉಮಚಗಿ ಶಂಕರಶಾಸ್ತ್ರೀ |
| ೩೦. ಕೇನೋಪನಿಷತ್—ಶಾಂಕರೀ ವ್ಯಾಖ್ಯಾ | ,, |
| ೩೧. ಸಿದ್ಧಾಂತ ಶಿಖೋಪನಿಷತ್—ಶಾಂಕರೀ ವ್ಯಾಖ್ಯಾ | ,, |
| ೩೨. ಕೈವಲ್ಯೋಪನಿಷತ್—ಸದಾಶಿವ ಭಾಷ್ಯಂ | ಶ್ರೀ ಸದಾಶಿವ ಸ್ವಾಮಿಗಳು |
| ೩೩. ಶಿವಯೋಗ ಪ್ರದೀಪಿಕಾ | ಚೆನ್ನಸದಾಶಿವ ಯೋಗಿ |
| ೩೪. ವೀರಶೈವ ಧರ್ಮಶಿರೋಮಣಿಃ | ಷಡಕ್ಷರ ಮಂತ್ರಿ |
| ೩೫. ಶಿವಜ್ಞಾನ ಪ್ರದೀಪಿಕಾ | ವಿಶ್ವನಾಥಾಚಾರ್ಯ |
| ೩೬. ವೀರಮಾಹೇಶ್ವರಾಚಾರ—ಸಂಗ್ರಹಃ | ನೀಲಕಂಠ ನಾಗನಾಥಾಚಾರ್ಯ |
| ೩೭. ಅನಾದಿ ವೀರಶೈವಾಚಾರ—ಸಂಗ್ರಹ | ಗೂಳೂರು ಸಿದ್ಧವೀರಣಾಚಾರ್ಯ |
| ೩೮. ವಾತುಲೋತ್ತರ.ವ್ಯಾಖ್ಯಾನಂ | ಗುಬ್ಬಿ ಮಲ್ಲಣಾಚಾರ್ಯ |
| ೩೯. ವೀರಶೈವೇಂದು ಶೇಖರಃ | ಪಂಡಿತ ಸದಾಶಿವ ಶಾಸ್ತ್ರೀ |

೪೦. ಪಾರಮೇಶ್ವರಾಗಮಃ .... ....

೪೧. ವೀರಮಾಹೇಶ್ವರಾಚಾರ-—ಸಾರೋದ್ಧಾರಃ ಲಕ್ಷ್ಮೀಧರಾರಾಧ್ಯ

೪೨. ವೀರಶೈವೋತ್ಕರ್ಷ ಪ್ರದೀಪಿಕಾ ಚೆನ್ನಬಸವ ದೇಶಿಕ

೪೩. ವೀರಶೈವಾಚಾರ ಪ್ರದೀಪಿಕಾ ಗುರುದೇವ ಕವಿ

೪೪. ಶಿವಾದ್ವೈತ ದರ್ಪಣಃ ಶಿವಾನುಭವ ಶಿವಾಚಾರ್ಯ

೪೫. ವಿಶೇಷಾರ್ಥ ಪ್ರಕಾಶಿಕಾ ಮಗ್ಗೆ ಮಾಯಿದೇವ

೪೬. ಸೂಕ್ಷ್ಮಾಗಮಃ .... ....

೪೭. ಪಂಚಾಚಾರ್ಯ ಪಂಚವೋತ್ಪತ್ತಿ ಪ್ರಕರಣಂ

೪೮. ವೀರಶೈವ ಸದಾಚಾರ ಸಂಗ್ರಹ .... ....

೪೯. ಶೈವ ಪರಿಭಾಷಾ ಶಿವಾಗ್ರ ಯೋಗೀಂದ್ರ ಜ್ಞಾನ ಶಿವಾಚಾರ್ಯ

೫೦. ನೀಲಕಂಠ ಭಾಷ್ಯಂ ಶ್ರೀ ಗುಳೇದಗುಡ್ಡದ ಶ್ರೀಗಳು

೫೧. ಶಿವಜ್ಞಾನ ದೀಪಿಕಾ ಮಲ್ಲಿಕಾರ್ಜುನಾರಾಧ್ಯ

೫೨. ಜ್ಞಾನ ಶತಕಂ ಶ್ರೀ ಸರ್ಪಭೂಷಣ ಶಿವಯೋಗಿ

೫೩. ಶ್ರೀ ಬಸವೋದಾಹರಣಂ ಪಾಲ್ಕುರಿಕಿ ಸೋಮನಾಥ

೫೪. ವೀರಭದ್ರ ದಂಡಕಂ ಷಡಕ್ಷರ ದೇವ

೫೫. ಸ್ತವನ ಮಂಜರೀ ಅಭಿನವ ಕಾಲಿದಾಸ ಬಸವಪ್ಪ-[ಶಾಸ್ತ್ರೀ

೫೬. ರೇಣುಕ ಚಂಪೂ ಕಾವ್ಯಂ ಈಶಾನ ಶಿವಗುರು

೫೭. ಶ್ರೀಮಚ್ಚೆನ್ನ ಬಸವ ಪುರಾಣಂ ಕುಮಾರಸ್ವಾಮಿ ಶಾಸ್ತ್ರೀ

೫೮. ಶಿವತತ್ವ ರತ್ನಾಕರಃ ಕೆಳದಿ ಬಸವರಾಜ

೫೯. ವಿವೇಕ ಚಿಂತಾಮಣಿಃ ಕೊಡಗಿನ ಲಿಂಗರಾಜ

೬೦. ದಶಗ್ರಂಥೀ ವಿಶ್ವನಾಥಾಚಾರ್ಯ

೬೧. ಶ್ರುತಿಸಾರ ಭಾಷ್ಯಂ ಶಿವಪೂಜಾ ಬಸವಲಿಂಗಯತಿ

೬೨. ದೇವೀ ಕಾಲೋತ್ತರಂ ಅಘೋರ ಶಿವಾಚಾರ್ಯ

೬೩. ಶತಸೂತ್ರರತ್ನಂ ಭೋಜದೇವ

೬೪. ತತ್ವಪ್ರಕಾಶಿಕಾ

| | |
|---|---|
| ೬೫. ಪ್ರಭುಲಿಂಗಲೀಲಾ | ಕವಿ ವ್ಯಾಸ ( ? ) |
| ೬೬. ಬಸವೇಶ ವಿಜಯಂ | ಕಂಚಿ ಶಂಕರಾರಾಧ್ಯ |
| ೬೭. ಮಹಾರ್ಥ ಮಂಜರೀ | ಮಹೇಶ್ವರಾನಂದ ಶಿವಾಚಾರ್ಯ |
| ೬೮. ಪೌಷ್ಕರಾಗಮಃ | ,, |
| ೬೯. ಬ್ರಹ್ಮಸೂತ್ರ ವೃತ್ತಿಃ | ಅಗಸ್ತ್ಯ ಮುನಿಚಂದ್ರ |
| ೭೦. ಶಿವಜ್ಞಾನ ಬೋಧಃ | ಶಿವಾಗ್ರಯೋಗೀಂದ್ರ ಜ್ಞಾನ-[ಶಿವಾಚಾರ್ಯ |
| ೭೧. ಶಿವಜ್ಞಾನ ಭಾಷ್ಯಂ | ,, |
| ೭೨. ಅಷ್ಟಪ್ರಕರಣಂ | ಅಘೋರ ಶಿವಾಚಾರ್ಯ |
| ೭೩. ಶಿವಸೂತ್ರಾಣಿ | ಶ್ರೀ ವಸುಗುಪ್ತ ಶಿವಾಚಾರ್ಯ |
| ೭೪. ಶಿವಸೂತ್ರ ವಾರ್ತಿಕಂ | ,, |
| ೭೫. ಶಿವಪುರಾಣಂ | ವ್ಯಾಸಮುನಿ |
| ೭೬. ಸ್ಕಾಂದ ಪುರಾಣಂ | ,, |
| ೭೭. ಲಿಂಗಪುರಾಣಂ | ,, |
| ೭೮. ಮಾರ್ಕಂಡೇಯ ಪುರಾಣಂ | ,, |
| ೭೯. ಶಂಕರ ಸಂಹಿತಾ | ,, |
| ೮೦. ಶಿವರಹಸ್ಯಂ | ,, |
| ೮೧. ಸನತ್ಕುಮಾರ ಸಂಹಿತಾ | ,, |
| ೮೨. ಶಿವಧರ್ಮೋತ್ತರಂ | ,, |
| ೮೩. ಜ್ಞಾನಾರ್ಣವಂ | ,, |
| ೮೪. ರುದ್ರಯಾಮಳಂ | ,, |
| ೮೫. ಚಿದ್ಗಗನ ಚಂದ್ರಿಕಾ | ಕಾಳಿದಾಸ ( ? ) |
| ೮೬. ಈಶ್ವರ ಪ್ರತ್ಯಭಿಜ್ಞಾ ಶಾಸ್ತ್ರಂ | ಮಹಾಮಾಹೇಶ್ವರ ಉತ್ಪಲದೇವ |
| ೮೭. ಶ್ರೀಶಿವದೃಷ್ಟಿಃ | ಮಹಾಮಾಹೇಶ್ವರ ಸೋಮಾನಂದ |
| ೮೮. ಸಂಸ್ಕೃತ ಶತಕತ್ರಯಮ್ | ಮಗ್ಗೆಯ ಮಾಯಿದೇವ |

## ಕನ್ನಡ

| | |
|---|---|
| ೮೯. ಶೂನ್ಯ ಸಂಪಾದನೆ | ಗೂಳೂರು ಸಿದ್ಧವೀರಣ್ಣಾಚಾರ್ಯ |

| | | |
|---|---|---|
| ೯೦. | ಗಣಭಾಷ್ಯ ರತ್ನಮಾಲಾ | ಗುಬ್ಬಿ ಮಲ್ಲಣ್ಣಗಳು |
| ೯೧. | ವಚನಶಾಸ್ತ್ರ ಸಾರ | ಡಾ॥ ರಾ. ಬ. ಫ. ಗು. ಹಳಕಟ್ಟಿ |
| ೯೨ | ಬಸವೇಶ್ವರ ವಚನ | ಬಸವೇಶ್ವರ |
| ೯೩. | ಪ್ರಭುದೇವರ ವಚನ | ಪ್ರಭುದೇವರು |
| ೯೪. | ಚೆನ್ನಬಸವೇಶ್ವರ ವಚನ | ಚೆನ್ನಬಸವೇಶ್ವರ |
| ೯೫. | ಸಿದ್ಧರಾಮೇಶ್ವರ ವಚನ | ಸಿದ್ಧರಾಮ ಶಿವಯೋಗಿ |
| ೯೬. | ವೀರಶೈವ ಮಹಾಪುರಾಣಂ | ಗುಬ್ಬಿ ಮಲ್ಲಣಾರ್ಯ |
| ೯೭. | ಸಿದ್ಧೇಶ್ವರ ಪುರಾಣಂ | ವಿರಕ್ತ ಸಿದ್ಧಲಿಂಗ ದೇಶಿಕ |
| ೯೮. | ಪಾಲ್ಕುರಿಕಿ ಸೋಮೇಶ್ವರ ಪುರಾಣಂ | ,, |
| ೯೯. | ಕನ್ನಡ ಶತಕತ್ರಯಂ | ಮಗ್ಗೆ ಮಾಯಿದೇವ |
| ೧೦೦. | ಬಸವ ಪುರಾಣಂ | ಭೀಮಕವಿ |
| ೧೦೧. | ಚೆನ್ನಬಸವ ಪುರಾಣಂ | ವಿರೂಪಾಕ್ಷ ಪಂಡಿತ |
| ೧೦೨. | ಪ್ರಭುಲಿಂಗ ಲೀಲೆ | ಚಾಮರಸ ಕವಿ |
| ೧೦೩. | ಶಿವತತ್ವ ಚಿಂತಾಮಣಿ | ಲಕ್ಕಣಾಮಾತ್ಯ |
| ೧೦೪. | ಪದ್ಮರಾಜ ಪುರಾಣಂ | ಪದ್ಮಣಾಂಕ ಕವಿ |
| ೧೦೫. | ಸಿದ್ಧರಾಮ ಪುರಾಣಂ | ರಾಘವಾಂಕ ಕವಿ |
| ೧೦೬. | ರಘಟಾಕಾವ್ಯಂ | ಹರೀಶ್ವರ ಮಹಾಕವಿ |
| ೧೦೭. | ಕೈವಲ್ಯ ಪದ್ಧತಿ | ನಿಜಗುಣ ಶಿವಯೋಗಿ |
| ೧೦೮. | ಕೈವಲ್ಯ ಕಲ್ಪವಲ್ಲರಿ | ಸರ್ಪಭೂಷಣ ಶಿವಯೋಗಿ |
| ೧೦೯. | ಗುರುರಾಜ ಚರಿತೆ | ಕವಿ ಸಿದ್ಧನಂಜೇಶ |
| ೧೧೦. | ದೇವರ ದಾಸಿಮಯ್ಯ ವಚನಗಳು | ದಾಸಿಮಯ್ಯನವರು |
| ೧೧೧. | ದೀಕ್ಷಾ ಬೋಧೆ | ಕೆರೆಯ ಪದ್ಮರಸ |
| ೧೧೨. | ಕನ್ನಡ ಸಾನಂದ ಚರಿತೆ | ಕುಮಾರ ಪದ್ಮರಸ |
| ೧೧೩. | ಷಡಕ್ಷರ ಕಂದ | ಕೊಡಗುಳಿ ಕೇಶಿರಾಜ |
| ೧೧೪. | ಸಿಂಗಿರಾಜ ಪುರಾಣ | ಸಿಂಗಿರಾಜ |
| ೧೧೫. | ಸಿದ್ಧೇಶ್ವರ ವಚನ | ಶ್ರೀ ತೋಂಟದಾರ್ಯ |
| ೧೧೬. | ಏಕೋತ್ತರ ಶತಸ್ಥಲ | ಸಿದ್ಧಲಿಂಗೇಶ್ವರ |

| | | |
|---|---|---|
| ೧೧೭. | ಸ್ವತಂತ್ರ ಸಿದ್ಧಲಿಂಗವಚನಗಳು | ಸ್ವತಂತ್ರ ಸಿದ್ಧಲಿಂಗೇಶ್ವರ |
| ೧೧೮. | ಘನಲಿಂಗಿ ದೇವರ ವಚನ | ಘನಲಿಂಗಿ ದೇವರು |
| ೧೧೯. | ಬಸವಲಿಂಗ ಶರಣರ ಕೃತಿಗಳು | ವೈಲಾರ ಶರಣರು |
| ೧೨೦. | ಸುಬೋಧ ಸಾರ | ಮುಪ್ಪಿನ ಷಡಕ್ಷರಿಗಳು |
| ೧೨೧. | ಭಕ್ತಿಸುಧಾಸಾರ | ಘನಮಠಾರ್ಯರು |
| ೧೨೨. | ಕೈವಲ್ಯ ದರ್ಪಣ | ಬಾಲಲೀಲಾಮಹಾಂತ ಶಿವಯೋಗಿ |
| ೧೨೩. | ವೃಷಭೇಂದ್ರ ವಿಜಯ | ಷಡಕ್ಷರ ದೇವ |
| ೧೨೪. | ವಿವೇಕ ಚಿಂತಾಮಣಿ | ಶ್ರೀ ನಿಜಗುಣ ಶಿವಯೋಗಿ |
| ೧೨೫. | ಅನುಭವ ಶಿಖಾಮಣಿ | ಕವಿ ನಾರಸಿಂಹ |
| ೧೨೬. | ಅರುವತ್ತು ಮೂವರ ಪುರಾಣಂ | ವೀರಭದ್ರ ಕವಿ |
| ೧೨೭. | ತ್ರಿಷಷ್ಟಿ ಪುರಾತನ ವಿಲಾಸಂ | ಕವಿಚಕ್ರವರ್ತಿ ಸುರಂಗ |
| ೧೨೮. | ಷಟ್ಸ್ಥಲ ಕೌಮುದಿ | ವಿರಕ್ತ ಸಿದ್ಧಲಿಂಗೇಶ್ವರ |
| ೧೨೯. | ರಾಘವಾಂಕ ಕಾವ್ಯಂ | ಕವಿ ಸಿದ್ಧನಂಜೇಶ |
| ೧೩೦. | ರೇವಣ ಸಿದ್ಧೇಶ್ವರ ಪುರಾಣ | ಕವಿ ಬೊಮ್ಮರಸ |
| ೧೩೧. | ಶಿವಸಹಸ್ರನಾಮ ಭಾಷ್ಯ | ದೇ. ನಂಜುಂಡ ದೀಕ್ಷಿತರು |
| ೧೩೨. | ಪಂಚಬ್ರಹ್ಮೋದಯ ಭಾಷ್ಯ | ಜಕ್ಕಣಾಚಾರ್ಯ |
| ೧೩೩. | ಮಹಾದೇವಿಯಕ್ಕ ಪುರಾಣ | ಕವಿ ಚೆನ್ನಬಸವಾಂಕ |
| ೧೩೪. | ಮೋಳಿಗೆ ಮಾರಯ್ಯಗಳ —ವಚನಗಳು | ಶರಣ ಮಾರಯ್ಯ-ಲಿಂಗಮ್ಮ |
| ೧೩೫. | ಸಂಗನ ಬಸವೇಶ್ವರ ವಚನ | ಸಂಗನ ಬಸವ |
| ೧೩೬. | ಲಿಂಗಲೀಲಾವಿಲಾಸಂ | ಕಲ್ಲುಮಠದ ಪ್ರಭುದೇವ |
| ೧೩೭. | ಪ್ರೌಢರಾಯ ಕಾವ್ಯ | ಅದ್ರೀಶ ಕವಿ |
| ೧೩೮. | ಮಡಿವಳ ಮಾಚಯ್ಯನ ವಚನ | ಮಡಿವಳ ಮಾಚಿದೇವರು |
| ೧೩೯. | ಕಾಲಜ್ಞಾನ ವಚನ | …. …. |
| ೧೪೦. | ಆರಾಧ್ಯಚರಿತೆ | ನೀಲಕಂಠ ಕವಿ |
| ೧೪೧. | ಚತುರಾಚಾರ್ಯ ಪುರಾಣಂ | ಪರ್ವತೇಶ್ವರ |
| ೧೪೨. | ದೇವರ ದಾಸಿಮಯ್ಯ ಪುರಾಣ | ವಿರೂಪಾಕ್ಷ ಕವಿ |

| | | |
|---|---|---|
| ೧೪೩. | ಶಂಕರ ದಾಸಿಮಯ್ಯ —ಪುರಾಣಂ | ಮಲ್ಲಿಕಾರ್ಜುನ ಕವಿ |
| ೧೪೪. | ಶರಣ ಬಸವೇಶ್ವರ ಪುರಾಣಂ | ಚನ್ನಬಸವ ಕವಿ |
| ೧೪೫. | ಹೇಮರೆಡ್ಡಿ ಮಲ್ಲಮ್ಮ ಪುರಾಣಂ | ಚನ್ನಕವಿ |
| ೧೪೬. | ವೀರೇಶ್ವರ ಪುರಾಣಂ | ,, |
| ೧೪೭. | ಮಹಾಂತೇಶ್ವರ ಪುರಾಣಂ | ,, |
| ೧೪೮. | ಶಿವಯೋಗೀಶ್ವರ ಪುರಾಣಂ | ವಿದ್ವಾನ್ ಚಂದ್ರಶೇಖರ ಶಾಸ್ತ್ರೀ |
| ೧೪೯. | ವೀರೇಶ ಚರಿತೆ | ರಾಘವಾಂಕ ಕವಿ |
| ೧೫೦. | ಪುರಾತನರ ತ್ರಿವಿಧಿ | ನಿಜಗುಣ ಶಿವಯೋಗಿ |
| ೧೫೧. | ಮನೋವಿಜಯಂ | ಗುರುಬಸವ ಕವಿ |
| ೧೫೨. | ಸದಾಶಿವ ನೀತಿಗಳು | ಸ್ವಾದಿ ಸದಾಶಿವ ರಾಜ |
| ೧೫೩. | ಅಕ್ಕಮಹಾದೇವಿ ವಚನಗಳು | ಅಕ್ಕ ಮಹಾದೇವಿ. |

## ತೆಲುಗು

| | | |
|---|---|---|
| ೧೫೪. | ಶಿವತತ್ವಸಾರಮು | ಆಚಾರ್ಯ ಪಂಡಿತಾರಾಧ್ಯ |
| ೧೫೫. | ಬಸವ ಪುರಾಣಮು | ಪಾಲ್ಕುರಿಕಿ ಸೋಮನಾಥ |
| ೧೫೬. | ಪಂಡಿತಾರಾಧ್ಯ ಚರಿತ್ರಮು | ,, |
| ೧೫೭. | ಅನುಭವ ಸಾರಮು | ,, |
| ೧೫೮. | ವೃಷಾಧಿಪ ಶತಕಮು | ,, |
| ೧೫೯. | ಚೆನ್ನಬಸವ ಪುರಾಣಮು | ಅತ್ತಲೂರಿ ಪಾಪಯ್ಯ ಕವಿ |
| ೧೬೦. | ಷಟ್‌ಸ್ಥಲ ಜ್ಞಾನಮು | |
| ೧೬೧. | ಪ್ರಭುಲಿಂಗಲೀಲಾ ಕಾವ್ಯಮು | ಪಿಡುಪರ್ತಿ ಬಸವ ಕವಿ |
| ೧೬೨. | ಪದ್ಯಬಸವ ಪುರಾಣಮು | ,, |
| ೧೬೩. | ರೇಣುಕ ಚರಿತ್ರಮು | ಸ. ಸೂರ್ಯನಾರಾಯಣ ಶಾಸ್ತ್ರೀ |
| ೧೬೪. | ಅನ್ಯವಾದ ಕೋಲಾಹಲಮು | ಶಿವಯೋಗೀಂದ್ರ ಕವಿ |
| ೧೬೫. | ಚತುರ್ವೇದ ಸಾರಮು | ಪಾಲ್ಕುರುಕಿ ಸೋಮನಾಥ |

| | | |
|---|---|---|
| ೧೬೬. | ವೀರಶೈವ ದೀಕ್ಷಾಬೋಧಮು | ಪಿಡುಪರ್ತಿ ಬಸವ ಕವಿ |
| ೧೬೭. | ಜಂಗಮ ಬ್ರಾಹ್ಮಣ ಲಕ್ಷಣಮು | |
| ೧೬೮. | ವೀರಮಾಹೇಶ್ವರಾಚಾರಸಾರ —ಸಂಗ್ರಹಮು | ಪರ್ವತಮಂತ್ರಿ ಲಿಂಗನ್ನ |
| ೧೬೯. | ಶೈವಾಚಾರ ಸಂಗ್ರಹಮು | ತಿರುಮಲ ನಾಥ |
| ೧೭೦. | ಶೈವಸಿದ್ಧಾಂತ ಶಿಖಾಮಣಿ | ನಾಗೇಶ್ವರ ಕವಿ |
| ೧೭೧. | ವೀರಶೈವಾಚಾರ ಸಂಗ್ರಹಮು | ಶಿವರಾಮಲಿಂಗ ಕವಿ |
| ೧೭೨. | ಶಿವಯೋಗಸಾರಮು | ಗಣಪತಿದೇವ ಕವಿ |
| ೧೭೩. | ಷಟ್ಸ್ಥಲ ದರ್ಪಣಮು | ಸಿದ್ಧನಾಥ ಕವಿ |
| ೧೭೪. | ದೇವಾಂಗ ಪುರಾಣಮು | ಭದ್ರಕವಿ–ಲಿಂಗಕವಿ |
| ೧೭೫. | ಶೈವಾಗಮ ಶಿಖಾಮಣಿ | ಅಪ್ಪನಾರ್ಯುಡು |
| ೧೭೬. | ಮನೋಬೋಧ | ಗಣಪನಾರಾಧ್ಯ |
| ೧೭೭. | ಗುರುಬೋಧ | ಸೋಮನ ಕವಿ |
| ೧೭೮. | ಶಿವಜ್ಞಾನ ಮಂಜರಿ | ಪರಮಾನಂದ ಯತಿ |
| ೧೭೯. | ಪ್ರಭುದೇವ ವಾಕ್ಯಮು | ರೇವಣಸಿದ್ಧಲು |
| ೧೮೦. | ವೀರಶೈವ ರಹಸ್ಯಮು | ಭದ್ರಾರಾಧ್ಯುಡು |
| ೧೮೧. | ಶ್ರೀಶೈಲ ಮಾಹಾತ್ಮ್ಯಮು | ಶೇಷನಾರಾಧ್ಯುಲು |
| ೧೮೨. | ಶಿವರಹಸ್ಯ ಖಂಡಮು | ಓಬಳ ಕವಿ |
| ೧೮೩. | ತತ್ವಬೋಧಿನೀ | ಬ್ರಹ್ಮಯ ಲಿಂಗ |
| ೧೮೪. | ಶೀಲ ಸಂಪಾದನಮು | .... .... |
| ೧೮೫. | ಶಿವಲೀಲಾ ವಿಲಾಸಮು | ತಿಮ್ಮನ್ನ ಕವಿ |
| ೧೮೬. | ರಾಜಶೇಖರ ವಿಲಾಸಮು | ,, |
| ೧೮೭. | ನವಚೋಳ ಚರಿತ್ರಮು | ಪಾಲಿಶೆಟ್ಟಿ ಲಿಂಗನ್ನ |
| ೧೮೮. | ಯೋಗೀಶ್ವರ ವಿಲಾಸಮು | ಸಿದ್ಧೇಂದ್ರ ಕವಿ |
| ೧೮೯. | ಸರ್ವೇಶ್ವರ ಶತಕಮು | ಅನ್ನಮಯ್ಯ ಕವಿ |
| ೧೯೦. | ವೀರಭದ್ರ ವಿಜಯಮು | ಶಿವಲೆಂಕ ಮಲ್ಲ |
| ೧೯೧. | ಶಿವತತ್ವ ರಸಾಯನಮು | ಶಿವದೇವ ಕವಿ |

| | | |
|---|---|---|
| ೧೯೨. | ಶಿವಲೀಲಾ ವಿಲಾಸವಮು | ನಿಶ್ಯಂಕ ಕೊಮ್ಮನ್ನ |
| ೧೯೩. | ನೀತಿಸಾರವಮು | ಪ್ರತಾಪ ರುದ್ರದೇವ |
| ೧೯೪. | ಪುರುಷಾರ್ಥ ಸಾರವಮು | ಶಿವದೇವ ಮಂತ್ರಿ |
| ೧೯೫. | ವೇಮನ ಪದ್ಯಮುಲು | ವೇಮನ ಯೋಗಿ |

## ತಮಿಳು

| | | |
|---|---|---|
| ೧೯೬. | ಸಿದ್ಧಾಂತ ಶಿಖಾಮಣಿ | ಶಿವಪ್ರಕಾಶ ಸ್ವಾಮಿಗಳ್ |
| ೧೯೭. | ಪ್ರಭುಲಿಂಗ ಲೀಲೈ | ,, |
| ೧೯೮. | ತಿರು ವಾಚಕಂ | ಮಾಣಿಕ್ಯ ವಾಚಕರು |
| ೧೯೯. | ತೇವಾರಂ | ಸುಂದರ್, ಅಪ್ಪರ್ ಮತ್ತು ತಿರುಜ್ಞಾನ ಸಂಬಂಧರ್ ಇತ್ಯಾದಿ |
| ೨೦೦. | ಪೆರಿಯ ಪುರಾಣಂ | ಶೇಕ್ಕಿರಾರ್ |
| ೨೦೧. | ವಸವ ಪುರಾಣಂ | ...... ...... |
| ೨೦೨. | ವೀರಶೈವ ವಿಳಕ್ಕ ವಿನಾವಿಡೈ | ನಾಗಿ ಚೆಟ್ಟಿಯಾರ್ |
| ೨೦೩. | ಕುಮಾರದೇವ ಅಭಿಷೇಕ—ಮಾಲೈ | ಚೊಕ್ಕಲಿಂಗ ಸ್ವಾಮಿಗಳ್ |
| ೨೦೪. | ಇಷ್ಟಲಿಂಗ ಅಗವಲ್ | ಕರುಣಪ್ರಕಾಶ ಸ್ವಾಮಿಗಳ್ |
| ೨೦೫. | ನವಮಣಿ ಮಾಲೈ | ಷಣ್ಮುಗಂಪಿಳ್ಳೈ |
| ೨೦೬. | ತೇವಾರ ಪದಿಗಂಗಳ್ | ಅಗಸ್ತ್ಯಮುನಿ |
| ೨೦೭. | ಅಕ್ಕಮಹಾದೇವಿ ಚರಿತಂ | ನಾಗಿ ಚೆಟ್ಟಿಯಾರ್ |
| ೨೦೮. | ವೀರಾಗಮಮ್ | ಶಾಂತಲಿಂಗ ಸ್ವಾಮಿಗಳ್ |
| ೨೦೯. | ತಿರುಕ್ಕುರಳ್ | ತಿರುವಳ್ಳುವರ್ |
| ೨೧೦. | ತಿರುವಿಳಿಯಾಡರ್ ಪುರಾಣಂ | ಪರಂಜ್ಯೋತಿ ಮುನಿಗಳ್ |
| ೨೧೧. | ತಿರುಕ್ಕೋವಯಾರ್ | ಮಾಣಿಕ್ಯವಾಚಕರ್ |
| ೨೧೨. | ಷಟ್ಸ್ಥಲಾಗಮಮ್ | ಶಿವಪ್ರಕಾಶ ಸ್ವಾಮಿಗಳ್ |
| ೨೧೩. | ವೀರಸಿಂಹಾಸನ ಮಠಂಪುರಾಣಂ | —— —— |

## ಮರಾಠಿ



## ENGLISH

231. The Anubhava-mantapa — C.D. Uttangi

232. Mysticism of Veerasaivism
-Sri Shivakumaraswamigal, Navakalyanamut

233. Basava and his Contemporaries
A. R. Jayaram M.A.,

234. The Thoughts of Basava
—N. K. Sangalmath B.A.,B.T.,

235. Sayings of Basava
-Vachana Mantapa, Belgaum.

## ವೀರಶೈವ ಹಿಂದೀ ಗ್ರಂಥಗಳು

೨೩೬. ಹಿಂದೀ ಬಸವ ಪುರಾಣಂ — ಶ್ರೀ ಪುಟ್ಟರಾಜ ಗವಾಯಿಗಳು

೨೩೭. ಬಸವೇಶ್ವರ್‌ಕೆ ವಚನ್ — ಶ್ರೀ ಎಂ. ರಾಜೇಶ್ವರಯ್ಯ

೨೩೮. ಪ್ರಭುದೇವ್ ವಚನ್ ಚಂದ್ರಿಕಾ — ಶ್ರೀ ಶಿವಕುಮಾರ ಸ್ವಾಮಿಗಳು

೨೩೯. ವಚನ ಶಾಸ್ತ್ರ ಪರಿಚಯ — ಡಾ|| ಆರ್.ಆರ್. ದಿವಾಕರ್

## ವಾಚನಾರ್ಹ ನೂತನ ಗ್ರಂಥಗಳು

೧. ವಚನಶಾಸ್ತ್ರ ರಹಸ್ಯ — ಡಾ|| ಆರ್.ಆರ್. ದಿವಾಕರ್

೨. ವಚನಧರ್ಮಸಾರ — ಡಾ|| ಎಂ ಆರ್. ಶ್ರೀನಿವಾಸಮೂರ್ತಿ

೩. ವೀರಶೈವ ಸಿದ್ಧಾಂತ ಸುಧಾಕರ — ಕೈ ಉಸುಚಗಿ ಶಂಕರ ಶಾಸ್ತ್ರೀ

೪. ವೀರಶೈವ ತತ್ವಸಂಗ್ರಹ — ಪ್ರೊ|| ಎಸ್. ಎಸ್. ಬಸವನಾಳ್

೫. ವೇದಪರಿಚಯ — ಶ್ರೀ ಶಂಭುಲಿಂಗ ಸ್ವಾಮಿಗಳು

೬. ಆಗಮ ಪರಿಜ್ಞಾನ — ,,

೭. ವೈದಿಕ ವಾಙ್ಮಯ ರಹಸ್ಯ — ,,

೮. ಶಿವಶರಣರ ಚರಿತ್ರೆಗಳು — ಡಾ|| ರಾ.ಬ.ಫ.ಗು. ಹಳಕಟ್ಟಿ

೯, ಕನ್ನಡ ಲಿಂಗಧಾರಣ ಚಂದ್ರಿಕೆ ಕೈ॥ ಪಂಡಿತರತ್ನಂ ಶಿರ್ಸಿ ಗುರುಶಾಂತ
೧೦. ಶಿವಲಿಂಗಾರ್ಚನ ಪ್ರಯೋಗ ,, (ಶಾಸ್ತ್ರೀ
೧೧. ಶಿವಾನುಭವ ಶಬ್ದಕೋಶ ರಾ.ಬ.ಫ.ಗು. ಹಳಕಟ್ಟಿ
೧೨. ಸರ್ವಜ್ಞ ವಚನಗಳು ರೆವರೆಂಡ್ ಚನ್ನಪ್ಪ ಉತ್ತಂಗಿ
೧೩. ಭಕ್ತಿ ಭಂಡಾರಿ ಬಸವಣ್ಣನವರು ಡಾ॥ ಎಂ.ಆರ್. ಶ್ರೀನಿವಾಸ
೧೪. ವೀರಶೈವ ದರ್ಶನ ಶ್ರೀ ಕುಮಾರಸ್ವಾಮಿಗಳು (ಮೂರ್ತಿ
೧೫. ಶ್ರೀ ಬಸವ ಚರಿತ್ರೆ ಕೈ॥ ಶ್ರೀ ಎಂ.ಎಂ. ಹರ್ಡೇಕರ್
೧೬. ಕನ್ನಡ ವೀರಶೈವಾನಂದ ಚಂದ್ರಿಕೆ
—ಕೈ॥ ಪಂಡಿತರತ್ನಂ ಶಿರ್ಸಿ ಗುರುಶಾಂತ ಶಾಸ್ತ್ರೀ
೧೭. ವೀರಶೈವ ಸಾಹಿತ್ಯ ಮತ್ತು ಇತಿಹಾಸ (ಭಾಗ ೧, ೨, ೩.)
ಶ್ರೀ ಬಿ. ಶಿವಮೂರ್ತಿಶಾಸ್ತ್ರೀ
೧೮. ಪ್ರಭುವಿನ ಪ್ರಭೆ ಶ್ರೀ ಮನೋಹರರಾವ್ ದೇಶಪಾಂಡೆ
೧೯. ವೀರಶೈವ ಮಹಾಪುರುಷರು ಬಿ. ಶಿವಮೂರ್ತಿ ಶಾಸ್ತ್ರೀ
೨೦. ಶ್ರೀ ರೇವಣಸಿದ್ಧರು ಶ್ರೀ ಚೆನ್ನಮಲ್ಲಿಕಾರ್ಜುನ
೨೧. ಶಿವಯೋಗ ಮಂದಿರದ ಬೆಳಕು ಶಿ. ಮಂದಿರ,
೨೨. ನೈವೇದ್ಯ ಮುರುಘಾಮಠ, ಧಾರವಾಡ
೨೩. ದೇವರ ದಾಸಿಮಯ್ಯ ಪ್ರಶಸ್ತಿ ನಿಡುಮಾಮಿಡಿ ಮಠ, ಗೂಳೂರು
೨೪. ವಿಭೂತಿ ಗುರುಕುಮಾರಾಶ್ರಮ, ಗಿರಿಯಾಪುರ
೨೫. ನಿಜಗುಣ ಸ್ವರೂಪ ದರ್ಶನ ರುದ್ರಾಕ್ಷಿ ಮಠ, ಹುಬ್ಬಳ್ಳಿ
೨೬. ಉಪನ್ಯಾಸ ಸಂಗ್ರಹ ಕೈ॥ ಶಿರ್ಸಿ ಗುರು ಶಾಂತ ಶಾಸ್ತ್ರೀ
೨೭. ವೀರಶೈವರತ್ನ ಕೈ॥ ಕಾಶೀನಾಥ ಶಾಸ್ತ್ರೀ
೨೮. ಅಲ್ಲಮವ್ಯೋಮ ಕೈ॥ ಸಿ. ದುಂ. ಪಾವಟೆ
೨೯. ಬಸವಭಾನು ,,
೩೦. ಚೆನ್ನಬಸವತೈಜಸ ,,
೩೧. ಮೈಸೂರ್ ಸ್ಟಾರ್ ಕರೆಸ್‌ಪಾಂಡೆನ್ಸ್
ವೈ. ವಿರೂಪಾಕ್ಷಯ್ಯ, ಮೈಸೂರು

# ಅನುಬಂಧ : ೨

**ಶಿವಾಗಮಗಳು:—೨೮.**

೧. ಕಾಮಿಕಾ–ಗಮ
೨. ಯೋಗಜ ,,
೩. ಚಿಂತ್ಯ ,,
೪. ಕಾರಣ ,,
೫. ಅಜಿತ ,,
೬. ದೀಪ್ತ ,,
೭. ಸೂಕ್ಷ್ಮ ,,
೮. ಅಂಶುಮರ್ನ್ಮ,,
೯. ಸುಪ್ರಬೋಧ,,
೧೦. ವಿಜಯ ,,
೧೧. ನಿಶ್ವಾಸ ,,
೧೨. ಸ್ವಾಯಂಭು ,,
೧೩. ವೀರ
೧೪. ರೌರವ ,,
೧೫. ಮಕುಟಾ–ಗಮ
೧೬. ವಿಮಲ ,,
೧೭. ಚಂದ್ರಜ್ಞಾನ,,
೧೮. ಬಿಂಬ ,,
೧೯. ಪ್ರೋದ್ಗೀತ,,
೨೦. ಲಲಿತ ,,
೨೧. ಸಹಸ್ರ ,,
೨೨. ಸಿದ್ಧ ,,
೨೩. ಶಾಂತ ,,
೨೪. ಸರ್ವೋತ್ತರ ,,
೨೫. ಪಾರಮೇಶ್ವರ ,,
೨೬. ಕಿರಣ ,,
೨೭. ಅನಲ ,,
೨೮. ವಾತುಲಾಗಮ ,,

ವೀರಶೈವ ಮತವು ಆಗಮ ಮತ್ತು ವೇದಗಳ ಪ್ರಾಮಾಣ್ಯವನ್ನು ಒಪ್ಪಿಕೊಂಡಿದೆ. ವೇದಗಳು ಪರಬ್ರಹ್ಮನ ಉಸಿರು ಎಂದೂ, ಆಗಮಗಳು ಪರಬ್ರಹ್ಮನ ಮಾತುಗಳು–ಎಂದೂ ಪ್ರಾಚೀನರು ಹೇಳಿದ್ದಾರೆ. ಆದರೆ, ವೇದಗಳ ಕರ್ಮಕಾಂಡಗಳನ್ನು ಮಾತ್ರ ವೀರಶೈವ ಸಿದ್ಧಾಂತಕಾರರು ಅಂಗೀಕರಿಸಿಲ್ಲ. ವೀರಶೈವ ಮತದ ಬುನಾದಿ ಶಿವಾಗಮಗಳೆಂದೂ ಆಗಮಗಳು ವೇದಗಳಿಗಿಂತ ಪ್ರಾಚೀನವಾದವುಗಳೆಂದೂ ಅನೇಕ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ವೀರಶೈವ ಧರ್ಮಗ್ರಂಥಕಾರರೂ ವಚನಕಾರರಾದ ಶಿವಶರಣರೂ ಶಿವಾಗಮಗಳನ್ನು ಮೇಲಿಂದಮೇಲೆ ಪ್ರಮಾಣವಾಗಿ ಸ್ವೀಕರಿಸಿರುವುದು ಗಮನಾರ್ಹವಾಗಿದೆ. ವೀರಶೈವ ತತ್ವಜ್ಞಾನ ಮತ್ತು ಮತಾಚಾರಗಳನ್ನು ತಿಳಿಯಲು ಶಿವಾಗಮಗಳ ಅಧ್ಯಯನವು ಅಗತ್ಯವಾದುದು.

# ಅನುಬಂಧ: ೩

## ೧೦೧ ಸ್ಥಳಗಳು —

ವೀರಶೈವ ಸಿದ್ಧಾಂತ ಮಾರ್ಗದಿಂದ ಲಿಂಗಾಂಗ ಸಾಮರಸ್ಯವನ್ನು ಪಡೆಯಲು ಸಾಧಕವಾದ ಷಟ್‌ಸ್ಥಲಗಳು, ತದಂತರ್ಗತವಾದ ೧೦೧ ಸ್ಥಳಗಳು ಇವುಗಳಲ್ಲಿ ಅಂಗಸ್ಥಳಗಳು ೪೪, ಲಿಂಗಸ್ಥಳಗಳು ೫೭.

ಅಂಗಸ್ಥಳಗಳು: —೪೪.

೧. ಪಿಂಡಸ್ಥಳ
೨. ಪಿಂಡಜ್ಞಾನ
೩. ಸಂಸಾರ ಹೇಯ
೪. ಗುರುಕಾರುಣ್ಯ
೫. ಲಿಂಗಧಾರಣ
೬. ವಿಭೂತಿ
೭. ರುದ್ರಾಕ್ಷಿ
೮. ಪಂಚಾಕ್ಷರೀ
೯. ಭಕ್ತ
೧೦. ಭಕ್ತ-ಜಂಗಮ [ಉಭಯ]
೧೧. ಗುರು ಲಿಂಗಜಂಗಮ[ತ್ರಿವಿಧ]
೧೨. ಗುರುಲಿಂಗ ಜಂಗಮ ಪ್ರಸಾದ [ಚತುರ್ವಿಧ]
೧೩. ಉಪಾಧಿಮಾಟ
೧೪. ನಿರೂಪಾಧಿಮಾಟ
೧೫. ಸಹಜಮಾಟ
೧೬. ಮಾಹೇಶ್ವರ
೧೭. ಲಿಂಗನಿಷ್ಠಾ
೧೮. ಪೂರ್ವಾಶ್ರಮ ನಿರಸನ
೧೯. ವಾಗದ್ವೈತ ನಿರಸನ
೨೦. ಆಹ್ವಾನ ನಿರಸನ
೨೧. ಅಷ್ಟತನುಮೂರ್ತಿ ನಿರಸನ
೨೨. ಸರ್ವಗತ ನಿರಸನ
೨೩. ಶಿವಜಗನ್ಮಯ
೨೪. ಭಕ್ತ ದೇಹಿಕ ಲಿಂಗ
೨೫. ಪ್ರಸಾದಿ
೨೬. ಗುರು ಮಹಾತ್ಮೆ
೨೭. ಲಿಂಗಮಹಾತ್ಮೆ
೨೮. ಜಂಗಮ ಮಹಾತ್ಮೆ
೨೯. ಶರಣ ಮಹಾತ್ಮೆ
೩೦. ಭಕ್ತ ಮಹಾತ್ಮೆ
೩೧. ಪ್ರಸಾದ ಮಹಾತ್ಮೆ
೩೨. ಪ್ರಾಣಲಿಂಗಿ
೩೩. ಪ್ರಾಣಲಿಂಗಾರ್ಚನೆ

೩೪. ಶಿವಯೋಗಸಮಾಧಿ
೩೫. ಲಿಂಗನಿಜ
೩೬. ಅಂಗಲಿಂಗ
೩೭. ಶರಣಸ್ಥಲ
೩೮. ತಾಮಸ ನಿರಸನ
೩೯. ನಿರ್ದೇಶ
೪೦. ಶೀಲ ಸಂಪಾದನೆ
೪೧. ಐಕ್ಯಸ್ಥಲಾನಿ
೪೨. ಏಕಭಾಜನ
೪೩. ಸಹಭೋಜನ

ಲಿಂಗಸ್ಥಲಗಳು—೫೭

೪೪. ಗುರುಲಿಂಗ
೪೫. ದೀಕ್ಷಾಗುರು
೪೬. ಶಿಕ್ಷಾಗುರು
೪೭. ಜ್ಞಾನಗುರು
೪೮. ಕ್ರಿಯಾಲಿಂಗ
೪೯. ಭಾವಲಿಂಗ
೫೦. ಸ್ವಯಂಸ್ಥಲ
೫೧. ಚರಸ್ಥಲ
೫೨. ಪರಸ್ಥಲ
೫೩. ಕ್ರಿಯಾಗಮ
೫೪. ಭಾವಾಗಮ
೫೫. ಜ್ಞಾನಾಗಮ
೫೬. ಸಕಾಯ
೫೭. ಅಕಾಯ
೫೮. ಪರಕಾಯ
೫೯. ಧರ್ಮಾಚಾರ
೬೦. ಭಾವಾಚಾರ
೬೧. ಜ್ಞಾನಾಚಾರ
೬೨. ಕಾಯಾನುಗ್ರಹ
೬೩. ಇಂದ್ರಿಯಾನುಗ್ರಹ
೬೪. ಪ್ರಾಣಾನುಗ್ರಹ
೬೫. ಕಾಯಾರ್ಪಿತ
೬೬. ಕರಣಾರ್ಪಿತ
೬೭. ಭಾವಾರ್ಪಿತ
೬೮. ಶಿಷ್ಯಸ್ಥಲ
೬೯. ಶುಶ್ರೂಷಾಸ್ಥಲ
೭೦. ಸೇವ್ಯಸ್ಥಲ
೭೧. ಜೀವಾತ್ಮ
೭೨. ಅಂತರಾತ್ಮ
೭೩. ಪರಮಾತ್ಮ
೭೪. ನಿರ್ದೇಹಾಗಮ
೭೫. ನಿರ್ಭಾವಾಗಮನ
೭೬. ನಷ್ಟಾಗಮ
೭೭. ಆದಿಪ್ರಸಾದಿ
೭೮. ಅಂತ್ಯಪ್ರಸಾದಿ
೭೯. ಸೇವ್ಯಪ್ರಸಾದಿ
೮೦. ದೀಕ್ಷಾಪಾದೋದಕ
೮೧. ಶಿಕ್ಷಾಪಾದೋದಕ
೮೨. ಜ್ಞಾನಪಾದೋದಕ
೮೩. ಕ್ರಿಯಾನಿಷ್ಪತ್ತಿ

೮೪. ಭಾವನಿಷ್ಪತ್ತಿ
೮೫. ಜ್ಞಾನನಿಷ್ಪತ್ತಿ
೮೬. ಪಿಂಡಾಕಾಶ
೮೭. ಬಿಂದ್ವಾಕಾಶ
೮೮. ಮಹದಾಕಾಶ
೮೯. ಕ್ರಿಯಾಪ್ರಕಾಶ
೯೦. ಭಾವಪ್ರಕಾಶ
೯೧. ಜ್ಞಾನಪ್ರಕಾಶ
೯೨. ಸ್ವೀಕೃತ ಪ್ರಸಾದಿ
೯೩. ಶಿಷ್ಟೋದನ ಪ್ರಸಾದಿ
೯೪. ಚರಾಚರಂನಾಸ್ತಿ
೯೫. ಭಾಂಡ
೯೬. ಭಾಜನ
೯೭. ಅಂಗಲೇಪನ
೯೮. ಸ್ವಪರಜ್ಞಾನ
೯೯. ಭಾವಾಭಾರ
೧೦೦. ಭಾವಶೂನ್ಯ

## ಅನುಬಂಧಃ ೪

೧. ಶಿವ ೨. ಶಕ್ತಿ ೩. ಸದಾಶಿವ ೪. ಈಶ್ವರ ೫. ಶುದ್ಧವಿದ್ಯಾ ೬. ಮಾಯಾ ೭. ಕಲಾ ೮. ವಿದ್ಯಾ ೯. ರಾಗ ೧೦ ಕಾಲ ೧೧. ನಿಯತಿ ೧೨. ಪುರುಷ ೧೩. ಪ್ರಕೃತಿ ೧೪. ಅಹಂಕಾರ ೧೫. ಬುದ್ಧಿ ೧೬. ಮನಃ ೧೭. ಶ್ರೋತ್ರ ೧೮. ತ್ವಕ್ ೧೯. ಚಕ್ಷುಃ ೨೦. ಜಿಹ್ವಾ ೨೧. ಘ್ರಾಣ ೨೨. ವಾಕ್ ೨೩. ಪಾಣಿ ೨೪. ಪಾದ ೨೫. ಪಾಯು ೨೬. ಉಪಸ್ಥ ೨೭. ಶಬ್ದ ೨೮. ಸ್ಪರ್ಶ ೨೯. ರೂಪ ೩೦. ರಸ ೩೧. ಗಂಧ ೩೨. ಆಕಾಶ ೩೩. ವಾಯು ೩೪. ವಹ್ನಿ ೩೫. ಸಲಿಲ ೩೬. ಭೂಮಿ

ಅಷ್ಟಾವರಣಃ— ೧. ಗುರು ೨. ಲಿಂಗ ೩. ಜಂಗಮ ೪. ಪಾದೋದಕ ೫. ಪ್ರಸಾದ ೬. ಭಸ್ಮ ೭. ರುದ್ರಾಕ್ಷ ೮. ಮಂತ್ರ

ಷಟ್‌ಸ್ಥಲಗಳುಃ— ೧. ಭಕ್ತ ೨. ಮಾಹೇಶ ೩. ಪ್ರಾಣಲಿಂಗಿ ೪. ಪ್ರಸಾದಿ ೫. ಶರಣ ೬. ಐಕ್ಯ

ತ್ರಿವಿಧ ಲಿಂಗಗಳುಃ— ೧. ಇಷ್ಟಲಿಂಗ ೨. ಪ್ರಾಣಲಿಂಗ ೩. ಭಾವಲಿಂಗ

ದೀಕ್ಷಾತ್ರಯಃ— ೧. ವೇಧಾ ೨. ಕ್ರಿಯಾ ೩. ಮನು

ಪಂಚಾಚಾರಗಳು:—

೧. ಸದಾಚಾರ ೨. ಶಿವಾಚಾರ ೩. ಲಿಂಗಾಚಾರ ೪. ಭೃತ್ಯಾಚಾರ ೫. ಗಣಾಚಾರ

ಮಲತ್ರಯಗಳು:—

೧. ಆಣವ ಮಲ ೨. ಕಾರ್ಮಿಕ ಮಲ ೩. ಮಾಯಾ ಮಲ

ಷಡ್‌ಲಿಂಗಗಳು:—

೧. ಆಚಾರ ಲಿಂಗ ೨. ಗುರುಲಿಂಗ ೩. ಜಂಗಮ ಲಿಂಗ ೪. ಪ್ರಸಾದ ಲಿಂಗ ೫. ಶಿವಲಿಂಗ ೬. ಮಹಾಲಿಂಗ

## ಅನುಬಂಧ: ೫.

ವೀರಶೈವ ಪಂಚಾಚಾರ್ಯರು:—

೧. ಶ್ರೀ ರೇಣುಕಾಚಾರ್ಯರು ಅಥವಾ ರೇವಣಸಿದ್ಧೇಶ್ವರರು
೨. ಶ್ರೀ ದಾರುಕಾಚಾರ್ಯರು ಅಥವಾ ಮರುಲ ಸಿದ್ಧೇಶ್ವರರು
೩. ಶ್ರೀ ಪಂಡಿತಾರಾಧ್ಯರು
೪. ಶ್ರೀ ಏಕೋರಾಮಾರಾಧ್ಯರು
೫. ಶ್ರೀ ವಿಶ್ವಾರಾಧ್ಯರು

ವೀರಶೈವ ಪಂಡಿತತ್ರಯರು:—

೧. ಶ್ರೀಪತಿ ಪಂಡಿತ
೨. ಮಲ್ಲಿಕಾರ್ಜುನ ಪಂಡಿತ
೩. ಮಂಚಣ್ಣ ಪಂಡಿತ

ಬಸವಾದಿ ಪ್ರಮಥರು:—

೧. ಶ್ರೀ ಬಸವೇಶ್ವರ
೨. ಶ್ರೀ ಚೆನ್ನಬಸವೇಶ್ವರ
೩. ಶ್ರೀ ಪ್ರಭು ದೇವರು

೪. ಶ್ರೀ ಸಿದ್ಧರಾಮ ಶಿವಯೋಗಿ
೫. ಶ್ರೀ ಮಡಿವಳ ಮಾಚಯ್ಯನವರು
೬. ಅಕ್ಕಮಹಾದೇವಿಯವರು
೭. ಅಕ್ಕನಾಗಮ್ಮನವರು
೮. ದೇವರ ದಾಸಿಮಯ್ಯನವರು
೯. ಶಂಕರ ದಾಸಿಮಯ್ಯನವರು
೧೦. ಏಕಾಂತದ ರಾಮಯ್ಯನವರು
೧೧. ಕೆರೆಯ ಪದ್ಮರಸರು
೧೨. ಪಾಲ್ಕುರಿಕೆ ಸೋಮನಾಥರು
೧೩. ತೋಂಟದ ಸಿದ್ಧಲಿಂಗೇಶ್ವರರು
೧೪. ಮಾದೇಶ್ವರರು
೧೫. ಕೊಟ್ಟೂರು ಬಸವೇಶ್ವರರು
೧೬. ಶರಣ ಬಸವೇಶ್ವರರು
೧೭. ಗುಬ್ಬಿ ಚನ್ನಬಸವೇಶ್ವರರು
೧೮. ಗದ್ದಿಗೆ ಮರುಳ ಸಿದ್ಧೇಶ್ವರರು
೧೯. ಕೆಂಡಗಣ್ಣ ಸ್ವಾಮಿಗಳು
೨೦. ಗುರು ಮಲ್ಲೇಶ್ವರರು

## ಅನುಬಂಧ: ೬

ಷಟ್‌ಚಕ್ರಗಳು;— ೧. ಆಧಾರ ೨. ಸ್ವಾಧಿಷ್ಠಾನ ೩. ಮಣಿಪೂರಕ ೪. ಅನಾಹತ ೫. ವಿಶುದ್ಧಿ ೬. ಆಜ್ಞಾಚಕ್ರ

ನಾಲ್ಕು ವೇದಗಳು:—೧. ಋಗ್ವೇದ ೨. ಯಜುರ್ವೇದ ೩. ಸಾಮವೇದ ೪. ಅಥರ್ವಣವೇದ

ಷಡ್‌ದರ್ಶನಗಳು:— ೧ ಸಾಂಖ್ಯದರ್ಶನ ೨. ಯೋಗದರ್ಶನ ೩. ವೈಶೇಷಿಕದರ್ಶನ ೪. ನ್ಯಾಯದರ್ಶನ ೫. ಪೂರ್ವಮೀಮಾಂಸಾದರ್ಶನ ೬. ಉತ್ತರಮೀಮಾಂಸಾದರ್ಶನ

**ಷಟ್‌ಶಾಸ್ತ್ರಗಳು:**–ಅಂಗಗಳು ೧. ಶಿಕ್ಷಾ ೨. ವ್ಯಾಕರಣ ೩. ಛಂದಸ್ಸು ೪. ನಿರುಕ್ತ ೫. ಜ್ಯೋತಿಷ್ಯ ೬. ಕಲ್ಪ

**ಪಂಚಕೋಶಗಳು:**— ೧. ಅನ್ನಮಯಕೋಶ ೨. ಪ್ರಾಣಮಯಕೋಶ ೩. ವಿಜ್ಞಾನಮಯಕೋಶ ೪. ಆನಂದಮಯಕೋಶ ೫. ಮನೋಮಯಕೋಶ

**ಅಂತಃಕರಣಗಳು:**— ೧. ಮನಸ್ಸು ೨. ಬುದ್ಧಿ ೩. ಚಿತ್ತ ೪. ಅಹಂಕಾರ

ಸಕೀಲುಗಳು ೨೧೬

**ವೀರಶೈವ ಪಂಚಗೋತ್ರಗಳು:**—

೧. ವೀರ ೨. ನಂದಿ ೩. ಭೃಂಗಿ ೪. ವೃಷಭ ೫. ಸ್ಕಂದ

**ಪಂಚಸೂತ್ರಗಳು:**—

೧. ಪಡ್ವಿಡಿ ೨. ವೃಷ್ಟಿ ೩. ಲಂಬನ ೪. ಮುಕ್ತಾಗುಚ್ಛ ೫. ಪಂಚವರ್ಣ

**ತ್ರಿವಿಧ ತಪಸ್ಸು:**—

೧. ಶಾರೀರಿಕ ತಪಸ್ಸು-ಶರೀರವನ್ನು ಸತ್ಕಾರ್ಯಗಳಲ್ಲಿ ವಿನಿಯೋಗಿಸುವುದು.

೨. ವಾಚಿಕ ತಪಸ್ಸು-ಮಾತುಗಳನ್ನು ಸತ್ಯ ಮತ್ತು ಸಂಯಮಗಳಿಗೆ ಒಳಪಡಿಸುವುದು.

೩. ಮಾನಸಿಕ ತಪಸ್ಸು–ಮನಸ್ಸನ್ನು ಶಮ ದಮ ವಿರಕ್ತಿ ಮೊದಲಾದ ಮಾರ್ಗಗಳಿಗೆ ತಿರುಗಿಸುವುದು.

**ಶೀಲಗಳು ೬೩:**—

೧. ಶಿವಲಿಂಗಾರ್ಚಕನಾಗಿರುವುದು

೨. ಲೌಕಿಕವನು ಅತಿಗಳೆವುದು

೩. ಶ್ವಾನ ಸೂಕರ ಮಾರ್ಜಾಲಂಗಳನು ಮನೆಗೆ ಸೇರಿಸದಿರುವುದು

೪. ಪಂಚ ಸೂತಕಗಳನು ಬಿಡುವುದು

೫. ಶ್ರಾದ್ಧಾದಿಗಳನು ಬಿಡುವುದು

೬. ಮೂಢ ನಂಬಿಕೆಯ ಉಪಾಸನೆಗಳ [illegible]

೭. ಸ್ಥಾವರ ಲಿಂಗಗಳ ಭಜನೆಯ ತ್ಯಾಗ
೮. ಭವಿ ಪಾಕವಂ ಬಿಡುವುದು
೯. ಮಂತ್ರದಿಂದ ಜಲಶುದ್ಧಿಯನ್ನು ಮಾಡುವುದು
೧೦. ತನ್ನ ಹೆಂಡತಿಗೆ ಸಮಶೀಲ ಮಾಡುವುದು
೧೧. ಭವಿಮೋಹವನು ಬಿಡುವುದು
೧೨. ಗುಣಸಂಪಾದನೆ ಮಾಡುವುದು
೧೩. ಜಂಗಮ ಪಾದೋದಕ ಸೇವನೆ
೧೪. ಸತಿ ಗರ್ಭಿಣಿಯಾದರೆ ವಿಭೂತಿಪಟ್ಟವನು ಕಟ್ಟಿಸುವುದು
೧೫. ಶಿವಭಕ್ತರಲ್ಲಿ ಜಾತಿಯನರಸದಿಪ್ಪುದು
೧೬. ಶಿವಲಾಂಛನಕ್ಕೆ ತಲೆಬಾಗುವುದು
೧೭. ಸುಗಂಧ ದ್ರವ್ಯಗಳ ಲೇಪನ ವರ್ಜನೆ
೧೮. ಎಮ್ಮೆಯಹಾಲು ವರ್ಜಿಸುವುದು
೧೯. ಲಿಂಗಧಾರಿಯಿಂದ ಕ್ಷೌರವಂ ಮಾಡಿಸುವುದು
೨೦. ಊಟದಲ್ಲಿ ಉಪ್ಪನ್ನು ವರ್ಜಿಸುವುದು
೨೧. ಮರದ ಹಾವುಗಗಳ ಮೆಟ್ಟುವುದು
೨೨. ಕೊಂಬಿನ ಲಾಳಿ ಮುಟ್ಟದ ವಸ್ತ್ರಧಾರಣ ಮಾಡುವುದು
೨೩. ಚಿಲುಮೆಯ ಅಗ್ಗಣಿಯಲ್ಲಿ ವಸ್ತ್ರವ ತೊಳೆಯುವುದು
೨೪. ಹುಸಿಯ ನುಡಿಯದಿಹುದು
೨೫. ತ್ರಿವಿಧ ದಾಸೋಹ (ಗುರು. ಲಿಂಗ– ಜಂಗಮ) ಮಾಡುವುದು
೨೬. ಭಕ್ತನು ಮಂತ್ರಸ್ವರೂಪನೆಂದು ಅರಿವುದು
೨೭. ಗೃಹಕ್ಷೇತ್ರಾದಿಗಳಿಗೆ ಶಿವಲಿಂಗಮುದ್ರೆ ಮಾಡಿಸುವುದು
೨೮. ಭಕ್ತರಿಂದ ಭೋಜನ ಮಾಡಿಸುವುದು
೨೯. ಗೋವುಗಳಿಗೆ ಶಿವಲಿಂಗ ಮುದ್ರೆ ಹಾಕುವುದು
೩೦. ಮನೆಯ ಪಾತ್ರೆಗಳಿಗೆ ಶಿವಲಿಂಗ ಮುದ್ರೆ ಹಾಕುವುದು
೩೧. ಪಶುಗಳಿಗೆ ಭಕ್ತರಿಂದ ಹುಲ್ಲು ನೀರು ಒದಗಿಸುವುದು
೩೨. ತಮ್ಮ ಮನೆಯ ಪಶುಗಳಿಗೆ ಲಿಂಗಮುದ್ರೆಬಸವನಿಂದ ಕಟ್ಟಿಸುವುದು
೩೩. ಭಕ್ತರು ಹೊಲಿವ ತೋಟಕ್ಕೆ ಶಿವಲಿಂಗ ಮುದ್ರೆ ಮಾಡಿಸುವುದು

೩೪. ಭಕ್ತರು ಕೊಡೋಟಕ್ಕೆ ಭವಿಸಂಪರ್ಕವಾಗದಂತೆ ನೋಡುವುದು
೩೫. ವ್ಯವಸಾಯದ ಎತ್ತುಗಳಿಗೆ ಲಿಂಗಮುದ್ರೆ ಮಾಡಿಸುವುದು
೩೬. ಎಲ್ಲ ಬಗೆಯಿಂದ ಭವಿಸಂಪರ್ಕವಂ ಬಿಡುವುದು
೩೭. ಭವಿಗಳ ನೆರೆ ಬಿಡುವುದು
೩೮. ಪಾದೋದಕ ಪ್ರಸಾದದಿಂದ ರೋಗಗಳನು ವಾಸಿಮಾಡಿಕೊಳ್ಳುವುದು
೩೯. ಸದಾ ಲಿಂಗವಂ ಬಿಡದಿರುವುದು
೪೦. ಉಚಿತವರಿತು ದಾನಮಾಡುವುದು
೪೧. ಡಂಭದಿಂದ ಶಿವಾರ್ಚನೆ, ಆಶೆಯಿಂದ ಶಿವದೀಕ್ಷೆ ಮಾಡದಿರುವುದು
೪೨. ಕಿವಿಯಿಂದ ಕೆಟ್ಟ ಶಬ್ದಗಳನು ಕೇಳದಿರುವುದು
೪೩. ರತ್ನಾದಿಗಳಂ ಉಳಿದು ರುದ್ರಾಕ್ಷಿಯಂ ಧರಿಸುವುದು
೪೪. ತಮ್ಮ ಮನೆಯ ಗುರುವಿಗೆ ಮಿಗಿಲಾದ ಸೇವೆಗೆಯ್ಯುವುದು
೪೫. ಆಚಾರವೇಗುರು, ಲಿಂಗವೇ ಜಂಗಮ ಎಂದು ಭಾವಿಸುವುದು
೪೬. ಸೂರ್ಯ ಚಂದ್ರರನು ದೇವರೆಂದು ಪೂಜಿಸದಿರುವುದು
೪೭. ಸೀಮೋಲ್ಲಂಘನವ ಮಾಡದಿರುವುದು
೪೮. ಎತ್ತಿನ ಗಾಡಿಗಳಲ್ಲಿ ಪ್ರಯಾಣ ಮಾಡುವುದು
೪೯. ಎಲ್ಲವೂ ಶಿವಾಧೀನವೆಂದು ಭಾವಿಸುವುದು
೫೦. ದಶ ವಾಯುಗಳ ಇಚ್ಛೆಗೆ ಅರಿಯದಿರುವುದು
೫೧. ಅರಿಷಡ್ವರ್ಗಗಳನು ಅತಿಗಳೆಯುವುದು
೫೨. ಕಾಲ ಕಲ್ಪಿತಂಗಳನು ಅತಿಗಳೆದಿಪ್ಪುದು
೫೩. ಜಾಗ್ರತ್ ಸ್ವಪ್ನ ಸುಷುಪ್ತಿಗಳಲ್ಲಿ ಲಿಂಗವನು ಮರೆಯದಿರುವುದು
೫೪. ಶಿವನಿಗಿಂತ ಶಿವಶರಣರು ಅಧಿಕರೆಂದು ಭಾವಿಸುವುದು
೫೫. ಲಿಂಗಮುಖದಿಂದ ಭೋಗಿಸುವುದು
೫೬. ನಿರಂತರ ಸಾವಧಾನಿಯಾಗಿರುವುದು
೫೭. ಬಯಸಿ ಬಂದುದು ಅಂಗಭೋಗ, ಬಯಸದೇ ಬಂದುದು ಲಿಂಗಭೋಗ ಎಂದು ಅನುಭವಿಸುವುದು
೫೮. ಸದಾ ಲಿಂಗಾರ್ಚನೆಯಲ್ಲಿ ನಿರತನಾಗಿರುವುದು
೫೯. ಅಂಗವೇ ಲಿಂಗವಾಗಿಪ್ಪುದು

೬೦. ಅಷ್ಟ ಮಹಾ ಸಿದ್ಧಿಗಳ ತೃಣೀಕರಿಸುವುದು
೬೧. ಸರ್ವಕಾರ್ಯಗಳಲ್ಲಿ ಶಿವತತ್ವವನು ಅರಿವುದು
೬೨. ಲಿಂಗ ಸಹವರ್ತಿಯಾಗಿ ಸಹ ಭೋಜನಾಚರಣೆ ಮಾಡುವುದು
೬೩. ಶೀಲವೇ ಜ್ಞಾನ, ಜ್ಞಾನವೇ ಶೀಲವಾಗಿ ಆನಂದರೂಪನಾಗಿರುವುದು



# ಶರಣಸಾಹಿತ್ಯ ಗ್ರಂಥಮಾಲಾ, ಬೆಂಗಳೂರು-೨

| | | | |
|---|---|---|---|
| ೧ | ಪುರಾತನರ ತ್ರಿವಿಧಿ | ಶ್ರೀ ನಿಜಗುಣ ಶಿವಯೋಗಿ | 1-00 |
| *೨ | ವೀರೇಶ ಚರಿತೆ | ರಾಘವಾಂಕ ಕವಿ | 2-00 |
| *೩ | ಮನೋವಿಜಯಂ | ಗುರುಬಸವ ಕವಿ | 2-00 |
| ೪ | ಬಸವವೋದಾಹರಣಂ | ಪಾಲ್ಕುರಿಕಿ ಸೋಮನಾಥ | 1-00 |
| *೫ | ಬಿಲ್ವಾಷ್ಟೋತ್ತರಂ | ............ | 0-25 |
| *೬ | ಘನಲಿಂಗಿದೇವರ ವಚನ [ಸಟೀಕ] | ಘನಲಿಂಗಿದೇವರು | 2-00 |
| *೭ | ಯುಗವಾಣಿ....[ಕವನ ಸಂಗ್ರಹ] | | 1-00 |
| *೮ | ಸಂಕ್ಷಿಪ್ತ ಶಿವಪೂಜಾವಿಧಿ | ಕೈ॥ ವಿರೂಪಾಕ್ಷ ಒಡೆಯರ್ | 1-00 |
| ೯ | ತುರುಗಾಹಿ ರಾಮಣ್ಣ ವಚನಗಳು | ರಾಮಣ್ಣ | 0-25 |
| ೧೦ | ಭಾರತ-ಚೀಣ ಜನಜೀವನ | ............ | 0-50 |
| ೧೧ | ನ್ಯಾಯಶತಕಂ [ಸಟೀಕ] | ರಾಮೇಶ್ವರ ಮಖಿ | 0-75 |
| *೧೨ | ಕನ್ನಡಕಲಿ ಸಿರುಮನ ಚರಿತೆ | ದಿ॥ಹು.ಶ್ರೀ. ಜೋಯಿಸರು | 0-75 |
| ೧೩ | ದುಂಬಿ ಮತ್ತು ನಾದ [ಕವನಸಂಗ್ರಹ] | ಬ. ಶಿವಮೂರ್ತಿಶಾಸ್ತ್ರೀ | 1-50 |
| ೧೪ | ಕನ್ನಡ ಆದಿತ್ಯ ಪುರಾಣಂ [ಭಾಗ ೧] | ಕವಿರಾಜ ಕಂಠೀರವ | 1-00 |
| *೧೫ | ವೀರಶೈವ ಮಹಾಪುರುಷರು ,, | ಬ. ಶಿವಮೂರ್ತಿಶಾಸ್ತ್ರೀ | 5-00 |
| ೧೬ | ವೀರಶೈವ ಸಾಹಿತ್ಯ-ಇತಿಹಾಸ [ಭಾಗ ೧] | ಬ. ಶಿವಮೂರ್ತಿಶಾಸ್ತ್ರೀ | 3-00 |
| *೧೭ | ಸರ್ವಜ್ಞಮೂರ್ತಿ (ಕವಿಕಾವ್ಯ ವಿಚಾರ) | ಬ. ಶಿವಮೂರ್ತಿಶಾಸ್ತ್ರೀ | 1-00 |
| ೧೮ | ಭೈರವೇಶ್ವರ ಕಾವ್ಯದ ಕಥಾಸೂತ್ರರತ್ನಾಕರ (ಭಾಗ-೧) | ......... | 0-75 |
| ೧೯ | ಷಡಕ್ಷರ ಮಂತ್ರಮಹಿಮೆ | ಕೊಂಡಗುಳಿ ಕೇಶಿರಾಜ | 1-00 |
| ೨೦ | ಗಣಸಹಸ್ರ ನಾಮಾವಳಿ | ಪಾಲ್ಕುರಿಕಿ ಸೋಮೇಶ್ವರ | 1-00 |
| ೨೧ | ಪಂಪಾಸ್ಥಾನ ವರ್ಣನಂ | ಅಷ್ಟಭಾಷಾ ಚಂದ್ರಕವಿ | 1-00 |
| ೨೨ | ಕನ್ನಡ ಶತಕ ಸಾಹಿತ್ಯ(ಐದು ಶತಕಗಳು) | ........— | 1-00 |
| ೨೩ | ಮಾದೇಶ್ವರ ಸಾಂಗತ್ಯ | ಗುರುಸಿದ್ಧ ಕವಿ | 1-50 |
| ೨೪ | ಕರ್ನಾಟಕ ಪ್ರಾಂತರಚನೆ | ............ | 0-25 |
| ೨೫ | ವೀರಶೈವ ಸಾಹಿತ್ಯ ಮತ್ತು ಇತಿಹಾಸ(ಭಾಗ೨) | ಬ. ಶಿವಮೂರ್ತಿಶಾಸ್ತ್ರೀ | 3-00 |
| ೨೬ | ಕೆಳದಿಯ ರಾಣಿ ಚೆನ್ನಮ್ಮಾಜಿ | | 1-00 |
| ೨೭ | ಬಿದನೂರುಪ್ರಭು ಶಿವಪ್ಪನಾಯಕ(ಭಾಗ೧-೨) | ಬ. ಶಿವಮೂರ್ತಿಶಾಸ್ತ್ರೀ | 2-00 |
| ೨೮ | ವೀರಶೈವ ಸಾಹಿತ್ಯ ಮತ್ತು ಇತಿಹಾಸ [ಭಾಗ ೩] | | 4-00 |
| ೨೯ | ವೀರಶೈವ ಸಾಹಿತ್ಯ ಮತ್ತು ಇತಿಹಾಸ (ಭಾಗ-೪) | | 4-00 |
| ೩೦ | ಕರ್ನಾಟಕ ಸಂದರ್ಶನ | | 5-00 |

* ಈ ಪುಸ್ತಕಗಳು ಮತ್ತೆ ಅಚ್ಚಿನಲ್ಲಿವೆ.

ಪ್ರಕಾಶಕರು :

**ಶರಣ ಸಾಹಿತ್ಯ ಕಾರ್ಯಾಲಯ**



1೮೦, ರಂಗಸ್ವಾಮಿಗುಡಿಬೀದಿ, ಬೆಂಗಳೂರು-2